# ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು
ಅನ್ನಪೂರ್ಣ ಹೆಚ್.

ಮಾರ್ಗದರ್ಶಕರು
ಡಾ. ಅಮರೇಶ ಎನ್.
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ





ಭಾಷಾ ನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ– ೫೮೩ ೨೭೬
೨೦೧೫

# ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸುತ್ತಿರುವ ಮಹಾಪ್ರಬಂಧ)



ಸಂಶೋಧಕರು
**ಅನ್ನಪೂರ್ಣ ಹೆಚ್.**

ಮಾರ್ಗದರ್ಶಕರು
**ಡಾ. ಅಮರೇಶ ಎನ್.**
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾನಿಕಾಯ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೫

## ಮಾರ್ಗದರ್ಶಕರ ದೃಢೀಕರಣ ಪತ್ರ

**ಅನ್ನಪೂರ್ಣ ಹೆಚ್.** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

(ಡಾ. ಅಮರೇಶ ಎನ್.)
ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ದಿನಾಂಕ : 25-11-15
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಅಮರೇಶ ಎನ್.** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**(ಅನ್ನಪೂರ್ಣ ಹೆಚ್.)**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ದಿನಾಂಕ : ೨೫.೧೧.೨೦೧೫
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ : ಒಂದು

## ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

೧.೧. ಪೀಠಿಕೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ಮಹತ್ವ

೧.೪. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ವಿಧಾನ

೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

### ಅಧ್ಯಾಯ : ಒಂದು

# ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

## ೧.೧. ಪೀಠಿಕೆ

ಕಳೆದ ಶತಮಾನವನ್ನು ಪ್ರಪಂಚದ ಪ್ರಮುಖ ರಾಷ್ಟ್ರಗಳಲ್ಲಿ ಆಗಿರುವ ರಾಜಕೀಯ, ಸಾಮಾಜಿಕ, ವೈಜ್ಞಾನಿಕ, ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಪರಿವರ್ತನೆಗಳಿಂದಾಗಿ 'ಪರಿವರ್ತನೆಯ ಯುಗ'ವೆಂದು ಕರೆಯಲಾಗಿದೆ. ಇತರ ಭಾಷೆಗಳಂತೆ ಕನ್ನಡ ಸಾಹಿತ್ಯದ ಮೇಲೆ ಆದ ಪಾಶ್ಚಾತ್ಯ ಪ್ರಭಾವಗಳು, ಅವುಗಳಿಂದಾದ ಪರಿವರ್ತನೆಗಳು, ನಡೆಸಿದ ನವೀನ ಪ್ರಯೋಗಗಳು, ಪ್ರೇರಣೆಗೊಂಡ ಚಳವಳಿಗಳು ಇವುಗಳಿಂದಾಗಿ ಇದೊಂದು ಚಲನಶೀಲ ಕಾಲಖಂಡವಾಗಿದೆ. ಬ್ರಿಟಿಷ್ ಆಳ್ವಿಕೆಯ ಪರಿಣಾಮವಾಗಿ ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿ, ವೈಜ್ಞಾನಿಕ ಮನೋಭಾವಗಳು ಭಾರತೀಯ ಜನಮನದಲ್ಲಿ ಹೊಸ ಕ್ರಾಂತಿಯ ಅಲೆಗಳನ್ನೇ ಹುಟ್ಟಿಸಿದವು. ಇದುವರೆಗೆ ತುಳಿತಕ್ಕೆ ಒಳಗಾದ ದುರ್ಬಲ, ನಿರಕ್ಷರಿ, ನಿರ್ಗತಿಕ ನಿಮ್ನ ವರ್ಗದ ಜನ ಹಾಗೂ ಎಲ್ಲ ವರ್ಗಗಳ ಮಹಿಳೆಯರ ಮೌನ ಸ್ಫೋಟಗೊಂಡು ಉದ್ಭವಿಸಿದ ಚಳವಳಿಗಳಿಂದಾಗಿ ತಮ್ಮ ಅಸ್ಮಿತೆಯನ್ನು ಸ್ಥಾಪಿಸುವುದಕ್ಕಾಗಿ ಎತ್ತಿದ ಧ್ವನಿಗಳ ದಾಖಲೆಯಿಂದಾಗಿ ಸಾಹಿತ್ಯವು ಸಾರ್ವತ್ರಿಕತೆಯನ್ನು ಸಾಧಿಸಿತು. ಹತ್ತೊಂಬತ್ತುನೂರ ಎಪ್ಪತ್ತಾರನೇ ಇಸವಿಯಲ್ಲಿ ಮೈಸೂರಿನಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ದಶಮಾನೋತ್ಸವದ ಅಂಗವಾಗಿ ನಡೆದ ಲೇಖಕಿಯರ ಸಮ್ಮೇಳನ ಮತ್ತು ಬೆಂಗಳೂರಿನಲ್ಲಿ ತಲೆ ಎತ್ತಿದ ಕರ್ನಾಟಕದ ಲೇಖಕಿಯರ ಸಂಘದ ಸ್ಥಾಪನೆ ಈ ಎರಡೂ ಮಹಿಳಾ ಸಾಹಿತ್ಯಕ್ಕೆ ಸಂಬಂಧಪಟ್ಟ ಸಂಘಟನೆಯಲ್ಲಿ ಎರಡು ಮೈಲಿಗಲ್ಲುಗಳು. ನಂತರ ಮೆಲ್ಲನೆ ಆರಂಭವಾದ ಸಮ್ಮೇಳನಗಳು, ವಿಚಾರಗೋಷ್ಠಿಗಳು, ಪ್ರಕಟಣೆಗಳು ಮಹಿಳಾ ಸಾಹಿತ್ಯಕ್ಕೆ ಹೊಸ ಆಯಾಮವನ್ನು ಕೊಟ್ಟವು. ಮಹಿಳಾ ಪ್ರಕಾಶಕರು, ಬಂಡಾಯ-ದಲಿತಸಾಹಿತ್ಯ ಸಂಘಟನೆಗಳು ಮಹಿಳಾ ವಾಙ್ಮಯದ ಹರಹನ್ನು ವಿಸ್ತರಿಸಿದವು. ಹೀಗೆ ಈ ಶತಮಾನದ ಸಾಹಿತ್ಯವು ತನ್ನ ವೈವಿಧ್ಯತೆ, ಸೃಜನಶೀಲತೆ, ಚಲನಶೀಲತೆ, ವೈಚಾರಿಕತೆ ಗಳಿಂದಾಗಿ ತನ್ನ ಆಳ, ಹರಹುಗಳನ್ನು ವಿಸ್ತರಿಸಿಕೊಂಡಿದ್ದರೂ ತನ್ನ ಅನುಕೂಲಕ್ಕಾಗಿ, ಸುಖಕ್ಕಾಗಿ, ಆಧಿಪತ್ಯಕ್ಕಾಗಿ ಪುರುಷ ಸೃಷ್ಟಿಸಿಕೊಂಡ ಸಮಾಜವನ್ನು ಪ್ರತಿಬಿಂಬಿಸಿದ ಪುರುಷದೃಷ್ಟಿಯ ಸೃಷ್ಟಿ, ಮೇಲ್ನೋಟಕ್ಕೆ ಸ್ತ್ರೀಮಯವಾಗಿದ್ದರೂ ಒಳಗಿನದು ಪುರುಷನ ನಾಡಿಮಿಡಿತ.

ಬರಹದ ಪ್ರಕ್ರಿಯೆಯಲ್ಲಿ ಅಭಿವ್ಯಕ್ತಗೊಳ್ಳುವ ಸಂವೇದನೆಯ ಸ್ವರೂಪವು ಬರಹಗಾರರಿಂದ ಬರಹಗಾರರಿಗೆ ಭಿನ್ನವಾಗಿರುತ್ತದೆ. ಅನುಭವಲೋಕದ ಗ್ರಹಿಕೆಗಳು ಆಯಾ ಸಾಮಾಜಿಕ ಪರಿಸರದ ಆವರಣವನ್ನು ಅವಲಂಬಿಸಿರುತ್ತವೆ. ಹಾಗಾಗಿಯೇ ಮಹಿಳೆಯರ ಅನುಭವಗಳು ಪುರುಷಲೋಕದ ಅನುಭವಗಳಿಗಿಂತ ಭಿನ್ನರೂಪ ಪಡೆದಿವೆ. ಇಲ್ಲಿ ಕೌಟುಂಬಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಆರ್ಥಿಕ ಸಂರಚನೆಗಳು ಮಹಿಳೆಯ ಬದುಕನ್ನು ಹೇಗೆ ರೂಪಿಸಿವೆ ಎಂಬುದೂ ಮುಖ್ಯವಾಗಿವೆ. ಈ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ಅಧ್ಯಯನವು ರಿಯಾಯಿತಿ, ಅನುಕಂಪಗಳನ್ನು ನಿರಾಕರಿಸಿ ಮಹಿಳೆಯರ ಕಾವ್ಯದ ವಿಶಿಷ್ಟತೆಗಳನ್ನು, ವಿನ್ಯಾಸದ ವಿಭಿನ್ನ ಆಯಾಮಗಳನ್ನು ಶೋಧಿಸುವ ಪ್ರಯತ್ನದೊಂದಿಗೆ ಪ್ರಸ್ತುತ ಅಧ್ಯಯನ ಸಾಗಿದೆ.

### ೧.೨. ಅಧ್ಯಯನದ ಉದ್ದೇಶ

'ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು' ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲು ಇರುವ ಕಾರಣ ಮತ್ತು ಉದ್ದೇಶಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

#### ಅ. ಮಹಿಳಾಕಾವ್ಯದ ಮೇಲಾದ ಕಾಲ, ದೇಶಗಳ ಪ್ರಭಾವ

ಸಾಹಿತ್ಯದ ಆಶಯ, ವಸ್ತು, ಶೈಲಿ ಮುಂತಾದವುಗಳನ್ನು ಕುರಿತ ತಾತ್ವಿಕತೆಯು ಒಟ್ಟಂದದಲ್ಲಿ ಚಲನಶೀಲವಾಗಿದ್ದರೂ ಮಹಿಳೆಯರಿಗೆ ಸಂಬಂಧಿಸಿದ ಸಂಗತಿಗಳಲ್ಲಿ ಬಹುಮಟ್ಟಿಗೆ ಸ್ಥಗಿತವಾಗಿಯೇ ಇದೆ. ಮಹಿಳಾ ರಚಿತ ಸಾಹಿತ್ಯ ನಿರ್ಲಕ್ಷಿತವಾದರೂ ಅದಕ್ಕೆ ಖಚಿತವಾದ ಐತಿಹಾಸಿಕ ನೆಲೆಗಳಿವೆ. ಮಹಿಳೆಯ ಸಾಹಿತ್ಯಕ ಚಿಂತನೆಗಳಿಗೂ ಆಯಾ ಕಾಲದ ಜೀವಶಾಸ್ತ್ರ, ಮನಃಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ ಮುಂತಾದ ಅಧ್ಯಯನ ಕ್ಷೇತ್ರಗಳಲ್ಲಾಗುವ ಹೊಸಹೊಸ ಚಿಂತನೆಗಳಿಗೂ ಮಹಿಳಾ ಕಾವ್ಯದ ಅಭಿವ್ಯಕ್ತಿಯ ವಿನ್ಯಾಸವನ್ನು ರೂಪಿಸಿರುವ ಅಂಶಗಳ ವಿಶ್ಲೇಷಣೆ ಈ ಅಧ್ಯಯನದ ಒಂದು ಉದ್ದೇಶವಾಗಿದೆ.

#### ಆ. ಸಮಕಾಲೀನತೆ

ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆಯೇ ಹೇಳುವುದಾದರೆ ಪಂಪನ ಕಾಲದಿಂದಲೇ ಅಧಿಕೃತವಾದ ಕಾವ್ಯಗಳು ದೊರೆತಿರುವುದಾದರೂ ಮಹಿಳಾಕಾವ್ಯಕ್ಕೆ ಸಂಬಂಧಿಸಿದಂತೆ ವಚನಕಾರ್ತಿಯರೇ ಆದ್ಯ ಬರಹಗಾರ್ತಿಯರು. ಇಪ್ಪತ್ತನೇ ಶತಮಾನದ ಪ್ರಾರಂಭ ಕಾಲಘಟ್ಟದವರೆಗಿನ ಮಹಿಳಾಕವಿಗಳನ್ನು ಬೆರಳೆಣಿಕೆಯಲ್ಲಿ ಹೇಳಬಹುದು. ಹೀಗಿರುವಾಗ ಕೇವಲ ೫೦ ವರ್ಷಗಳಿಂದೀಚೆಗಿನ ಕನ್ನಡ ಕಾವ್ಯಲೋಕ ಅನೇಕ ಮಹಿಳಾ ಬರಹಗಾರರಿಂದ ಕೂಡಿದೆ. ಕ್ರಾಂತಿಯೋಪಾದಿಯಲ್ಲಿ ಜರುಗುತ್ತಿರುವ ಈ ಬರವಣಿಗೆಯ ತೀವ್ರತೆಯು ಸಮಕಾಲೀನ ಸಾಮಾಜಿಕ, ರಾಜಕೀಯ ಪಲ್ಲಟಗಳನ್ನು ಎದುರುಗೊಳ್ಳುವ ಬಗೆಯನ್ನು ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.

**ಇ. ಅನನ್ಯತೆಯ ಶೋಧ**

ಆಧುನಿಕ ಕನ್ನಡಕಾವ್ಯಕ್ಕೆ ಸಂಬಂಧಿಸಿದಂತೆ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಮುಂತಾಗಿ ಕೆಲವು ಸಾಂಸ್ಕೃತಿಕ ರಾಜಕೀಯ, ಆರ್ಥಿಕ, ಸಾಮಾಜಿಕ, ಅಂಶಗಳ ಕಾರಣ ಪ್ರಭಾವಕ್ಕನುಗುಣವಾಗಿ ಅನೇಕ ಪಂಥಗಳನ್ನು ಹೆಸರಿಸಿಕೊಳ್ಳಲಾಗಿದೆ. ಮಹಿಳೆಯರ ಬರಹಗಳನ್ನೂ ಸಹ ಇಂತಹುದೇ ಪಂಥಗಳಡಿಯಲ್ಲಿ ಸೇರಿಸಲಾಗುತ್ತದೆ. ಆದರೆ ಇದರ ಹೊರತಾಗಿ ಮಹಿಳಾ ಅಭಿವ್ಯಕ್ತಿಯಲ್ಲಿ ವಿಶಿಷ್ಟ ವಿನ್ಯಾಸಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

**ಈ. ಅಧ್ಯಯನಗಳ ಕೊರತೆ**

ಕಾವ್ಯದ ವಸ್ತು-ಆಶಯ-ಧೋರಣೆಗಳಿಗೆ ಸಂಬಂಧಿಸಿದಂತೆ ವಿಭಿನ್ನ ದೃಷ್ಟಿಕೋನಗಳಲ್ಲಿ ಮಹಿಳಾಕಾವ್ಯದ ಅಧ್ಯಯನಗಳು ನಡೆದಿದ್ದರೂ, ಅಭಿವ್ಯಕ್ತಿಯ ವಿನ್ಯಾಸವನ್ನು ಪ್ರಧಾನವಾಗಿಟ್ಟುಕೊಂಡು ಹೆಚ್ಚಿನ ಅಧ್ಯಯನಗಳು ನಡೆಯದಿರುವುದು ಈ ಕ್ಷೇತ್ರದಲ್ಲಿ ಹೆಚ್ಚಿನ ಅಧ್ಯಯನಗಳು ನಡೆಯಬೇಕಾದ ಸಾಧ್ಯತೆಗಳನ್ನು ಸೂಚಿಸುತ್ತದೆ. ಈ ಕೊರತೆಯನ್ನು ತುಂಬುವ ಒಂದು ಚಿಕ್ಕ ಪ್ರಯತ್ನವಾಗಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಉ. ಅಭಿವ್ಯಕ್ತಿಯ ವಿನ್ಯಾಸಗಳಡಿಯಲ್ಲಿಯೇ ನಿರೂಪಣಾಶೈಲಿ, ಬಳಸಿರುವ ತಂತ್ರಗಳು, ಭಾಷಾ ವೈಶಿಷ್ಟ್ಯತೆಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

**೧.೩. ಅಧ್ಯಯನದ ಮಹತ್ವ**

'ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು' ಎಂಬ ವಿಷಯದ ಅಧ್ಯಯನದ ಉದ್ದೇಶಗಳನ್ನು ಗಮನಿಸಿದರೆ ಅದರ ಮಹತ್ವ ಗೃಹೀತವಾಗುತ್ತದೆ.

ಅ. 'ಅಭಿವ್ಯಕ್ತಿ' ಮಾನವರ ಸೃಜನಶೀಲ ಸಾಧನೆ. ಉಳಿದ ದಲಿತ ಪಂಗಡಗಳಂತೆ 'ಮಹಿಳಾಸಾಹಿತ್ಯ' ಕೂಡ ತನ್ನ ಅಸ್ಮಿತೆಯ ಪ್ರಕಟಣೆಗಾಗಿ ಹಕ್ಕೊತ್ತಾಯಗಳನ್ನು ಮಂಡಿಸುತ್ತಲೇ ಇದೆ. ಸಾಹಿತ್ಯವಲಯದಲ್ಲಿ ಪುರುಷದೃಷ್ಟಿಕೋನದ ಪಾರಮ್ಯ ಅಧಿಕವಾಗಿರುವಂತೆಯೇ ವಿಮರ್ಶಾವಲಯದಲ್ಲಿ ಕೂಡ ಮಹಿಳಾಸಾಹಿತ್ಯವನ್ನು ಪ್ರೋತ್ಸಾಹಿಸುವ ಇಲ್ಲವೇ ತಿರಸ್ಕರಿಸುವ ಧೋರಣೆಗಳನ್ನು ಗುರುತಿಸಬಹುದು. ಆದರೆ ಮಹಿಳಾಕವಿಗಳು ಬಯಸುತ್ತಿರುವುದು ತಮ್ಮ ಸಾಹಿತ್ಯ ಸತ್ವದ ದೃಷ್ಟಿಕೋನದಲ್ಲಿ ಮಹಿಳಾಕಾವ್ಯವನ್ನು ಓದುವುದರಿಂದ, ಆ ನಿಟ್ಟಿನಲ್ಲಿರುವ ಅಸಮಾಧಾನಗಳಿಗೆ ಸ್ವಲ್ಪಮಟ್ಟಿನ ಉತ್ತರ ಸಿಗಬಹುದು.

ಆ. ಸಮಾಜದಲ್ಲಾದ ಸ್ಥಿತ್ಯಂತರಗಳು, ಹಾಗೆಯೇ ಸಾಹಿತ್ಯ ವಲಯದಲ್ಲಾದ ಬದಲಾವಣೆಗಳು ಮಹಿಳಾಕಾವ್ಯವನ್ನು ಪ್ರಭಾವಿಸಿರುವ ಅಂಶವನ್ನು ಮನಗಾಣಬಹುದಾಗಿದೆ.

ಇ. ಅಭಿವ್ಯಕ್ತಿಯಲ್ಲಾದ ಪಲ್ಲಟಗಳನ್ನು, ಅವುಗಳ ಸ್ವರೂಪವನ್ನು ಅಧ್ಯಯನ ಮಾಡುವುದರಿಂದ ಈ ನಿಟ್ಟಿನಲ್ಲಿ ನಡೆಯುತ್ತಿರುವ ಚಿಂತನಮಾಲೆಗೆ ಪ್ರಸ್ತುತ ಅಧ್ಯಯನದ ಮೂಲಕ ಹೊಸ ಹೊಸ ಗ್ರಹಿಕೆಗಳನ್ನು ಸೇರಿಸಬಹುದಾಗಿದೆ.

ಈ. ಆಧುನಿಕ ಮಹಿಳಾಕವಿಗಳ ಲೋಕ ವೈವಿಧ್ಯಮಯವಾಗಿದೆ. ಮತ, ಜಾತಿ, ಪಂಥ, ಪ್ರದೇಶ, ವೈಚಾರಿಕ ದೃಷ್ಟಿಕೋನ ಇವೇ ಮೊದಲಾದ ಕಾರಣಗಳಿಂದ ಅಸಂಖ್ಯ ವಿಭಿನ್ನ ದನಿಗಳು ಒಂದೆಡೆ ಸೇರಿವೆ. ಕಣ್ಣಿಗೆ ಹೊಡೆದು ಕಾಣುವ ವೈವಿಧ್ಯತೆಗಳನ್ನಾಧರಿಸಿ ಕೆಲವು ನೆಲೆಗಳ ಮೂಲಕ, ಏಕಕಾಲದಲ್ಲಿ ಕೆಲವು ಪ್ರಾತಿನಿಧಿಕ ದನಿಗಳನ್ನು ಅಧ್ಯಯನ ಮಾಡುವುದರ ಮೂಲಕ ಹೊಸಹೊಸ ಬಗೆಯ ಅಭಿವ್ಯಕ್ತಿ ವಿಧಾನಗಳನ್ನು ಹುಡುಕಿಕೊಳ್ಳಬಹುದು. ಕಾವ್ಯವೆಂಬ ರೂಪಕ್ಕೆ ತನ್ನದೇ ಆದ ವಿಶಿಷ್ಟ ಅಸ್ಮಿತೆ ಇದ್ದು ಅದು ಅಭಿವ್ಯಕ್ತಗೊಳ್ಳುವ ಹಲವು ವಿಧಾನಗಳನ್ನು ಅಧ್ಯಯನ ಮಾಡುವ ಕಾರಣಕ್ಕೆ ಈ ಅಧ್ಯಯನ ಮಹತ್ವದ್ದಾಗಿ ತೋರುತ್ತದೆ.

ಉ. ಆಧುನಿಕ ಮಹಿಳಾಕಾವ್ಯದಲ್ಲಿ ವಿಭಿನ್ನ ಸಂವೇದನೆಗಳಿಗೆ ಬಹುರೂಪಿಯಾದ ಸ್ಪಂದನಶೀಲತೆಯ ಲೋಕವಿದೆ. ಬೇರೆಬೇರೆ ಸಂವೇದನಾ ಆಯಾಮಗಳಿಗೆ ಪ್ರತಿಕ್ರಿಯಿಸುವಾಗ ವೈಚಾರಿಕ ವಿನ್ಯಾಸಗಳು ವಿಭಿನ್ನವಾಗುತ್ತ ಹೋಗಿವೆ. ಶತಶತಮಾನಗಳಿಂದ ಮುಂದುವರಿದುಕೊಂಡು ಬಂದಿರುವ ಮೌಲ್ಯಗಳ ಆಯ್ಕೆ, ಅನುಸರಣೆ, ನಿರಾಕರಣೆಗೆ ಸಂಬಂಧಿಸಿದಂತೆ ಅದೊಂದು ತಲ್ಲಣಗಳ ಲೋಕ - ಹೀಗೆ ಸಂವೇದನೆಗಳ ಬಹುಮುಖಿ ಆಹ್ವಾನ, ಬಹುಮುಖಿ ನಿರಾಕರಣ, ಬಹುಮುಖಿ ರೂಪಾಂತರಗಳನ್ನು ಅಧ್ಯಯನ ಮಾಡುವ ದೃಷ್ಟಿಯಿಂದಲೂ ಈ ಅಧ್ಯಯನ ಮಹತ್ವದ್ದಾಗಿದೆ.

### ೧.೪. ಅಧ್ಯಯನದ ವ್ಯಾಪ್ತಿ

'ಆಧುನಿಕ ಮಹಿಳಾ ಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು' ಎಂಬ ವಿಷಯದ ವ್ಯಾಪ್ತಿ ಮತ್ತು ಮಿತಿಗಳನ್ನು ಕಾಲ, ಕೃತಿ ಹಾಗೂ ಕವಿಗಳು ಎಂಬ ಮೂರು ಮಗ್ಗುಲಿನಿಂದ ಖಚಿತಪಡಿಸಿಕೊಳ್ಳಲಾಗಿದೆ.

**ಕಾಲವ್ಯಾಪ್ತಿ**

ಜಗತ್ತಿನ ಮೊದಲ ಲಾಲಿ ತಾಯಿಯದು ಅಂದ ಮೇಲೆ ಜಗತ್ತಿನ ಮೊದಲ ಸಾಹಿತ್ಯ, ಕಾವ್ಯ, ಕಥೆ ಎಲ್ಲಕ್ಕೂ ಮಹಿಳೆಯೇ ಮೊದಲ ಬರಹಗಾರ್ತಿಯಾಗಿರುತ್ತಾಳೆ. ಪುರುಷಪಾರಮ್ಯ ಪ್ರಪಂಚವು ಮಹಿಳೆಯ ಸೃಜನಶೀಲ ಲೋಕವನ್ನು ಅಡುಗೆಮನೆಗೆ ಸೀಮಿತಗೊಳಿಸಿ ಶತಮಾನಗಳ ಕಾಲ ಬರಹಲೋಕಕ್ಕೆ ಮಹಿಳೆ ಪರಕೀಯಳಾಗಿಯೇ ಉಳಿಯುವಂತೆ ಮಾಡಿದೆ. ಆದರೆ ಸಿಕ್ಕ ಅವಕಾಶದಲ್ಲೇ ಅರಳಿಕೊಳ್ಳುವ ಹೆಣ್ಣಿನ ಗುಣ ಕೆಲವರಲ್ಲಾದರೂ ಪ್ರಕಟಗೊಂಡು ಸಾಹಿತ್ಯಲೋಕದಲ್ಲಿ ಆಗಾಗ ಮಹಿಳೆಯರ ಪ್ರವೇಶವಾಗಿದೆ. ಅಕ್ಕಮಹಾದೇವಿಯಿಂದ ವಿಧ್ಯುಕ್ತವಾಗಿ ಚಾಲನೆಗೊಳ್ಳುವ ಕನ್ನಡ ಮಹಿಳಾಕಾವ್ಯಪರಂಪರೆಯನ್ನು ಅನೇಕ ವಚನಕಾರ್ತಿಯರು, ಸಂಚಿ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಮುಂತಾದವರು ಮುಂದುವರಿಸಿದರು. ಅನಾದರವೇ ಬಹುಮುಖ್ಯ ಕಾರಣವಾಗಿ ಮಹಿಳಾಕಾವ್ಯ ಪ್ರಧಾನಧಾರೆ ಕಾವ್ಯದೊಂದಿಗೆ ಸೆಣಸಲಾರದಾಯಿತು. ಆದರೆ ೨೦ನೇ ಶತಮಾನದಲ್ಲಾದ ಜಾಗತಿಕ ಬದಲಾವಣೆಗಳು, ರಾಜಕೀಯ, ಸಾಮಾಜಿಕ, ಆರ್ಥಿಕ

ಸ್ಥಿತ್ಯಂತರಗಳಿಗೆ ಕಾರಣವಾಗುವ ಮೂಲಕ ಮಹಿಳೆ ಕೂಡ ಕಾವ್ಯಲೋಕದಲ್ಲಿ ತನ್ನ ಅಸ್ಮಿತೆಯ ಛಾಪು ಮೂಡಿಸಿದ್ದಾಳೆ. ಇದರ ವೇಗ ಎಷ್ಟು ತ್ವರಿತವಾಗಿದೆಯೆಂದರೆ ಶತಶತಮಾನಗಳಿಂದ ಆವರಿಸಿದ್ದ ಶೂನ್ಯವನ್ನೆಲ್ಲ ಏಕಕಾಲಕ್ಕೆ ಆವರಿಸಿಕೊಳ್ಳುವ ತವಕದಲ್ಲಿರುವಂತಿದೆ. ಆದ್ದರಿಂದ ೧೯೫೦ರ ದಶಕದಿಂದ ೨೧ನೇ ಶತಮಾನದ ಮೊದಲ ದಶಕದವರೆಗಿನ ಕಾಲವ್ಯಾಪ್ತಿಯನ್ನು ಪ್ರಸ್ತುತ ಅಧ್ಯಯನ ಒಳಗೊಂಡಿದೆ.

**ಕೃತಿವ್ಯಾಪ್ತಿ**

ಆಧುನಿಕ ಮಹಿಳಾಕಾವ್ಯವು ಅತಿ ಕಡಿಮೆ ಅವಧಿಯಲ್ಲಿ ಅತಿ ವಿಸ್ತಾರವಾಗಿ ಬಹುಮುಖಿ ಆಯಾಮಗಳೊಂದಿಗೆ ಮೈದಾಳಿದೆ. ಹಾಗಾಗಿ ಮಹಿಳಾಕಾವ್ಯದ ಸಮಗ್ರ ವಿನ್ಯಾಸವನ್ನು ಅಧ್ಯಯನ ಮಾಡುವುದು ಹಲವು ದೊಡ್ಡ ಯೋಜನೆಗಳಿಂದ ಸಾಧ್ಯ. ಈ ಸೀಮಿತ ಅವಧಿಯಲ್ಲಿ ಅಂಥ ಪ್ರಯತ್ನಕ್ಕೆ ಕೈ ಹಾಕಿದರೆ ಅದು ಕೇವಲ ಚಾರಿತ್ರಿಕ ನೋಟವೋ ಸಾರಾಂಶೀಕರಣವೋ ಆಗುವ ಅಪಾಯವಿದೆ. ಹೀಗಾಗಿ ಕಾಲವನ್ನು ಪ್ರತಿನಿಧಿಸುವ ಕೆಲವು ಪ್ರಾತಿನಿಧಿಕವಾದ ಕವಿತೆಗಳನ್ನು ಅಧ್ಯಯನ ಮಾಡಲಾಗುತ್ತದೆ. ಮಹಾಕಾವ್ಯ–ಕಾವ್ಯ–ನಾಟಕ, ಕಾವ್ಯ–ರೂಪಕ, ಶಿಶು ಸಾಹಿತ್ಯ, ಬಿಡಿಬಿಡಿ ಕವನಗಳು, ಮಾಧ್ಯಮಗಳಲ್ಲಿ ಹವ್ಯಾಸಕ್ಕಾಗಿ ಬರೆಯುವವರ ಬರವಣಿಗೆಯನ್ನು ಈ ಅಧ್ಯಯನ ಒಳಗೊಳ್ಳುವುದಿಲ್ಲ. ಯಾವುದೇ ಕವಯಿತ್ರಿಯ ಸಮಗ್ರ ಕವನ ಸಂಕಲನಗಳನ್ನು ಅಭ್ಯಾಸದ ದೃಷ್ಟಿಯಿಂದ ಅಧ್ಯಯನ ಮಾಡಿದರೂ, ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿರುವ ಪ್ರಾತಿನಿಧಿಕ ಕವನಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಒಬ್ಬ ಕವಿಯ ಒಂದಕ್ಕಿಂತ ಹೆಚ್ಚು ಪದ್ಯಗಳನ್ನು ಅವಶ್ಯಕವೆನಿಸಿದಾಗ ಬಳಸಿಕೊಳ್ಳಲಾಗಿದೆ.

**ಕವಿವ್ಯಾಪ್ತಿ**

ತಿರುಮಲಾಂಬ, ಬೆಳಗೆರೆ ಜಾನಕಮ್ಮ ಒಳಗೊಂಡಂತೆ ಚ. ಸರ್ವಮಂಗಳ, ಮಾಲತಿ ಪಟ್ಟಣಶೆಟ್ಟಿ, ಶಶಿಕಲಾ ವೀರಯ್ಯಸ್ವಾಮಿ, ವೈದೇಹಿ, ಹೇಮಾ ಪಟ್ಟಣಶೆಟ್ಟಿ, ಪ್ರತಿಭಾ ನಂದಕುಮಾರ್, ಸವಿತಾ ನಾಗಭೂಷಣ, ಸುಕನ್ಯಾ ಮಾರುತಿ, ಬಿ.ಟಿ. ಲಲಿತಾನಾಯಕ್, ಎಚ್.ಎಲ್. ಪುಷ್ಪ, ಎಂ.ಆರ್. ಭಗವತಿ, ಮಾಧವಿ ಭಂಡಾರಿ, ಕಮಲಾ ಹೆಮ್ಮಿಗೆ, ಡಿ.ಬಿ. ರಜಿಯಾ, ಕವಿತಾ ರೈ, ಎಚ್.ಎನ್. ರಾಜ್ಯಶ್ರೀ, ಜಿ. ಪೂರ್ಣಿಮಾ, ಆರ್. ತಾರಿಣಿ ಶುಭದಾಯಿನಿ, ರೂಪ ಹಾಸನ, ಜ್ಯೋತಿ ಗುರುಪ್ರಸಾದ್, ಗೀತಾ ಹೆಗಡೆ, ಡಾ. ವಿನಯಾ, ಸಿಂಧು ಹೆಗಡೆ, ಕೆ.ಆರ್. ಪ್ರೇಮಲೀಲಾ, ಇನ್ನೂ ಮುಂತಾದ ಕವಯಿತ್ರಿಯರ ಪ್ರಾತಿನಿಧಿಕವಾದ ಕವನಗಳನ್ನು ಅಧ್ಯಯನ ಮಾಡಲಾಗಿದೆ.

**೧.೫. ಅಧ್ಯಯನದ ವಿಧಾನ**

ಆಧುನಿಕ ಕನ್ನಡಕಾವ್ಯದ ಪ್ರಧಾನಧಾರೆಯ ಪಂಥಗಳಾದ ನವ್ಯ ಮತ್ತು ಬಂಡಾಯ ಚಳವಳಿಗಳ ಕಾಲದಲ್ಲೇ ಮಹಿಳಾಕಾವ್ಯ ಕೂಡ ಉಪಧಾರೆಯಾಗಿ ತನ್ನ ಛಾಪು ಮೂಡಿಸಿತು. ಈ ಕಾಲಘಟ್ಟದಲ್ಲಿ ಒಂದು ರೂಪವನ್ನು ಕೇಂದ್ರೀಕರಿಸಿ ವಸ್ತುವನ್ನು ನಿರಾಕರಿಸಿದರೆ, ಮತ್ತೊಂದು

ರೂಪವನ್ನು ನಿರಾಕರಿಸಿ ವಸ್ತುವನ್ನು ಕೇಂದ್ರೀಕರಿಸಿತು. ಆದರೆ ಮಹಿಳಾಕಾವ್ಯ ಈ ಎರಡರಿಂದಲೂ ಸಮಾನ ಅಂತರ ಕಾಪಾಡಿಕೊಂಡಿದೆ. ಆತ್ಯಂತಿಕವಾಗಿ ಕಾವ್ಯದ ರೂಪ ಮತ್ತು ಆಶಯಗಳು ಅಭಿನ್ನ ಎಂಬ ಎಚ್ಚರದೊಂದಿಗೆ ಈ ಎರಡೂ ಮಾದರಿಗಳಿಗೂ ಆದ್ಯತೆ ನೀಡಿ ಕಾವ್ಯವನ್ನು ವಿಶ್ಲೇಷಿಸುವ ವಿಧಾನವನ್ನು ಅನುಸರಿಸಲಾಗುವುದು. ಆ ಮೂಲಕ ಆಶಯ ಮತ್ತು ರೂಪಗಳ ಪರಸ್ಪರ ಆಂತರಿಕ ಸಂಬಂಧಗಳನ್ನು ಚರ್ಚಿಸಲಾಗುವುದು.

ಕಾವ್ಯದ ಅಭಿವ್ಯಕ್ತಿಯ ತಾತ್ವಿಕ ವಿನ್ಯಾಸಗಳನ್ನು ಶೋಧಿಸುವಾಗ ಭಾಷಿಕ ರಚನೆಯಾದ ಕಾವ್ಯವನ್ನು ಅದರ ವಸ್ತು, ಭಾವ, ಬಳಕೆಯಾದ ರೂಪಕ, ಪ್ರತಿಮೆ, ಉಪಮೆಗಳನ್ನು ಒಳಗೊಂಡು ಕಾವ್ಯದ ತಾತ್ವಿಕತೆಯನ್ನು ಅಂದರೆ ದರ್ಶನ, ಧೋರಣೆ, ತತ್ವ ಹೇಗೆ ಅಂತರ್ಗತವಾಗಿದೆ ಎಂಬುದನ್ನು ಅಧ್ಯಯನ ಮಾಡಲಾಗುವುದು. ಇದು ಪೂರ್ಣ ಪ್ರಮಾಣದಲ್ಲಿ ಪ್ರಾಯೋಗಿಕ ಅಧ್ಯಯನವೂ ಆಗಿರದೆ, ಆಶಯಪ್ರಧಾನ ಅಧ್ಯಯನವೂ ಆಗಿರದೆ ಸಂವೇದನೆಗಳ ನೆಲೆಯಲ್ಲಿ, ಹಾಗೆಯೇ ರಾಚನಿಕ, ಭಾಷಿಕ ನೆಲೆಯಲ್ಲಿ ಅಧ್ಯಯನ ಮಾಡುವ ವಿಧಾನವನ್ನು ಅನುಸರಿಸಲಾಗಿದೆ.

### ೧.೬. ಇದುವರೆಗಿನ ಅಧ್ಯಯನಗಳ ಸಮೀಕ್ಷೆ ಹಾಗೂ ವಿಶ್ಲೇಷಣೆ

'ಆಧುನಿಕ ಮಹಿಳಾಕಾವ್ಯ : ಅಭಿವ್ಯಕ್ತಿಯ ವಿನ್ಯಾಸಗಳು' ಎಂಬ ವಿಷಯದಲ್ಲಿ ಇಲ್ಲಿಯವರೆಗೆ ಯಾವುದೇ ಗಂಭೀರವಾದ ಅಧ್ಯಯನಗಳು ನಡೆದಂತಿಲ್ಲ. ಈ ತಲೆಬರಹದೊಂದಿಗೆ ಯಾವುದೇ ಕೃತಿಗಳೂ ಪ್ರಕಟವಾಗಿಲ್ಲ. ಆಧುನಿಕಕಾವ್ಯ, ಮಹಿಳಾಕಾವ್ಯಗಳ ಕುರಿತು ಬೇರೆಬೇರೆ ದೃಷ್ಟಿಕೋನಗಳಲ್ಲಿ ಅಧ್ಯಯನಗಳು ನಡೆದಿವೆ, ಆದರೆ ಮಹಿಳಾಕಾವ್ಯದ ಅಭಿವ್ಯಕ್ತಿಯ ವಿನ್ಯಾಸಗಳನ್ನು ಕುರಿತು ನೇರವಾದ ಅಧ್ಯಯನಗಳು ನಡೆದಿಲ್ಲ. ಆದರೂ ಮಹಿಳಾಕಾವ್ಯದ ಕುರಿತು ಇರುವ ಕೆಲವು ವಿಮರ್ಶಾ ಕೃತಿಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಕೃತಿಗಳು**

೧. ಕನ್ನಡ ಕಾವ್ಯ ಕಂಡ ಹೆಣ್ಣು, ಡಾ. ಸಿ. ವೀರಣ್ಣ.

೨. ಸ್ತ್ರೀಮತವನುತ್ತರಿಸಲಾಗದೆ?, ಎಂ.ಎಸ್. ಆಶಾದೇವಿ.

೩. ಸರಹದ್ದುಗಳ ಆಚೆ-ಈಚೆ, ಡಾ. ಬಿ.ಎನ್. ಸುಮಿತ್ರಾಬಾಯಿ

೪. ಕಣ್ಣ ಹನಿಗಳೆ ಕಾಣಿಕೆ, ಡಾ. ಎಚ್.ಎಸ್. ರಾಘವೇಂದ್ರರಾವ್.

೫. ಪದ್ಯದ ಮಾತು ಬೇರೆ, ಅಕ್ಷರ ಕೆ.ವಿ. (ಸಂಪಾದನೆ).

೬. ನಡುವೆ ಸುಳಿವ ಆತ್ಮ, ಎಂ.ಎಸ್. ಆಶಾದೇವಿ.

೭. ಕಾವ್ಯ ಪ್ರೀತಿ, ಟಿ.ಪಿ. ಅಶೋಕ.

೮. ಮಹಿಳಾ ಸಾಹಿತ್ಯ : ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ, ಡಾ. ಉಷಾರಾಣಿ ತೆಗ್ಗಿನಮಠ.

೧. ಕನ್ನಡ ಕಾವ್ಯ ಕಂಡ ಹೆಣ್ಣು - ಡಾ. ಸಿ. ವೀರಣ್ಣ

ಇದು ಕನ್ನಡದ ಪ್ರಾಚೀನ ಮತ್ತು ಆಧುನಿಕ ಕಾವ್ಯಗಳಲ್ಲಿರುವ ವಿಪುಲ ವಿವರಗಳ ಮೂಲಕವೇ ಹೆಣ್ಣಿನ ಚಿತ್ರಣವನ್ನು, ಸಮಾಜ ಮತ್ತು ಸಂಸ್ಕೃತಿಯಲ್ಲಿ ಅವಳ ಪ್ರತಿನಿಧೀಕರಣವನ್ನು ಚರ್ಚಿಸಿರುವ ಒಂದು ವಸ್ತುನಿಷ್ಠ ಅಧ್ಯಯನವಾಗಿದೆ. ಸಾಮಾಜಿಕ-ಆರ್ಥಿಕ ವ್ಯವಸ್ಥೆಯಲ್ಲಿ ಮೇಲುಗೈ ಪಡೆದ ಶಕ್ತಿಗಳಿಗೆ ಶರಣಾಗುವ ಅನಿವಾರ್ಯತೆ ಹೆಣ್ಣಿಗೆ ಒದಗಿದರೂ ಅವಳ ಚೈತನ್ಯದ ಮೂಲಸ್ರೋತ್ರ ಜೀವನಪರವೂ ಬಹುಮುಖಿಯೂ ಆಗಿರುವುದು ಕನ್ನಡ ಕಾವ್ಯದಲ್ಲಿ ಸ್ಪಷ್ಟವಾಗಿದೆ. ಪುರುಷಾಧಿಕಾರದ ಚೌಕಟ್ಟಿನೊಳಗಿದ್ದೂ ದಬ್ಬಾಳಿಕೆಯ ವಿರುದ್ಧ ಅವಳು ಪ್ರದರ್ಶಿಸಿರುವ ನಾನಾ ರೂಪದ ಪ್ರತಿರೋಧ ಅದರಲ್ಲಿ ಒಡಮೂಡಿದೆ ಎಂಬುದನ್ನು ಈ ಅಧ್ಯಯನ ಗುರುತಿಸಿದೆ.

ಚಲನಶೀಲ ಸಮಾಜದ ಒಂದು ಕ್ರಿಯಾಶೀಲ ಅಂಗವಾದ ಕಾವ್ಯ, ಸಮಾಜದ ಚಲನೆ ಬೆಳವಣಿಗೆಗಳನ್ನು ಗ್ರಹಿಸಿ, ಅಂತರ್ಗತ ಮಾಡಿಕೊಂಡು ತಾನೂ ಬೆಳೆಯುತ್ತಾ ಹೋಗಿದೆ. ಇದರಲ್ಲಿ ಹೆಣ್ಣನ್ನು ಕುರಿತ ಆಲೋಚನೆಗಳನ್ನು ಹೆಕ್ಕಿ ತೆಗೆದು ವಿಶ್ಲೇಷಿಸುವ ಕಾರ್ಯವನ್ನು ಈ ಕೃತಿ ಮಾಡಿದೆ. ಲೇಖಕರೇ ಹೇಳುವಂತೆ 'ಇಲ್ಲಿ ಅಧ್ಯಯನಕ್ಕೆ ಬಳಸಿಕೊಂಡಿರುವುದೆಲ್ಲ ಅತ್ಯುತ್ತಮ ಕಾವ್ಯ ಎಂದು ಭಾವಿಸಿಲ್ಲ. ಅಭಿವ್ಯಕ್ತಿಯ ಸೋಲು ಗೆಲುವುಗಳು ಇಲ್ಲಿ ಪ್ರಕೃತವಾಗದೆ ಕಾವ್ಯದ ವಿಚಾರವನ್ನಷ್ಟೇ ತೆಗೆದುಕೊಳ್ಳಲಾಗಿದೆ'.[೧] ಹೆಣ್ಣಿನ ಬಗ್ಗೆ ಮೂಡಿರುವ ನಿಲುವು ಅದರ ಸಾಮಾಜಿಕ ಕಾರಣಗಳನ್ನು ಒತ್ತಿಗಿಟ್ಟು ಚಾರಿತ್ರಿಕ ನೋಟವೊಂದರಲ್ಲಿ ಕನ್ನಡಕಾವ್ಯದಲ್ಲಿ ಹೆಣ್ಣಿನ ಪರಿಕಲ್ಪನೆಯನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

'ಇಪ್ಪತ್ತನೆಯ ಶತಮಾನದ ಕನ್ನಡ ಕಾವ್ಯ' ಎಂಬ ಭಾಗದಲ್ಲಿ ಅನೇಕ ಮಹಿಳಾಕವಿಗಳ ಕವನಗಳನ್ನು ಬಳಸಿಕೊಂಡಿದ್ದಾರೆ. ಆದರೆ 'ಹೆಣ್ಣು' ಎಂಬ ಪರಿಕಲ್ಪನೆಯನ್ನು ಕಾವ್ಯದಲ್ಲಿ ಗುರುತಿಸುವ ಅಧ್ಯಯನ ಇದಾಗಿರುವುದರಿಂದ ಇಲ್ಲಿ ಅಭಿವ್ಯಕ್ತಿಯ ಕ್ರಮದ ಬಗ್ಗೆ ಯಾವುದೇ ವಿವರಗಳಿಲ್ಲ. ಆದರೆ 'ಬಂಡಾಯ ಕಾವ್ಯ' ಕಾಲಘಟ್ಟದ ಮಹಿಳಾಕಾವ್ಯದಲ್ಲಿನ ವಿಭಿನ್ನ ಬಗೆಯ ಅಭಿವ್ಯಕ್ತಿಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಲಾಗಿದೆ. ಇದೊಂದು ಆಶಯಪ್ರಧಾನ ಕೃತಿಯಾದ್ದರಿಂದ ಒಟ್ಟಾರೆ ಕನ್ನಡ ಕಾವ್ಯದಲ್ಲಿ 'ಹೆಣ್ಣಿ'ನ ಪರಿಕಲ್ಪನೆ ಮೂಡಿಬಂದಿರುವ ಚಾರಿತ್ರಿಕ ನೋಟ ನೀಡುವಲ್ಲಿ ಸಹಕಾರಿಯಾಗುತ್ತದೆ.

೨. ಸ್ತ್ರೀಮತವನುತ್ತರಿಸಲಾಗದೆ? - ಎಂ.ಎಸ್. ಆಶಾದೇವಿ

ಸಾಹಿತ್ಯ ಮತ್ತು ಸಂಸ್ಕೃತಿ ವಿಮರ್ಶೆಗೆ ಸಂಬಂಧಿಸಿದ ಇಪ್ಪತ್ತೆರಡು ಲೇಖನಗಳನ್ನು ಒಳಗೊಂಡ ಕೃತಿ ಇದು. ಕನ್ನಡ ಸಾಹಿತ್ಯ ಪರಂಪರೆಯ ಆಳವಾದ ಹಾಗೂ ಖಚಿತವಾದ ಗ್ರಹಿಕೆ, ಸಾಹಿತ್ಯ, ಸಿದ್ಧಾಂತಗಳ ಮೇಲಿನ ಹಿಡಿತ ಹಾಗೂ ವಿಮರ್ಶಿಸುತ್ತಿರುವ ಕೃತಿಗಳ ಬಗ್ಗೆ ಬಂದಿರುವ ಚರ್ಚೆಗಳ ಸಮಗ್ರ ಪರಿಚಯದೊಂದಿಗೆ ಪ್ರಬುದ್ಧತೆಯಿಂದ ಕೂಡಿರುವ ಲೇಖನಗಳು ಇದರಲ್ಲಿವೆ. ಒಂದು ಕೃತಿಯನ್ನು ಅದರ ರಚನೆ ಹಾಗೂ ಶಾಬ್ದಿಕ ಬಂಧದ ಆಚೆಗೆ ಹೋಗಿ ವಿಮರ್ಶೆ

ಮಾಡಿದ ಲೇಖನಗಳಿವೆ. ವೈದೇಹಿಯವರ 'ನೋಡಬಾರದು ಚೀಲದೊಳಗನು...' ಕವಿತೆ ಕುರಿತು ಸುದೀರ್ಘವಾದ ವಿಶ್ಲೇಷಣೆ ವಿಮರ್ಶೆ ಇರುವುದನ್ನು ಹೊರತುಪಡಿಸಿದಂತೆ ಉಳಿದ ಲೇಖನಗಳು ನೇರವಾಗಿ ಮಹಿಳಾಕಾವ್ಯಕ್ಕೆ ತಳುಕು ಹಾಕಿಕೊಂಡಿರದಿದ್ದರೂ ಅವುಗಳಲ್ಲಿನ ವಿಮರ್ಶೆ ಒಟ್ಟಾರೆ ಸಾಹಿತ್ಯದ ವಿಭಿನ್ನ ಆಯಾಮಗಳಲ್ಲಿ 'ಹೆಣ್ಣು' ಸಂಸ್ಕೃತಿಯ ಒಳಲೋಕವನ್ನು ತೆರೆದಿಡುವ ಪ್ರಯತ್ನವಿದೆ.

ಹೆಣ್ಣು ತನ್ನ 'ಅಂತರಂಗ'ವನ್ನು ಕಾಪಿಟ್ಟುಕೊಳ್ಳುವ ಬಯಕೆಯನ್ನು ನೈತಿಕ ಹಕ್ಕಾಗಿ ವೈದೇಹಿ ಕವನ ಪ್ರತಿಪಾದಿಸುತ್ತದೆ ಎನ್ನುವಾಗ ಅದರ ನೈತಿಕ ಬಲವೇ ಅದನ್ನೊಂದು ಜೀವನ ಕ್ರಮವಾಗಿ ಪ್ರತಿಪಾದಿಸುವುದರಲ್ಲಿ ನೆರವು ನೀಡುತ್ತದೆ ಎನ್ನುವ ಅಭಿಪ್ರಾಯ ಅವರದು. ಹೆಣ್ಣು ತನ್ನ ಒಳಲೋಕವನ್ನು ಕಾಪಾಡಿಕೊಳ್ಳುವುದು ರೂಪಕಗಳ ಮೂಲಕ. ಬಯಸಿದ ಯಾವುದನ್ನೂ ಗಂಡಿನಂತೆ ಬಿಡುಬೀಸಾಗಿ ಪಡೆಯಲಾರದ, ತನ್ನ ಬಯಕೆಗಳಿಗೂ, ಆಲೋಚನೆಗಳಿಗೂ, ಕನಸುಗಳಿಗೂ ಅಧಿಕೃತತೆ ಪಡೆಯಲಾರದ ಹೆಣ್ಣು ಆ ಎಲ್ಲವುಗಳನ್ನು ರೂಪಕಗಳಾಗಿಯೇ ತನ್ನ ಭಾವಕೋಶದಲ್ಲಿ ಕಾಯ್ದಿಟ್ಟುಕೊಳ್ಳಬೇಕಾದ ಅನಿವಾರ್ಯತೆಯೂ ಇದೆ. ಒಳಲೋಕದಲ್ಲಾದರೂ ಸ್ವತಂತ್ರವಾಗಿರಲು ಹೆಣ್ಣು ಬಯಸುತ್ತಾಳೆ. ಒಂದು ಕವನದ ವಿಶ್ಲೇಷಣೆಯ ಮೂಲಕವೇ ಲೇಖಕಿ ಒಟ್ಟಾರೆ ಮಹಿಳಾಕಾವ್ಯದ ಒಳನೋಟವೊಂದನ್ನು ಕಟ್ಟಿಕೊಟ್ಟಿದ್ದಾರೆ. ವಿಶ್ಲೇಷಣೆ ಒಂದೇ ಕವನದ್ದಾಗಿದ್ದರೂ ಎಳೆಎಳೆಯಾಗಿ ಅದರ ವಿನ್ಯಾಸವನ್ನು ಬಿಡಿಸುತ್ತ ಲೇಖನ ಮಹಿಳಾ ಕಾವ್ಯಾಭಿವ್ಯಕ್ತಿಯ ವಿನ್ಯಾಸದ ಅಧ್ಯಯನಕ್ಕೆ ಮಾರ್ಗಸೂಚಿಯಂತಿದೆ.

**೩. ನಡುವೆ ಸುಳಿವ ಆತ್ಮ – ಎಂ.ಎಸ್. ಆಶಾದೇವಿ**

ಅಪರೂಪದ ಧೀಶಕ್ತಿ, ಅಧ್ಯಯನದಿಂದ ಕೂಡಿದ ಅರಿವು, ಸ್ಪಷ್ಟ ಚಿಂತನೆ, ಆಳವಾದ ವಿಷಯ ಪ್ರವೇಶ ಸಾಮರ್ಥ್ಯ, ಕರಾರುವಕ್ಕಾದ ಪರಿಭಾಷೆಯ ಬಳಕೆ ಮತ್ತು ತರ್ಕಬದ್ಧತೆಯಿಂದ ಕೂಡಿರುವ ಲೇಖನಗಳ ಈ ಕೃತಿ ಕುರಿತು ಬಿ.ಎನ್. ಸುಮಿತ್ರಾಬಾಯಿಯವರ 'ಸಮಕಾಲೀನ ಕನ್ನಡ ಸಾಹಿತ್ಯ ವಿಮರ್ಶೆಗೆ ಅನನ್ಯ ರೀತಿಯ ಅರ್ಥ ವಿನ್ಯಾಸವನ್ನು ಒದಗಿಸುತ್ತಿರುವ ವಿಶಿಷ್ಟ ಸ್ತ್ರೀಧ್ವನಿ'[೨] ಎಂದು ಅಭಿಪ್ರಾಯಿಸುತ್ತಾರೆ.

ಈ ಕೃತಿಯ ಒಳಗಿರುವ ಹಲವಾರು ಲೇಖನಗಳಲ್ಲಿ ಪಿತೃಸಂಸ್ಕೃತಿಯ ಲಿಂಗರಾಜಕಾರಣದ ಅಸಾಧಾರಣ ಒಳವಿನ್ಯಾಸಗಳ ಮೇಲೆ ಬೆಳಕು ಬೀರಿರುವ ಲೇಖಕಿಯ ಪ್ರಕಾರ ಬಿಡುಗಡೆಯ ಹಾದಿ ಎಂದು ಮಹಿಳೆ ಗುರುತಿಸಿಕೊಳ್ಳುವ ತಾತ್ವಿಕತೆ ಕೂಡ ಅದೇ ಲಿಂಗರಾಜಕೀಯದಿಂದ ಹುಟ್ಟಿರುವ ಪ್ರಗತಿಯ ಒಂದು ಲಕ್ಷಣ. ಆದ್ದರಿಂದ ಆಧುನಿಕ ಮಹಿಳೆಯು ಕಂಡುಕೊಳ್ಳುವ ಬಿಡುಗಡೆಯೆಂಬ ಸ್ಥಿತಿ ಹೊರಗೆ ತೋರುವಷ್ಟು ಸ್ವಾತಂತ್ರ್ಯದ ಜಾಗ ಆಗಿರುವುದೇ ಎಂಬ ಅನುಮಾನವನ್ನು ಅವರು ವ್ಯಕ್ತಪಡಿಸುತ್ತಾರೆ. ಇಲ್ಲಿ ಆಧುನಿಕೋತ್ತರ ಚಿಂತನೆಯಾದ ಸ್ತ್ರೀವಾದಕ್ಕೆ ಕಾವ್ಯಮೀಮಾಂಸೆಯ ಸಂಯೋಜನೆ ಆಶಾದೇವಿಯವರ ಮಹತ್ವಾಕಾಂಕ್ಷೆಯಾಗಿದೆ. 'ಸಾಹಿತ್ಯ-ಸ್ತ್ರೀ

ಅಭಿವ್ಯಕ್ತಿ–ಸಹಜತೆ' ಮತ್ತು 'ಮಹಿಳಾ ಪ್ರತಿಭಟನೆಯ ಸಾಂಸ್ಕೃತಿಕ ಚಹರೆಗಳು' ಎಂಬ ಲೇಖನಗಳಲ್ಲಿ ಲೇಖಕಿಯ ವಿಚಾರಗಳ ಮೂಲಭೂತ ತಾತ್ವಿಕ ಚೌಕಟ್ಟನ್ನು ಗ್ರಹಿಸಬಲ್ಲುದಾಗಿದೆ. ಸಾಹಿತ್ಯ–ಕಲೆಗೂ, ಅಭಿವ್ಯಕ್ತಿಗೂ, ಮಹಿಳೆಗೂ ಇರುವ ಸಂಬಂಧ ಚರಿತ್ರೆಯಷ್ಟೇ ದೀರ್ಘವಾದದ್ದು. ಆದರೆ ಸಾಹಿತ್ಯದಲ್ಲಾಗಲಿ, ಕಲೆಯಲ್ಲಾಗಲಿ, ಅಭಿವ್ಯಕ್ತಿಯಲ್ಲಿ 'ಮಾದರಿ' ಎನ್ನಿಸಿಕೊಂಡಿರುವಂಥವೆಲ್ಲ ಪುರುಷ ಪ್ರಧಾನ ವ್ಯವಸ್ಥೆಯಿಂದಲೇ ಸೃಷ್ಟಿಗೊಂಡಿರುವಂಥವು. ಇಂತಹ ಸಾಹಿತ್ಯಕ್ಕೂ, ಕಲೆಗೂ ಹೆಣ್ಣು ನಿರಂತರವಾಗಿ ವಸ್ತುವಾಗಿರುವ ನೆಲೆಗೂ ಅಗಾಧ ವ್ಯತ್ಯಾಸಗಳಿವೆ. ಪಿತೃಸಂಸ್ಕೃತಿಯ ವ್ಯಾಪಕವಾದ ಅಧಿಕಾರರಚನೆಯ ಒಳಗಿನ ಹೆಣ್ಣು ಎಂದರೆ ಗಂಡಿನ 'ನಿರೀಕ್ಷಿತ', ಗಂಡಿನ ನೋಟದ, ಗಂಡಿನ ಕಣ್ಣೆಲೆಯ, ಗಂಡಿನ 'ಆದರ್ಶ'ಪ್ರಾಯ ವಸ್ತು. ಈ ರೀತಿ ಅಧಿಕಾರ ಕೇಂದ್ರದಿಂದ ನಿರ್ದೇಶಿಸಲ್ಪಟ್ಟವಳ ಹಾಗೆ ಅವಳು ತನ್ನ ಪಾತ್ರವನ್ನು ಅಭಿನಯಿಸುತ್ತಾ ಹೋಗಬೇಕಾಗಿರುವ ಸ್ಥಿತಿ ಎಲ್ಲ ಕಾಲಕ್ಕೂ ಎಲ್ಲ ಪರಿಸ್ಥಿತಿಗಳಲ್ಲೂ ಇತ್ತೆ ಎಂಬ ಪ್ರಶ್ನೆ ಏಳುತ್ತದೆ.

ಪ್ರಗತಿ–ವಿಗತಿಗಳ ನಡುವಿರುವ ಇಂಥದೇ ಸಂಕೀರ್ಣ ಸ್ವರವಿನ್ಯಾಸಗಳು 'ಸಮಾನ ಪಾತಳಿಯ ಹುಡುಕಾಟ'ವನ್ನು ಉಳಿಸಿಬಿಡುವ ಬಗೆಗಳನ್ನು ಮಹಿಳಾ ಪ್ರತಿರೋಧದ, ಪ್ರತಿಭಟನೆಯ ಸಾಂಸ್ಕೃತಿಕ ಮುಖಗಳನ್ನು ಪರೀಕ್ಷಿಸುವ ಮೂಲಕ ಗುರುತಿಸಿಕೊಡುವ ಪ್ರಯತ್ನ ಇಲ್ಲಿದೆ. ಸುಮಿತ್ರಾಬಾಯಿಯವರು 'ಲಿಂಗರಾಜಕಾರಣದ ಕಾರ್ಯ ಮಾದರಿಗಳನ್ನು ಅಧ್ಯಯನ ಮಾಡಲು 'ಸ್ತ್ರೀ ಭಾಷೆ' ಮತ್ತು 'ಸ್ತ್ರೀ ಸಮಯ' ಎಂಬ ಎರಡು ತಾತ್ವಿಕ ನೆಲೆಗಳನ್ನೇ ಪ್ರಮುಖವಾಗಿ ಚರ್ಚಿಸುವ ಹೊಸ ಅಧ್ಯಯನವೊಂದನ್ನು ಮುಂದೆ ಸಾಧಿಸುವ ಸಾಮರ್ಥ್ಯವನ್ನು ನಿಸ್ಸಂದಿಗ್ಧವಾಗಿ ಇಲ್ಲಿನ ಅವರ ಲೇಖನಗಳು ಸೂಚಿಸಬಲ್ಲವು'[೩] ಎನ್ನುತ್ತಾರೆ.

'ಸವಿತಾ ನಾಗಭೂಷಣ : ಬದುಕಿನ ಧಾರಣಶಕ್ತಿಯ ಹುಡುಕಾಟ' ಮತ್ತು 'ಪ್ರತಿಭಾ ನಂದಕುಮಾರ್ : ಜೀವಫಲದ ವ್ಯಾಖ್ಯಾನ' ಲೇಖನಗಳಲ್ಲಿ ಸವಿತಾ ನಾಗಭೂಷಣ ಹಾಗೂ ಪ್ರತಿಭಾ ಕಾವ್ಯದ ಅನೇಕ ಒಳವಿನ್ಯಾಸಗಳನ್ನು ಬಿಡಿಸಿದ್ದಾರೆ. ಸವಿತಾ ಮೂಲತಃ ಲಯಗಳ ಹುಡುಕಾಟದ ಕವಿ. ಇದನ್ನು ಸಾಂಗತ್ಯದ ಹುಡುಕಾಟವೆಂದೂ ಕರೆಯಬಹುದು. ಈ ಲಯ, ಸಾಂಗತ್ಯವೆನ್ನುವುದು ಸಿದ್ಧಸ್ಥಿತಿಯಲ್ಲ. ಅದೊಂದು ಸಾಧಿಸಿಕೊಳ್ಳಬೇಕಾದ ಸಂದರ್ಭ ಮನಸ್ಥಿತಿ. ಈ ಹುಡುಕಾಟವೆನ್ನುವುದು ಸ್ಥಾಯಿಯೆನ್ನುವಂತೆ ನಿರಂತರವಾಗಿ ನಡೆದಿದೆ. ಒಟ್ಟಂದದಲ್ಲಿ ಸವಿತಾ ಅಪ್ಪಟ ಮಾನವೀಯ ನೆಲೆಯನ್ನು ನಂಬಿದವರು, ಬಯಸುವವರು, ವಾತ್ಸಲ್ಯ, ಅಂತಃಕರಣ, ತಾಯ್ತನ ಈ ಎಲ್ಲ ಸ್ತ್ರೀ ವಿಶಿಷ್ಟ ಅನುಭವಗಳ ವಲಯವನ್ನು ಆಧರಿಸಿಯೇ, ಪ್ರಕೃತಿಯನ್ನು ಒಳಗೊಂಡು ಇನ್ನೂ ಹೆಚ್ಚು ಶಕ್ತವಾದ, ಶ್ರೀಮಂತವಾದ, ಬದುಕಲು ಸಹನೀಯವಾದ, ಪ್ರೀತಿಸಲು ಸಾಧ್ಯವಾಗಬಹುದಾದ ಬದುಕನ್ನು ಕಟ್ಟುವುದರಲ್ಲಿ ನಿರತರಾದ ಕವಿ ಇವರು ಎನ್ನುವಾಗ ಸವಿತಾ ಕಾವ್ಯದ ಒಟ್ಟಾರೆ ಸ್ವರೂಪವನ್ನು ಕೆಲವು ಮಾತುಗಳಲ್ಲಿ ಹಿಡಿದಿಡುವ ಪ್ರಯತ್ನವಿದೆ.

ಪ್ರತಿಭಾ ಅವರ ಕಾವ್ಯ ಕುರಿತು ಬರೆಯುವಾಗ ಚರಿತ್ರೆಯ ಸ್ತ್ರೀಲೋಕದ ಚಹರೆಗಳನ್ನೂ ಸಮಕಾಲೀನ ಹೆಣ್ಣಿನ ಚಹರೆಯನ್ನೂ ಮುಖಾಮುಖಿಯಾಗಿಸುವುದರಲ್ಲಿ ಇವರಿಗೆ ಅಪಾರ

ಆಸಕ್ತಿಯಿದೆ. ಚರಿತ್ರೆಯ ಹಿನ್ನೆಲೆ ಮತ್ತು ವರ್ತಮಾನ ತುರ್ತು ಎರಡೂ ಇವರ ಕಾವ್ಯದಲ್ಲಿ ಹಾಸುಹೊಕ್ಕಾಗಿವೆ. ಚರಿತ್ರೆಗೂ ದಕ್ಕದ ವರ್ತಮಾನಕ್ಕೂ ಮಿಕ್ಕಿದ ಹೆಣ್ಣಿನ ನಿಗೂಢ ಮನೋಲೋಕಗಳನ್ನು ಅನಾವರಣಗೊಳಿಸುವ ಹಂಬಲವನ್ನು ಅವರ ಕಾವ್ಯದಲ್ಲಿ ಗುರುತಿಸಿದ್ದಾರೆ. ಪ್ರತಿಭಾ ಕಾವ್ಯವನ್ನು ಸಮಗ್ರವಾಗಿ ವ್ಯಕ್ತಿಕೇಂದ್ರಿತ ಎಂದಾಗಲೀ ಸಮುದಾಯದ ಒಂದು ವರ್ಗದ ಪ್ರತಿನಿಧಿ ಎಂದು ವರ್ಗೀಕರಿಸುವುದರಲ್ಲಾಗಲೀ ಗುರುತಿಸುವುದು ಸಾಧ್ಯವಿಲ್ಲ ಎಂಬುದು ಇವರ ಅಭಿಪ್ರಾಯವಾಗಿದೆ. ಹಾಗೆಯೇ ಭಿನ್ನ ಪರಿಸರದ ವ್ಯತ್ಯಾಸದಾಚೆಗೂ ಸಮಾನವಾದ 'ಹೆಣ್ಣಿನ ವ್ಯಕ್ತಿತ್ವ ವಿನ್ಯಾಸ'ವೊಂದನ್ನು, ಅದರ ಚಹರೆಗಳನ್ನು, ಆ ಚಹರೆ ರೂಪುಗೊಳ್ಳುವುದರ ಪ್ರಕ್ರಿಯೆಯನ್ನು ಇವರ ಕಾವ್ಯದಲ್ಲಿ ನಾವು ಗುರುತಿಸಬಹುದು. ಹೆಣ್ಣಿಗೆ ಸ್ಥಳ ನಿರ್ಮಾಣ-ಅವಕಾಶ ರಚನೆ ಇವರ ಮೂಲಗುರಿ ಎನಿಸುತ್ತದೆ. ಭಾಷೆಯು ಕಾವ್ಯವಾಗುವ ಪವಾಡವನ್ನು ನಿಶ್ಚಿಂತೆಯಿಂದ ನಂಬಿರುವ ನಿರಾಳತೆಯಲ್ಲಿ ಪ್ರತಿಭಾ ಬರೆಯುತ್ತಾರೆ ಎನ್ನುವಾಗ ಕಾವ್ಯಶಿಲ್ಪದ ಕಸುಬುದಾರಿಕೆಯಲ್ಲಿ ಪ್ರತಿಭಾ ಅವರಿಗೆ ಹೆಚ್ಚಿನ ಒತ್ತು ಇಲ್ಲ ಎನ್ನುವುದು ಸೂಚ್ಯವಾಗಿದೆಯಾದರೂ, ಇದೇ ಒಂದು ವಿನ್ಯಾಸವನ್ನು ವೈಶಿಷ್ಟ್ಯವನ್ನು ತೋರಿಸಲೂಬಹುದು.

**೪. ಸರಹದ್ದುಗಳ ಆಚೆ-ಈಚೆ - ಡಾ. ಬಿ.ಎನ್. ಸುಮಿತ್ರಾಬಾಯಿ**

ನಾಲ್ಕು ಭಾಗಗಳಿರುವ ಹದಿನಾಲ್ಕು ಲೇಖನಗಳನ್ನು ಹೊಂದಿರುವ ಈ ಕೃತಿಯಲ್ಲಿ ಲೇಖಕಿಯು ಸಾಹಿತ್ಯಕ್ಕೂ, ರಾಜಕೀಯಕ್ಕೂ, ಸಂಸ್ಕೃತಿಗೂ ಇರುವ ಸಂಕೀರ್ಣ ಸಂಬಂಧದ ಬಗ್ಗೆ ಅನೇಕ ಒಳನೋಟಗಳನ್ನು ಕೊಟ್ಟಿರುವುದರಿಂದ ಇದೊಂದು ಸಂಸ್ಕೃತಿ ಅಧ್ಯಯನದ ಕೃತಿಯಂತೆ ಭಾಸವಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದ ಬಗ್ಗೆ ಬರೆಯುವಾಗ ಮಹಿಳೆಗೂ, ಇತಿಹಾಸಕ್ಕೂ ಇರುವ ವಿಪರ್ಯಾಸಾತ್ಮಕ ನಂಟಿನ ಬಗ್ಗೆ ಮೂಲಭೂತ ಪ್ರಶ್ನೆಗಳನ್ನು ಎತ್ತಿದ್ದಾರೆ.

ಸ್ತ್ರೀವಾದಿ ಮೀಮಾಂಸೆಯ ಬಹುಮುಖಿ ನೆಲೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿರುವ ಅವರು ಮೀಮಾಂಸೆಯನ್ನು ಬಳಸಿಕೊಳ್ಳುವಾಗ ಈ ನಾಡಿನ ಸಾಂಸ್ಕೃತಿಕ ರಾಜಕೀಯ ಸನ್ನಿವೇಶವನ್ನು ತಮ್ಮ ಅಧ್ಯಯನದ ಕೇಂದ್ರವನ್ನಾಗಿ ಇಟ್ಟುಕೊಂಡೇ ತಮ್ಮ ವಿಮರ್ಶಾ ಮಾನದಂಡಗಳನ್ನಾಗಿ ರೂಪಿಸಿಕೊಳ್ಳುವುದನ್ನು ಕಾಣಬಹುದು. ದು. ಸರಸ್ವತಿಯವರ 'ಜೀವ ಸಂಪಿಗೆ ಕಂಪು' ಸಂಕಲನಕ್ಕೆ ಬರೆದ ಮುನ್ನುಡಿ ಲೇಖನದಲ್ಲಿ ಸರಸ್ವತಿ ತುಂಬ ಅಂತರ್ಮುಖಿಯಾದ ನೆಲೆಯಲ್ಲಿ ಬದುಕಿನ ಎಲ್ಲಾ ಮಾರ್ದವತೆ ಹಾಗೂ ಕ್ರೂರತೆಗಳ ಅನುಭವಗಳಿಗೆ ತನ್ನ ಮನದ ಸ್ಪಂದನ, ತಳಮಳಗಳನ್ನೇ ತುಂಬು ಪ್ರಾಮಾಣಿಕತೆಯಿಂದ ದಾಖಲಿಸುವ 'ಆತ್ಮನಿಷ್ಠ' ಕವಿಯಾದರೂ ರೂಢಿಗತ ಪ್ರಕ್ರಿಯೆಗಳನ್ನು ನಂಬಿಕೆಗಳನ್ನು ತಮ್ಮದೇ ಆದ ರೀತಿಯಲ್ಲಿ ಮುರಿಯುವಂಥ ಹೊಸ ಚಿಂತನೆಗೆ ಪ್ರೇರಿಸುವಂಥ ರೂಪಕಗಳನ್ನು ಚೆಲುವಾಗಿ, ಆದರೆ ಸರಳ, ಸಹಜತೆಯಲ್ಲಿ ಕಟ್ಟಬಲ್ಲರು ಎನ್ನುತ್ತಾರೆ."[೯] ಇಲ್ಲಿ ಸರಳವಾಗಿರುವುದರ ಮೂಲಕವೇ ಸಂಕೀರ್ಣತೆಯನ್ನು ಬಿಚ್ಚಿಡುವ ವಿನ್ಯಾಸವೊಂದು ಸೂಚ್ಯವಾಗಿದೆ.

ಮಮತಾ ಜಿ. ಸಾಗರ ಅವರ 'ಮಹಿಳಾ ವಿಷಯ' ಕೃತಿಯ ಕುರಿತು ಬರೆದಿರುವ ಲೇಖನದಲ್ಲಿ ಕನ್ನಡದಲ್ಲಿ ಹೆಚ್ಚಾಗಿ ಅಧ್ಯಯನ ನಡೆದಿಲ್ಲದ ಮಹಿಳಾಭಿವ್ಯಕ್ತಿಯ ಭಾಷೆಯನ್ನು

ಕುರಿತು ಚರ್ಚಿಸುವ 'ಸಮಕಾಲೀನ ಮಹಿಳಾ ಕಾವ್ಯ ಮತ್ತು ಭಾಷೆ' ಎಂಬ ಲೇಖನವನ್ನು ವಿಶೇಷವಾಗಿ ಉದ್ಧರಿಸುತ್ತಾರೆ. ಅದಕ್ಕೆ ಅವರು ನೀಡುವ ವಿವರಣೆಯೆಂದರೆ 'ಈ ಲೇಖನದಲ್ಲಿ ಮಹಿಳಾ ಅಭಿವ್ಯಕ್ತಿಯ ಚರ್ಚೆಯನ್ನು ಎರಡು ಮಗ್ಗುಲುಗಳಿಂದ ನಡೆಸಲಾಗಿದೆ. ಮೊದಲನೆಯದು ಮಹಿಳೆಯರು ಬರೆದು ಹೊರತಂದ ಕವಿತಾ ಸಂಕಲನಗಳಿಗೆ ಪುರುಷರು ಬರೆದಿರುವ ಮುನ್ನುಡಿಗಳ ವಿಶ್ಲೇಷಣೆ. ಎರಡನೆಯದು ಈ ಪುರುಷರು ಮಹಿಳಾಕಾವ್ಯದ ಬಗ್ಗೆ ಕೊಟ್ಟಿರುವ ತೀರ್ಪುಗಳಿಗೆ ತದ್ವಿರುದ್ಧವಾಗಿ ಮಹಿಳಾಕವಿಗಳ ಕಾವ್ಯದ ಭಾಷೆಯೇ ಹೇಳುವ ಸತ್ಯವೇನು ಎಂಬುದರ ಪ್ರತಿಪಾದನೆ, ಮಹಿಳಾಕಾವ್ಯ ಹಾಗೂ ಭಾಷೆಯನ್ನು ಕುರಿತು ಚರ್ಚಿಸುವ ಸಂದರ್ಭದಲ್ಲಿ ಮುನ್ನುಡಿಕಾರರು ಪುರುಷರ ದೃಷ್ಟಿಯ 'ಸ್ತ್ರೀತ್ವ'ದ ಅಂಶಗಳನ್ನೇ ಮಹಿಳಾಕಾವ್ಯದಲ್ಲೂ ಕಾಣಲು ಯತ್ನಿಸಿದ್ದಾರೆ. ಆ ಮೂಲಕ ಮಹಿಳಾಕಾವ್ಯದ ಇತರ ಆಶಯ ಆಯಾಮಗಳನ್ನೆಲ್ಲ ಹತ್ತಿಕ್ಕಿ ನಿರ್ದಿಷ್ಟ ಸಾಂಸ್ಕೃತಿಕ ರಚನೆಯಾಗಿರುವ 'ಸ್ತ್ರೀತ್ವ'ದ ಚೌಕಟ್ಟಿನೊಳಗೇ ಮಹಿಳೆಯರ ಅಭಿವ್ಯಕ್ತಿಯನ್ನೂ ಹೊಂದಿಸಲು ಹವಣಿಸುತ್ತಾರೆ. ಸ್ತ್ರೀ ಹೃದಯ, ಸ್ತ್ರೀ ಸಹಜ ಅಭಿವ್ಯಕ್ತಿ, ಅಚ್ಚ ಸ್ತ್ರೀ ಪ್ರಜ್ಞೆ, ಸ್ತ್ರೀತ್ವದ ಗುಣ, ಸ್ತ್ರೀ ವಿಶಿಷ್ಟ ಗುಣಗಳು, ಫೆಮಿನಿಸ್ಟ್ ಆಗದೆ ಫೆಮಿನೈನ್ ಆಗಿರುವುದು ಮುಂತಾದ ಗಂಡಿನ ಪರಿಭಾಷೆಗಳನ್ನು ಮಹಿಳಾಕಾವ್ಯ ಅವುಗಳ ಚೌಕಟ್ಟುಗಳನ್ನು ಒಡೆಯುತ್ತಾ ತನ್ನ ಅನುಭವ ಗಂಡಿನದಕ್ಕಿಂತ ಭಿನ್ನ ಎಂಬುದನ್ನು ಗುರುತಿಸಿರುವ ಪರಿಯು ಮಹಿಳಾಕಾವ್ಯದ ಕುರಿತು ಅನೇಕ ಒಳನೋಟಗಳನ್ನು ನೀಡುತ್ತದೆ.

**೫. ಕಣ್ಣ ಹನಿಗಳೆ ಕಾಣಿಕೆ – ಡಾ. ಎಚ್.ಎಸ್. ರಾಘವೇಂದ್ರರಾವ್**

ಮಹಿಳೆ ಬದುಕು, ಭಾಷೆ ಮತ್ತು ಅಭಿವ್ಯಕ್ತಿ ಕುರಿತು ಈ ಕೃತಿಯ ಬೆನ್ನುಡಿಯಲ್ಲಿ ಲೇಖಕರು 'ಹೆಣ್ತನದ ನಸುಲೇಪ ಇಲ್ಲದವನು ಸಾಹಿತಿಯಾಗಲು ಸಾಧ್ಯವೇ ಇಲ್ಲ. ಹಾಗೆಯೇ ಇದು ಎಲ್ಲ ಹೆಂಗಸರಿಗೂ ಸಾಧ್ಯವಾಗದೆಯೂ ಹೋಗಬಹುದು. ಹೆಂಗಸರು ರೂಪಿಸುವ ತಾತ್ವಿಕತೆಯಲ್ಲಿ ಬೇರೆ ಯಾರದೇ ದನಿಯನ್ನು ಮೂಕವಾಗಿಸುವ ಪ್ರಯತ್ನ ಇರುವುದಿಲ್ಲ. ಗಂಡು ಮತ್ತು ಹೆಣ್ಣುಗಳನ್ನು ಪರಸ್ಪರ ಸೇಡು ತೀರಿಸಿಕೊಳ್ಳಲು ಸದಾ ಸನ್ನದ್ಧರಾಗಿರುವ ಶತ್ರುಗಳೆಂದು ತಿಳಿಯುವುದು ಅಗತ್ಯವಲ್ಲ. ಅಂತಹ ಅಜೆಂಡಾವನ್ನು ಹೊಂದಿರುವ ಬರವಣಿಗೆಯು ಬರವಣಿಗೆಯೇ ಅಲ್ಲ'[೫] ಎಂದು ಉಲ್ಲೇಖಿಸುತ್ತಾರೆ. ಒಟ್ಟಾರೆಯಾಗಿ ಕಾವ್ಯ ಎನ್ನುವುದರೊಳಗೊಂದು ಗುಂಪುಗಾರಿಕೆ ಯನ್ನು ಅವರು ನಿರಾಕರಿಸುತ್ತಾರೆ. ಮಹಿಳಾಸಾಹಿತ್ಯವನ್ನು ಕುರಿತು ವಿಭಿನ್ನ ಆಯಾಮಗಳ ದೃಷ್ಟಿಕೋನವನ್ನು ಲೇಖಕರು ತೆರೆದಿಡುತ್ತಾರೆ. 'ಲೇಖಕಿಯರ ಬರವಣಿಗೆಯಲ್ಲಿ ವಿಶಿಷ್ಟವಾದ ಹೆಣ್ಣುತನವನ್ನು ನಿರೀಕ್ಷಿಸುವುದು ಪುರುಷಪ್ರಧಾನ ಸಂಸ್ಕೃತಿಯ ಒತ್ತಡಗಳಿಂದಲೇ ಇರಬಹುದು. ಪುರುಷರಚಿತ ಸಾಹಿತ್ಯದಲ್ಲಿ 'ಗಂಡುತನ'ದ ವಿಶಿಷ್ಟ ಅಭಿವ್ಯಕ್ತಿ ಇದೆಯೇ ಎಂಬ ಪ್ರಶ್ನೆ ಯಾರೂ ಕೇಳುವುದಿಲ್ಲ.' 'ಪತಿವ್ರತೆ'ಗೆ ಸಂವಾದಿಯಾದ ಪುರುಷಸೂಚಕ ಪದ ಸೃಷ್ಟಿಸುವ ಅಗತ್ಯವೇ ನಮಗೆ ಕಂಡಿಲ್ಲ. 'ಅತ್ತೆಕಾಟ' ಪದದ ಹಾಗೆ 'ಮಾವನ ಕಾಟ' ಪದ ಬಳಕೆ ಏಕಿಲ್ಲ'[೬] ಎನ್ನುವ ಪ್ರಶ್ನೆಗಳನ್ನು ಎತ್ತುವ ಮೂಲಕ ಮಹಿಳೆಯರ ಕುರಿತು ಎಲ್ಲೋ ಅಪಚಾರವಾಗಿದೆ, ಆಗುತ್ತಿದೆ

ಎಂದು ತಳಮಳಗೊಳ್ಳುತ್ತಾರೆ. ಇದನ್ನು ಮಹಿಳಾಕಾವ್ಯವನ್ನು ಗುರುತಿಸಿದ ಬಗೆಯಲ್ಲೂ ಗುರುತಿಸಬಹುದಾಗಿದೆ.

'ನಾವೆಲ್ಲರೂ ಒಂದು, ನಾವು ಮಹಿಳೆಯರು' ಎಂಬ ನಿಲುವು, 'ಪುರುಷರೆಲ್ಲರೂ ನಮ್ಮ ಶತ್ರುಗಳು ಎಂಬ ವಾದಕ್ಕಿಂತ ಹೆಚ್ಚು ಅಪಾಯಕಾರಿಯಾಗಬಹುದು. ಭಿನ್ನಾಭಿಪ್ರಾಯಗಳು ಚರ್ಚೆ, ಹೋರಾಟಗಳಿಂದ ಪರಿಹಾರವಾಗುತ್ತವೆ' ಎಂಬುದು ಅವರ ಪ್ರಬಲವಾದ ನಂಬಿಕೆಯ ಅಭಿಪ್ರಾಯ.

ಇಪ್ಪತ್ತೇಳು ಲೇಖನಗಳನ್ನೊಳಗೊಂಡ ಈ ಕೃತಿಯಲ್ಲಿ ಎಲ್ಲ ಲೇಖನಗಳೂ ಮಹಿಳಾ ಸಾಹಿತ್ಯಕ್ಕೆ ಸಂಬಂಧಿಸಿದವುಗಳೇ ಆಗಿವೆ. ಅದರಲ್ಲೂ ಮಹಿಳಾಕಾವ್ಯಕ್ಕೆ ಸಂಬಂಧಿಸಿದಂತೆ ವೈವಿಧ್ಯಮಯ ಒಳನೋಟಗಳನ್ನು ಕೃತಿ ಒದಗಿಸುತ್ತದೆ. ಮಹಿಳೆಯರ ಅಂತರಂಗದ ಆಳದಿಂದ, ಅವಳ ನಿಯಂತ್ರಣವೂ ಇಲ್ಲದಂತೆ ಚಿಮ್ಮಿ ಬರುವ ಪ್ರತಿಮೆಗಳು ಹಾಗೂ ರಚನೆಗಳು ತಮ್ಮದೇ ಆದ ಭಾಷೆಯನ್ನು ಅರ್ಥವಂತಿಕೆಯನ್ನು ಹೊಂದಿರುತ್ತವೆ ಎಂದು ಗುರುತಿಸಿದ್ದಾರೆ. ಮಹಿಳಾ ಕಾವ್ಯದ ಬರವಣಿಗೆಯ ಭಿನ್ನ ಮಾದರಿಗಳನ್ನು ಕುರಿತು ಹೇಳುವಾಗ ಕೆಳಕಂಡ ಮುಖ್ಯ ಮಾದರಿಗಳನ್ನು ಗುರುತಿಸಿದ್ದಾರೆ.

೧. ಅನುಭವಲೋಕ ಮತ್ತು ಧೋರಣೆಗಳ ದೃಷ್ಟಿಯಿಂದ ಸ್ತ್ರೀಪರವಾದ ನೆಲೆಗಳನ್ನು ಉಳಿಸಿಕೊಂಡರೂ ರೂಪದಲ್ಲಿ ಸ್ತ್ರೀ ವಿಶಿಷ್ಟವಾದ ಆಕೃತಿಗಳ ಬದಲಾಗಿ, ಪುರುಷರು ಬರೆಯುವ ಬಗೆಯಲ್ಲಿಯೇ ಯಶಸ್ವಿಯಾಗುವ ಆಸಕ್ತಿ ಮತ್ತು ಪ್ರತಿಭೆಗಳನ್ನು ಹೊಂದಿರುವುದು. ಇದಕ್ಕೆ ಕವಿತೆಯಲ್ಲಿ 'ಸರ್ವಮಂಗಳ' ಮಾದರಿಯನ್ನು ಉದಾಹರಿಸುತ್ತಾರೆ.

೨. ಹೆಣ್ಣುತನದ ವಿಶಿಷ್ಟ ನೆಲೆಗಳ ವೈಭವೀಕರಣ – ಉದಾಹರಣೆಗೆ ಹೇಮಾ ಪಟ್ಟಣಶೆಟ್ಟಿಯವರ 'ವಿರಹೋತ್ಸವ'.

೩. ಹೆಣ್ಣಿನ ಬದುಕಿನ 'ಸಾರ್ಥಕ' ಕ್ಷಣಗಳನ್ನು ಹಾಗೆಯೇ ಅದರಲ್ಲಿ ಮಡುಗಟ್ಟಿರುವ ಒಂಟಿತನ, ವಿಷಾದಗಳನ್ನು ತನಗೆ ವಿಶಿಷ್ಟವಾದ ನುಡಿಗಟ್ಟಿನಲ್ಲಿ ಹಿಡಿದಿಡುವುದು – ಉದಾಹರಣೆಗೆ ಪ್ರತಿಭಾ ನಂದಕುಮಾರ್ ಕವಿತೆಗಳು.

೪. ಮನುಷ್ಯ ಸಹಜವಾದ ಆದರ್ಶವಾದ, ಸಂವೇದನಾಶೀಲತೆ ಹಾಗೂ ಪ್ರೀತಿಗಳನ್ನು ಎತ್ತಿ ಹಿಡಿಯುವಿಕೆ – ಉದಾಹರಣೆಗೆ ಸವಿತಾ ನಾಗಭೂಷಣ ಅವರ ಕವಿತೆಗಳು.

೫. ಮಹಿಳೆಯರ ನೋವನ್ನು ಅದರ ಐತಿಹಾಸಿಕ ಹಾಗೂ ಪೌರಾಣಿಕ ಆಯಾಮಗಳಲ್ಲಿ ಇಟ್ಟು ಗ್ರಹಿಸುವುದು. ಇದಕ್ಕೆ ಸ. ಉಷಾ ಅವರ ಕಾವ್ಯವನ್ನು ಪ್ರಾತಿನಿಧಿಕವಾಗಿ ಉಲ್ಲೇಖಿಸುತ್ತಾರೆ. ಹೀಗೆ ಮಹಿಳಾಕಾವ್ಯದ ಬಗ್ಗೆ ಒಂದು ತೋರುಗನ್ನಡಿಯಂತಿರುವ ಈ ಕೃತಿಯಲ್ಲಿ ಇರುವ ಅನೇಕ ಲೇಖನಗಳ ಮಧ್ಯೆ ಮಧ್ಯೆ ಪ್ರಾಸಂಗಿಕವಾಗಿ ಅಭಿವ್ಯಕ್ತಿ ವಿನ್ಯಾಸದ ಕುರಿತು ಒಳನೋಟಗಳನ್ನು ಕಂಡುಕೊಳ್ಳಬಹುದಾಗಿದೆ.

೬. **ಪದ್ಯದ ಮಾತು ಬೇರೆ: (ಸಂಪಾದನೆ) ಕೆ.ವಿ. ಅಕ್ಷರ** : ಯಾವುದೇ ಭಾಷೆ ಮತ್ತು ಸಾಹಿತ್ಯದ ತತ್ಕಾಲದ ಜೀವಂತಿಕೆಯನ್ನು ಬಿಂಬಿಸುವ ಮಾಧ್ಯಮ ಕಾವ್ಯ ಎಂಬ ನಂಬಿಕೆಯಿಂದ ನಿಜವಾಗಿಯೂ ಕನ್ನಡ ಭಾಷೆ ದುರ್ಬಲವಾಗುತ್ತಿದೆಯೋ ಅಥವಾ ಅದು ನಮ್ಮ ಮಾನಸಿಕ ವಿಕಲ್ಪವೇ?

* ಕನ್ನಡದ ಹೊಸ ಕವಿಗಳು ಹಿಂದಿನ ಕಾಲಗಳ ಕಾವ್ಯದ ಎತ್ತರಕ್ಕೆ ಏರಲು ವಿಫಲರಾಗಿದ್ದಾರೆಯೇ?

* ಈಚಿನ ಕನ್ನಡ ಕಾವ್ಯದಲ್ಲಿ ವಸ್ತು-ಸಂರಚನೆ-ಭಾಷೆಗಳಲ್ಲಿ ಈ ಕಾಲದ ವೈಶಿಷ್ಟ್ಯಗಳೇನಾದರೂ ಕಾಣಿಸಿಕೊಳ್ಳುತ್ತಿವೆಯೇ?

* ಕಾವ್ಯ ಪ್ರಕಾರವೇ ಈಚಿನ ವರ್ಷಗಳಲ್ಲಿ ಹೊಸ ವ್ಯಾಖ್ಯಾನಕ್ಕೆ ಒಳಗಾಗುತ್ತಿದೆಯೇ? ಮುಂತಾದ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ನಾಡಿನ ವಿವಿಧ ಭಾಗಗಳಿಂದ ವಿಮರ್ಶಕರು/ ಕವಿಗಳಿಂದ ಈಚಿನ ಒಂದು ಕವನವನ್ನು ಆಯ್ದು ಅದರ ಬಗ್ಗೆ ಟಿಪ್ಪಣಿ ಬರೆಸುವ ಉದ್ದೇಶದಿಂದ ದೇಶಕಾಲ ಪುಸ್ತಕದವರು ನಡೆಸಿದ ಈ ಕಾವ್ಯದಲ್ಲಿ ಹದಿನೇಳು ಲೇಖನಗಳನ್ನೊಳಗೊಂಡ ಈ ಪುಸ್ತಕ ಪ್ರಕಟವಾಗಿವೆ. ಒಬ್ಬ ಲೇಖಕ ಒಂದೇ ಕವನವನ್ನು ಆಯ್ದುಕೊಂಡು ವಿಶ್ಲೇಷಿಸಿದ್ದರೂ ಕೂಡ ಒಟ್ಟಾರೆಯಾಗಿ ಕಳೆದ ಶತಮಾನದ ಕೊನೆಯ ದಶಕ ಹಾಗೂ ಈ ಶತಮಾನದ ಪ್ರಾರಂಭದಲ್ಲಿನ ಕನ್ನಡಕಾವ್ಯ ನಿಂತಿರುವ ಸ್ಥಿತಿ, ಸಾಧ್ಯತೆಗಳನ್ನು ಈ ಲೇಖನಗಳು ವಿವರಿಸುತ್ತವೆ. ಅದರಲ್ಲಿ ವೈದೇಹಿ, ಎಚ್.ಎಸ್. ಮುಕ್ತಾಯಕ್ಕ, ಕೆ.ಆರ್. ಸಂಧ್ಯಾರೆಡ್ಡಿ, ಚ. ಸರ್ವಮಂಗಳ, ಪ್ರತಿಭಾ ನಂದಕುಮಾರ್, ಸಂಧ್ಯಾದೇವಿ, ಸವಿತಾ ನಾಗಭೂಷಣ ಹೀಗೆ ಏಳು ಮಹಿಳಾ ಕವಿಗಳ ಕವನಗಳ ವಿಶ್ಲೇಷಣೆಯು ಆಧುನಿಕ ಮಹಿಳಾಕಾವ್ಯದ ಪ್ರಸ್ತುತತೆಯ ಕಿರುನೋಟವನ್ನು ನೀಡುತ್ತದೆ.

'ಅವರವರ ಕಾವ್ಯ ಅವರವರ ಮನಸ್ಸಿನ ಸೂಕ್ಷ್ಮಗಳೂ ಹೌದು, ಅಂತೆಯೇ ಅವರವರ ಓದು ಕೂಡ ಎಂದ ಮೇಲೆ ಕಾವ್ಯವನ್ನು ಹೋಲಿಸಬಾರದು ಅಂತಲೇ ತಾನೇ?'[೭] ಎಂಬುದು ವೈದೇಹಿಯವರ ತರ್ಕ. ಮಹಿಳಾಕಾವ್ಯಾಭಿವ್ಯಕ್ತಿ ವಿನ್ಯಾಸದ ಕುರಿತು ವಿಶೇಷವಾದ ವಿವರಣೆಯಿಲ್ಲದಿದ್ದರೂ ಕೂಡ ಮಹಿಳಾಕಾವ್ಯದ ಕುರಿತ ಬರವಣಿಗೆಗಳೇ ಅಪರೂಪವಾಗಿರುವ ಸಂದರ್ಭದಲ್ಲಿ ಕೆಲವು ಮಟ್ಟಿಗಾದರೂ ಬೆಳಕು ಚೆಲ್ಲುವ ಈ ಕೃತಿ ಅಧ್ಯಯನದ ದೃಷ್ಟಿಯಿಂದ ಮಹತ್ವದ್ದಾಗಿದೆ.

೭. **ಕಾವ್ಯಪ್ರೀತಿ-ಟಿ.ಪಿ. ಅಶೋಕ**: ಇದು ಕನ್ನಡ ಕವಿತೆಗಳನ್ನು ಕುರಿತ ಐವತ್ತು ಲೇಖನಗಳ ಸಂಗ್ರಹ. ಕವಿತೆಯನ್ನು ಅದರ ಭಾಷಿಕ ನೆಲೆಯಲ್ಲಿ ಆಸ್ವಾದಿಸುತ್ತಲೇ ಅದನ್ನು ಸಂಸ್ಕೃತಿಯ ಮುಖ್ಯ ಜಿಜ್ಞಾಸೆಗಳೊಂದಿಗೆ ಬೆಸೆಯುವ ಮಹಾತ್ವಾಕಾಂಕ್ಷೆಯನ್ನು ಈ ಲೇಖನಗಳಲ್ಲಿ ಗುರುತಿಸಬಹುದಾಗಿದೆ. ಹಲವು ಪಂಥ ಪೀಳಿಗೆಗಳಿಗೆ ಸೇರಿದ ಕವಿತೆಗಳೊಂದಿಗೆ ಲೇಖಕರು

ಅನುಸಂಧಾನ ನಡೆಸಿರುವ ಈ ಕೃತಿಯು ವೈದೇಹಿ, ಸರ್ವಮಂಗಳ, ಮಾಲತಿ ಪಟ್ಟಣಶೆಟ್ಟಿ, ಪ್ರತಿಭಾ ನಂದಕುಮಾರ್, ಸವಿತಾ ನಾಗಭೂಷಣ, ಸಂಧ್ಯಾದೇವಿ, ಜ್ಯೋತಿ ಗುರುಪ್ರಸಾದ್ ಅವರ ಕೆಲವು ಕವನಗಳನ್ನು ವಿಮರ್ಶೆಗೆ ಒಳಪಡಿಸಿದೆ.

ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಹೆಣ್ಣುಗಳ ಮಾದರಿಯನ್ನು ಮೂರು ಬಗೆಯೆಂದು ಲೇಖಕರು ಗುರುತಿಸುತ್ತಾರೆ.

೧. ಎಲ್ಲವನ್ನೂ ಮೌನವಾಗಿಯೇ ಸಹಿಸಿಕೊಂಡು ಒಳಗೇ ನೊಂದು ನಾಶವಾಗುವವರು.

೨. ಗೊಣಗುತ್ತಾ, ಆಗಾಗ ಕ್ಷೀಣದನಿಯಲ್ಲಿ ಪ್ರತಿಭಟಿಸುತ್ತಾ, ಆದರೆ ಆ ಚೌಕಟ್ಟಿನಲ್ಲಿಯೇ ಉಳಿಯುವವರು.

೩. ಸಹಿಸಿ ಸಹಿಸಿ, ಕಡೆಗೊಮ್ಮೆ ಸಿಡಿದು ಆ ಚೌಕಟ್ಟನ್ನು ದಿಟ್ಟತನದಲ್ಲಿ ದಾಟಬಯಸುವವರು. ಆದರೆ ಇದು ಅಲ್ಪಸಂಖ್ಯಾತ ಮಾದರಿ.

ಇದು ಹೆಣ್ಣಿನ ಮನೋಭಾವದ ವರ್ಗೀಕರಣ ಮಾತ್ರವಾಗಿರದೆ ವಿವಿಧ ಕಾಲಘಟ್ಟದ ಹೆಣ್ಣುಗಳನ್ನು ಪ್ರತಿನಿಧಿಸುವ ವರ್ಗೀಕರಣವೂ ಆಗಿದೆ.

ಸರ್ವಮಂಗಳ ಅವರ ಕವಿತೆಯನ್ನು ಕುರಿತು ಹೇಳುವಾಗ 'ಪುರಾಣ ಕಾಲದಿಂದ ತೀರಾ ಇತ್ತೀಚಿನವರೆಗೆ ವಿವಿಧ ಬಗೆಗಳಲ್ಲಿ ಚಾಲ್ತಿಯಲ್ಲಿರುವ ಲಿಂಗ ಅಸಮಾನತೆ ಕುರಿತ ನಿರ್ವಚನಗಳನ್ನೂ, ಅವು ಸೃಷ್ಟಿಸಿರುವ ಆದರ್ಶೀಕೃತ ಪ್ರತಿಮೆಗಳನ್ನೂ ಪ್ರಶ್ನಿಸಿ ಭಗ್ನಗೊಳಿಸಿ ಮಹಿಳೆಯ ಅಸ್ಮಿತೆಯನ್ನು ಇದಕ್ಕೆ ಭಿನ್ನವಾದ ರೀತಿಗಳಲ್ಲಿ ಶೋಧಿಸಿ ಕಟ್ಟಬಯಸುವುದು ಅವರ ಪ್ರಧಾನ ಕಾಳಜಿ ಎಂದು ಗುರುತಿಸುತ್ತಾರೆ.'[೮] ಇದೇ ಕವಿಯ ಬರವಣಿಗೆಯ ಕುರಿತು ಎಚ್.ಎಸ್.ಆರ್. ಇನ್ನೊಂದು ದೃಷ್ಟಿಕೋನದಲ್ಲಿ ಬರೆಯುತ್ತಾರೆ. ಹೀಗೆ ಬಿಡಿಬಿಡಿಯಾಗಿ ದೊರೆಯುವ ಒಳನೋಟಗಳನ್ನು ವಿಸ್ತರಿಸಿ ವಿಭಿನ್ನ ದೃಷ್ಟಿಕೋನದಿಂದ ನೋಡಲು ಸಾಧ್ಯವಾಗಿಸಿಕೊಂಡು ಮುಂದುವರಿಯುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

ಸವಿತಾ ನಾಗಭೂಷಣ ಅವರ 'ಬೆಳಸು', 'ಜಾತ್ರೆಯಲ್ಲಿ ಶಿವ', 'ದರುಶನ' ಕವನಗಳನ್ನು ವಿಶ್ಲೇಷಿಸುತ್ತಲೇ ಒಟ್ಟಾರೆ ಸವಿತಾ ಕಾವ್ಯದ ಸಮಗ್ರವಾದ ಸ್ಥೂಲವಾದ ನೋಟವೊಂದನ್ನು ನೀಡುತ್ತಾರೆ. ಸವಿತಾ ಉಳಿದ ಕವಿಗಳಿಗೆ ಯಾವ ವಿಷಯದಲ್ಲಿ ಪರ, ಯಾವ ವಿಷಯದಲ್ಲಿ ಪ್ರತ್ಯೇಕ ಹಾಗೂ ವಿಶಿಷ್ಟ ಎನ್ನುವುದನ್ನು ಅವರ ಇನ್ನಿತರ ಕವನಗಳ ಮೂಲಕ ಕಂಡುಕೊಳ್ಳಬೇಕಾಗಿದೆ. ಅದನ್ನು ಪ್ರಸ್ತುತ ಅಧ್ಯಯನವು ಮುಂದುವರಿಸುವ ಪ್ರಯತ್ನದಲ್ಲಿದೆ.

೮. **ಮಹಿಳಾ ಸಾಹಿತ್ಯ: ಅಭಿವ್ಯಕ್ತಿ ಸ್ವರೂಪದ ತಾತ್ವಿಕ ಸ್ವರೂಪ – ಡಾ. ಟಿ.ಎಂ. ಉಷಾರಾಣಿ ತೆಗ್ಗಿನಮಠ:** ಇದು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ. ಅಧ್ಯಯನಕಾರರು ಮಹಿಳಾ ಸಾಹಿತ್ಯದ ವಿವಿಧ ಪ್ರಕಾರಗಳು ಅಭಿವ್ಯಕ್ತಿ ಸ್ವರೂಪದ ತಾತ್ವಿಕ

ಸ್ವರೂಪವನ್ನು ಗುರುತಿಸುವ ಪ್ರಯತ್ನವನ್ನಿಲ್ಲಿ ಮಾಡಿರುತ್ತಾರೆ. ಅದರಲ್ಲಿ ಮಹಿಳಾ ಕಾವ್ಯ ಭಾಗವೂ ಒಂದು ಪ್ರಕಾರವಾಗಿ ಪರಿಗಣಿಸಲ್ಪಟ್ಟಿದೆ. ಸ್ವಾತಂತ್ರ್ಯಪೂರ್ವ ಕಾಲದ ಮಹಿಳಾ ಕಾವ್ಯ ಹಾಗೂ ಸ್ವಾತಂತ್ರ್ಯೋತ್ತರ ಕಾಲದ ಮಹಿಳಾಕಾವ್ಯ ಎಂದು ಎರಡು ಸ್ಥೂಲ ವಿಭಾಗಗಳನ್ನು ಕಾಲಾನುಸರಣಿಯ ಹಿನ್ನೆಲೆಯಲ್ಲಿ ಮಾಡಿಕೊಂಡು ಅಧ್ಯಯನ ನಡೆಸಲಾಗಿದೆ. ನವೋದಯ, ನವ್ಯ, ಬಂಡಾಯ–ದಲಿತ ಮುಂತಾದ ಸಾಹಿತ್ಯ ಪಂಥಗಳ ತಾತ್ವಿಕತೆಯ ಹಿನ್ನೆಲೆಯಲ್ಲಿ ಮಹಿಳಾ ಕಾವ್ಯವನ್ನು ಅಧ್ಯಯನ ಮಾಡಲಾಗಿದೆ. ಇಲ್ಲಿ ಕಥೆ, ಕಾದಂಬರಿ ಮುಂತಾದ ಪ್ರಕಾರಗಳೂ ಸೇರಿಕೊಂಡಿರುವುದರಿಂದ ಕೇವಲ ಕಾವ್ಯಕ್ಕೆ ಹೆಚ್ಚಿನ ಒತ್ತು ನೀಡಲು ಸಾಧ್ಯವಾಗಿರುವುದಿಲ್ಲ. ಆದರೆ ಅಭಿವ್ಯಕ್ತಿ ವಿನ್ಯಾಸದ ಕುರಿತಂತೆ ಅಧ್ಯಯನ ಕೈಗೊಂಡ ಒಂದು ಪ್ರಯತ್ನವಾಗಿ ಈ ಪ್ರಬಂಧ ಪ್ರಮುಖವಾಗುತ್ತದೆ. ಹೀಗೆ ಹಂಚಿ ಹೋಗುವ ಅಧ್ಯಯನಾಂಶಗಳನ್ನು ಒಂದೇ ಕಡೆ ಆಳವಾಗಿ ಪರಿಶೀಲಿಸುವ ಒಂದು ಮುಂದುವರಿದ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದ ಮೂಲಕ ಮಾಡಲಾಗುವುದು.

ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ಮಹಿಳಾಕಾವ್ಯದ ಅಭಿವ್ಯಕ್ತಿ ವಿನ್ಯಾಸಗಳನ್ನು ಕೇಂದ್ರೀಕರಿಸಿ ಗಂಭೀರವಾದ ಅಧ್ಯಯನ ನಡೆದಿಲ್ಲವೆಂಬುದು ಖಚಿತವಾಗುತ್ತದೆ. ಆದರೆ ಮಹಿಳಾ ಸಾಹಿತ್ಯದ ನೆಲೆಗಳನ್ನು ಈ ವಿಮರ್ಶೆಗಳು, ಸಂಶೋಧನೆಗಳು ಶೋಧನೆಗೆ ಒಳಪಡಿಸಿವೆ. ನಮ್ಮನ್ನು ಆವರಿಸಿಕೊಂಡಿರುವ ವಾತಾವರಣದ ಪರಿಧಿಯಲ್ಲಿ ಸಂಭವಿಸುವ ಘಟನೆಗಳಿಗೆ ಸ್ಪಂದಿಸಿ, ಅದಕ್ಕೊಂದು ಅಭಿವ್ಯಕ್ತಿಯ ರೂಪ ತೊಡಿಸುವ 'ಸಂವೇದನಾ'ಕಾರ್ಯವು ಬುದ್ಧಿ ಮತ್ತು ಭಾವಗಳೆರಡರ ಮಿಳಿತವಾಗಿರುತ್ತದೆ. ಸಂವೇದನೆಯ ಸ್ವರೂಪವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ವ್ಯಕ್ತಿಯ ಅನುಭವಲೋಕದ ಗ್ರಹಿಕೆಗಳು ವೈಯಕ್ತಿಕತೆ ಮತ್ತು ಸುತ್ತಲಿನ ಪರಿಸರದ ಆವರಣವನ್ನು, ಅಧ್ಯಯನದ ವ್ಯಾಪ್ತಿಯನ್ನು ಅವಲಂಬಿಸಿರುತ್ತದೆ. ಮಹಿಳೆಯರು ಬರವಣಿಗೆಯ ಕಾರ್ಯಕ್ಕೆ ಇಳಿಯುವ ಹೊತ್ತಿಗೆ ಪುರುಷಲೋಕ ಸೃಷ್ಟಿಸಿದ ಸಾಹಿತ್ಯ ಪರಂಪರೆಯೊಂದು ನಿರ್ಮಾಣವಾಗಿ ಹೊಸ ಹೊಸ ಪ್ರಯೋಗಗಳಿಗೆ ನಾಂದಿ ಹಾಡಿತ್ತು. ಅಕ್ಷರಲೋಕಕ್ಕೆ ತಮ್ಮನ್ನು ಮೊದಲು ತೊಡಗಿಸಿಕೊಂಡ ಮಹಿಳೆಯರ ಸಂವೇದನೆಗಳಿಗೂ, ಬದಲಾದ ಇಂದಿನ ಸನ್ನಿವೇಶದಲ್ಲಿ ಮಹಿಳೆಯರ ಸಂವೇದನೆಗಳಿಗೂ ವಿಭಿನ್ನತೆಗಳನ್ನು ಗುರುತಿಸುವತ್ತ ಪ್ರಸ್ತುತ ಅಧ್ಯಯನ ಮುಂದುವರಿಯಲಿದೆ.

ಪ್ರಬಂಧದ ಉದ್ದೇಶ, ಮಹತ್ವ, ವ್ಯಾಪ್ತಿ ಹಾಗೂ ಅಧ್ಯಯನ ವಿಧಾನಗಳನ್ನು ಕುರಿತಾದ ಇಲ್ಲಿಯವರೆಗಿನ ಚರ್ಚೆಯು ಆಧುನಿಕ ಮಹಿಳಾಕಾವ್ಯದಲ್ಲಿನ ಅಭಿವ್ಯಕ್ತಿ ವಿನ್ಯಾಸಗಳ ಕುರಿತ ಅಧ್ಯಯನಕ್ಕೆ ಪೂರ್ವಭಾವಿಯಾಗಿ ನಿಗದಿಪಡಿಸಿಕೊಂಡ ಪೂರ್ವಮೀಮಾಂಸೆಯ ಸ್ವರೂಪದಲ್ಲಿದ್ದು ಇಡೀ ಪ್ರಬಂಧದ ವಿಷಯದ ಒಂದು ಪೂರ್ವಭಾವಿ ಅವಲೋಕನದ ಪ್ರತಿಫಲವಾಗಿ ರೂಪ ತಾಳಿವೆ. ಇವು ಅಧ್ಯಯನದುದ್ದಕ್ಕೂ ಬೆಳೆಯುತ್ತ, ಕಳೆಯುತ್ತ, ಮರುರೂಪ ಪಡೆಯುತ್ತ ಹೋಗುವ ಜೀವಂತ ಪ್ರಕ್ರಿಯೆಯ ಆರಂಭಿಕ ನಿಯೋಗಗಳಾಗಿವೆ.

**ಟಿಪ್ಪಣಿಗಳು**

೧. ಡಾ. ಸಿ. ವೀರಣ್ಣ, ಕನ್ನಡ ಕಾವ್ಯ ಕಂಡ ಹೆಣ್ಣು, ಪುಟ ೫.

೨. ಡಾ. ಬಿ.ಎನ್. ಸುಮಿತ್ರಾಬಾಯಿ, ನಡುವೆ ಸುಳಿವ ಆತ್ಮ, ಬೆನ್ನುಡಿ.

೩. ಡಾ. ಬಿ.ಎನ್. ಸುಮಿತ್ರಾಬಾಯಿ, ಇದೇ ಕೃತಿ, ಮುನ್ನುಡಿ.

೪. ಡಾ. ಬಿ.ಎನ್. ಸುಮಿತ್ರಾಬಾಯಿ, ಸರಹದ್ದುಗಳ ಆಚೆ–ಈಚೆ, ಪುಟ ೧೦೯.

೫. ಡಾ. ಎಚ್.ಎಸ್. ರಾಘವೇಂದ್ರರಾವ್, ಕಣ್ಣ ಹನಿಗಳೆ ಕಾಣಿಕೆ, ಬೆನ್ನುಡಿ.

೬. ಡಾ. ಎಚ್.ಎಸ್. ರಾಘವೇಂದ್ರರಾವ್, ಅದೇ ಕೃತಿ, ಮುನ್ನುಡಿ.

೭. ವೈದೇಹಿ, ಪದ್ಯದ ಮಾತು ಬೇರೆ, ಪುಟ ೨೫.

೮. ಟಿ.ಪಿ. ಅಶೋಕ, ಕಾವ್ಯಪ್ರೀತಿ, ಪುಟ ೧೨೨.



## ಅಧ್ಯಾಯ : ಎರಡು

# ಪರಿಕಲ್ಪನೆಗಳ ತಾತ್ವಿಕ ಚರ್ಚೆ

೨.೧. ಆಧುನಿಕ ಮಹಿಳಾಕಾವ್ಯ

೨.೨. ಅಭಿವ್ಯಕ್ತಿಯ ವಿನ್ಯಾಸಗಳು

ಅಧ್ಯಾಯ : ಎರಡು

# ಪ್ರಮುಖ ಪರಿಕಲ್ಪನೆಗಳ ತಾತ್ವಿಕ ಚರ್ಚೆ

## ೨.೧. ಆಧುನಿಕ ಮಹಿಳಾಕಾವ್ಯ

ಪ್ರಶ್ನಿಸುವ ಹಾಗೂ ಪರಿಶೀಲಿಸುವ ಎರಡು ಬಹುಮುಖ್ಯ ಸಂಗತಿಗಳು ಮನುಷ್ಯ ಪ್ರಪಂಚದ ಮೂಲಭೂತ ಆಸಕ್ತಿಗಳು. ತಾನು ಸೃಷ್ಟಿಸಿದ ವಸ್ತು-ಸಂಗತಿಗಳನ್ನು ತಾನೇ ಪ್ರಶ್ನಿಸುವ ಪರಿಶೀಲನೆಗೆ ಒಳಪಡಿಸುವ ಮನುಷ್ಯ ಪ್ರವೃತ್ತಿ ಕುತೂಹಲಕಾರಿಯಾದದ್ದಷ್ಟೇ ಅಲ್ಲ ಅರ್ಥಪೂರ್ಣ ಕೂಡಾ ಹೌದು. ಈ ಮಾತು ಬಾಹ್ಯಪ್ರಪಂಚದ ಮೂರ್ತವಸ್ತುಗಳ ಸಂದರ್ಭದಲ್ಲಿ ಹೇಗೋ ಹಾಗೆ ಮನೋಪ್ರಪಂಚದ ಮೂರ್ತವಿಷಯಗಳ ವಿಚಾರದಲ್ಲಿಯೂ ನಿಜ. ಈ ನಿಟ್ಟಿನಲ್ಲಿ ಮೂರ್ತ ಅಮೂರ್ತ ವಿಷಯಗಳ ಸಮನ್ವಯ ರೂಪದಂತೆ ಕಾಣುವ ಕಾವ್ಯವನ್ನು ಕುರಿತು ಮೂಡಿರುವ ಪ್ರಶ್ನೆಗಳಿಗೆ, ಬೆಳೆದಿರುವ ಚರ್ಚೆಗಳಿಗೆ, ತಳೆದಿರುವ ನಿಲುವುಗಳಿಗೆ ಒಂದು ಪರಂಪರೆಯಿದೆ. ಪಾಶ್ಚಾತ್ಯ ಮತ್ತು ಪೌರ್ವಾತ್ಯ ಮೀಮಾಂಸಕರಿಬ್ಬರೂ ಕಾವ್ಯವನ್ನು ಅರ್ಥೈಸುವ ಒಂದು ಮಾತಿನಲ್ಲಿ ಸೂತ್ರೀಕರಿಸುವ ಹಲವು ಪ್ರಯತ್ನಗಳನ್ನು ಮಾಡಿದ್ದಾರೆ.

ಭಾರತೀಯ ಕಾವ್ಯಚಿಂತನೆಯ ಮೂಲ ಭರತನ 'ನಾಟ್ಯಶಾಸ್ತ್ರ'. ಇದರಲ್ಲಿ ಆತ ಚರ್ಚಿಸಿರುವುದು ಮುಖ್ಯವಾಗಿ ನಾಟಕ ಕಲೆಯ ಕುರಿತು. ಆದರೆ ನಾಟಕದ ಪ್ರಯೋಜನದ ಹಿನ್ನೆಲೆಯಲ್ಲಿ ಆತ ಪ್ರತಿಪಾದಿಸುವ 'ರಸಸೂತ್ರ'ವು ಮುಂದೆ ಇಡೀ ಕಾವ್ಯಸಮುದಾಯಕ್ಕೆ ವಿಸ್ತರಣೆಯಾಗುವುದರಿಂದ, ಕಾವ್ಯದ ವಿಸ್ತೃತ ಚರ್ಚೆ ಮುಂದುವರಿದಿದೆ.

'ಶಬ್ದಾರ್ಥ ಸಹಿತೌ ಕಾವ್ಯಂ'[1] ಎಂಬ ಕಾವ್ಯಜಿಜ್ಞಾಸೆಯನ್ನು ಆರಂಭಿಸುವ ಭಾಮಹ ಈ ಪರಂಪರೆಯಲ್ಲಿ ಮೊದಲಿಗನಾಗಿದ್ದಾನೆ. ಮುಂದೆ ಸಿದ್ಧವಾಗಿರುವ ಕಾವ್ಯಸ್ವರೂಪದ ಚಿಂತನೆಗೆ ಇದು ಮುನ್ನುಡಿಯಂತಿದೆ. ನಂತರ ದಂಡಿಯು ಇಷ್ಟಾರ್ಥವನ್ನು ನೀಡುವ ಪದಾವಳಿಯೇ ಕಾವ್ಯದ ಶರೀರವೆಂದು ಹೇಳಿ ಹತ್ತು ಗುಣಗಳನ್ನು ಕಾವ್ಯದ ಪ್ರಾಣ ಎಂದಿದ್ದಾನೆ. ವಾಮನನು ಗುಣಾಲಂಕಾರಗಳಿಂದ ಶೋಭಿತವಾದ ಶಬ್ದಾರ್ಥಗಳೇ ಕಾವ್ಯವೆಂದು ಹೇಳುತ್ತಾ ಅದು ಅಲಂಕಾರದಿಂದ ಗ್ರಾಹ್ಯವಾಗುತ್ತದೆ. ಅಲಂಕಾರವೆಂದರೆ ಸೌಂದರ್ಯವೆಂದು ಅರ್ಥೈಸುತ್ತಾನೆ. ಹಾಗೆಯೇ ರೀತಿಯು ಕಾವ್ಯದ ಆತ್ಮವೆಂದು ಸಾರಿ ಕಾವ್ಯಕ್ಕೆ ಚೈತನ್ಯವನ್ನು ನೀಡುವ ಅಂಶದ

ಕಡೆಗೆ ಗಮನ ಸೆಳೆಯುತ್ತಾನೆ. ಮುಂದೆ ಮುಮ್ಮಟ ಈತನ ಅಭಿಪ್ರಾಯವನ್ನು ಒಪ್ಪುತ್ತಾನಾದರೂ ಕೆಲವೆಡೆ ಅಲಂಕಾರವಿಲ್ಲದಿದ್ದರೂ ಕಾವ್ಯವಾಗುತ್ತದೆ ಎಂಬ ಅಭಿಪ್ರಾಯಕ್ಕೆ ಬರುತ್ತಾನೆ. ಈ ಬಗೆಯ ಹೇಳಿಕೆ ಪ್ರತಿ ಹೇಳಿಕೆಗಳು ಬೆಳೆದು ಗಂಭೀರ ಚರ್ಚೆಗೆ ಗ್ರಾಸವಾದಂತೆ ತೋರುತ್ತದೆ. ಆನಂದವರ್ಧನ ಕಾವ್ಯದ ಅರ್ಥ ಮತ್ತು ಪರಿಣಾಮವನ್ನು ಲಕ್ಷ್ಯದಲ್ಲಿರಿಸಿ ಧ್ವನಿಯೇ ಕಾವ್ಯದ ಆತ್ಮ ರಸವೇ ಪ್ರಾಣ ಎಂದು ಬಹುಮುಖ್ಯವಾದ ಸಂಗತಿಗಳೆಡೆಗೆ ದೃಷ್ಟಿ ಹರಿಸುತ್ತಾನೆ. ಕುಂತಕನು ವಕ್ರಕವಿ ವ್ಯಾಪಾರ ಶಾಲಿನೀ, ವ್ಯವಸ್ಥಿತ ಬಂಧವುಳ್ಳದ್ದು, ಶಬ್ದಾರ್ಥ ಸಹಿತವಾದದ್ದು ಮತ್ತು ವಿದ್ವಾಂಸರಿಗೆ ಸಂತೋಷವನ್ನು ಉಂಟುಮಾಡುವುದು ಕಾವ್ಯವೆಂದು ವ್ಯಾಖ್ಯಾನಿಸುತ್ತಾನೆ. ಇಲ್ಲಿ ಉಕ್ತವಾಗಿರುವ 'ಕಾವ್ಯವು ಕವಿಯ ವ್ಯಾಪಾರ' ಎಂಬ ಮಾತು ಕಾವ್ಯಚಿಂತನೆಯಲ್ಲಿ ವಿಶೇಷವಾದ ಅಂಶವಾಗಿ ಗಮನ ಸೆಳೆದಿದೆ. ವಿಶ್ವನಾಥ 'ವಾಕ್ಯಂರಸಾತ್ಮಕಂಕಾವ್ಯಂ'[೨] ಎಂದು ಸೂತ್ರೀಕರಿಸಿದ್ದಾನೆ. ಕಾವ್ಯ ಕೃತಿಯೊಂದು ಸಹೃದಯದಲ್ಲಿ ಉಂಟುಮಾಡುವ ಅನುಭವ ವಿಶೇಷವಾದ ರಸವನ್ನು ಲಕ್ಷ್ಯದಲ್ಲಿರಿಸಿ ಹೇಳುವ ಮಾತಿದು. ಆದರೆ ಇವೆಲ್ಲಕ್ಕಿಂತ 'ರಮಣೀಯಾರ್ಥ ಪ್ರತಿಪಾದಕ ಶಬ್ದಃ ಕಾವ್ಯಂ'[೩] ಎಂಬ ಜಗನ್ನಾಥ ಪಂಡಿತನ ಮಾತು ಬಹುಮುಖ್ಯವಾದದ್ದು. ಈ ಮಾತಿನ ಅರ್ಥವನ್ನು ಡಾ. ಸೋಮನಾಥ ಯಾಳವಾರ ಅವರು ಹೀಗೆ ವಿವರಿಸಿದ್ದಾರೆ. 'ರಮಣೀಯಾರ್ಥವೆಂದರೆ ಕಾವ್ಯ ನೀಡಬಹುದಾದ ಲೋಕೋತ್ತರವಾದ ಆಹ್ಲಾದ ಎಂಬುದು, ಲೋಕ ವ್ಯವಹಾರ ಭೂಮಿಕೆಯಲ್ಲಿ ನಾವು ಪಡೆಯಲಾರದ ಒಂದು ಆನಂದ ವಿಶೇಷವನ್ನು ಕೊಡುವಂಥದ್ದು, ಅದನ್ನು ಆತ ಚಮತ್ಕಾರ ಎಂದು ಕರೆದಿದ್ದಾನೆ. ಶಬ್ದಗಳ ಮೂಲಕ ಆಸ್ವಾದನೆಯಾಗುವ ಕಾವ್ಯದ ಈ ರಮಣೀಯಾರ್ಥವೇ ರಸಾನುಭವ ಎಂದು ಕರೆಸಿಕೊಂಡಿದೆ. ಯಾವುದು ರಮ್ಯವಾದುದೋ, ಯಾವುದನ್ನು ಮತ್ತೆ ಮತ್ತೆ ಆಸ್ವಾದಿಸಬೇಕು ಅನ್ನುವಂಥ 'ನವನವತ್ವ'ವನ್ನು ಪಡೆದುಕೊಂಡಿದೆಯೋ ಅಂಥ ಅನುಭವ ವಿಶೇಷವೇ ರಸ. ಇದನ್ನು ಅಭಿವ್ಯಕ್ತಗೊಳಿಸುವುದೇ ಕಾವ್ಯ'[೪]

ಹೀಗೆ ಬೆಳೆಯುವ, ಚರ್ಚಿತವಾಗುವ ಸಂಸ್ಕೃತದ ಕಾವ್ಯ ಮೀಮಾಂಸಕರ ಮಾತುಗಳನ್ನು ಕನ್ನಡದ ಕಾವ್ಯಚಿಂತಕರು ಬಹುತೇಕ ಒಪ್ಪಿಕೊಂಡಂತೆ ಕಾಣುತ್ತದೆ. 'ಕಾವ್ಯಂ ಸವಿಶೇಷ ಶಬ್ದರಚನಂ ವಿವಿಧಾರ್ಥ ವ್ಯಕ್ತಿವರ್ತಿತಾಲಂಕಾರಂ'[೫] ಎನ್ನುವ ಶ್ರೀವಿಜಯ ಮತ್ತು 'ಪಡೆದರ್ಥ ಮನಳವಡಿಸಿದ ಪದಾವಳಿ ಕಾವ್ಯದ ಶರೀರಮನಿಕ್ಕೂ'[೬] ಎನ್ನುವ ಉದಯಾದಿತ್ಯ ಹಾಗೂ 'ತದದೋಷೌ ಶಬ್ದಾರ್ಥೌ ಸಗುಣಾವಲಂಕೃತೀ ಪುನಃಕ್ವಾಪಿ'[೭] ಎನ್ನುವ ತಿರುಮಲಾರ್ಯ ಇವರ ಹೇಳಿಕೆಗಳು ಇದನ್ನು ಪುಷ್ಟೀಕರಿಸುತ್ತವೆ.

ಪಾಶ್ಚಾತ್ಯರಲ್ಲಿ ಕವಿಗಳನ್ನು ಮತ್ತು ಕಾವ್ಯವನ್ನು ನಿರಾಕರಿಸುವ ಪ್ಲೇಟೋನ ಮಾತುಗಳಿಗೆ ಅರಿಸ್ಟಾಟಲ್ ನೀಡುವ ಉತ್ತರ ಸಮರ್ಥನೆಗಳಿಂದಲೇ ಕಾವ್ಯದ ಕುರಿತ ಚರ್ಚೆ ವ್ಯಾಖ್ಯಾನಗಳು ಮೊದಲಾಗುತ್ತವೆ. ಪ್ಲೇಟೋ ಕಾವ್ಯವನ್ನು ಅನುಕರಣೆಯ ಅನುಕರಣೆ ಎಂದು ಹಗುರವಾಗಿ ಕಂಡರೆ, ಅರಿಸ್ಟಾಟಲ್ ಅನುಕರಣೆಗೆ 'ಪುನರ್‌ನಿರ್ಮಿತಿ' ಎಂದು ಬೇರೊಂದು ಅರ್ಥವನ್ನು

ನೀಡಿ ಕವಿ ಕಾವ್ಯಗೌರವವನ್ನು ಕಾಪಾಡಿದ್ದಾನೆ. ಇವನ ನಂತರದಲ್ಲಿ ಬಂದ ಪಾಶ್ಚಾತ್ಯ ವಿಮರ್ಶಕರ ಲಕ್ಷಣ ನಿರೂಪಣೆಗಳು ಯಥೇಚ್ಛವಾಗಿ ಹರಿದುಬಂದಿವೆ. 'ತೀವ್ರವಾದ ಭಾವಗಳ ಸಹಜವಾದ ಹೊರಹೊಮ್ಮುವಿಕೆ',[೮] 'It is the breath and finer spirit of all knowledge',[೯] ಎಂದು ವರ್ಡ್ಸ್‌ವರ್ತ್ ಅಭಿಪ್ರಾಯಪಡುತ್ತಾನೆ. ಡಾ. ಜಾನ್ಸನ್ ಕಾವ್ಯ ವಿಜ್ಞಾನ ಕೃತಿಗಳಿಗೆ ವಿರುದ್ಧವಾದ ರಚನಾಪ್ರಕಾರ, ಅದರ ಸದ್ಯದ ಗುರಿ ಸಂತೋಷವೇ ಹೊರತು ಸತ್ಯವಲ್ಲ ಎನ್ನುತ್ತಾನೆ. ಕೋರ್ಟ್ ಹೂಪನು ಛಂದೋಬದ್ಧ ಭಾಷೆಯಲ್ಲಿ ಭಾವನೆ, ಸಂವೇದನೆ, ಆಲೋಚನೆಗಳ ಸಮುಚಿತ ಅಭಿವ್ಯಕ್ತಿಯ ಕ್ರಮಬದ್ಧ ಜೋಡಣೆ, ಆನಂದವನ್ನು ಉಂಟು ಮಾಡುವುದೇ ಕವಿತ್ವ ಎನ್ನುತ್ತಾನೆ. ಮ್ಯಾಥ್ಯೂ ಅರ್ನಾಲ್ಡನು 'Poetry is at bottom a criticism of life'[೧೦] ಎಂದರೆ, ಜಾರ್ಜ್ ಎಲಿಯಟ್ ಯಾವುದರಲ್ಲಿ ಜ್ಞಾನ ಕೂಡಲೇ ಭಾವವಾಗಿ ಪರಿವರ್ತಿತವಾಗುತ್ತದೋ ಮತ್ತು ಜ್ಞಾನದ ಒಂದು ಹೊಸ ಅಂಗವಾಗಿ ಪ್ರತಿಬಿಂಬಿತವಾಗುತ್ತದೆಯೋ ಅಂತ ಆತ್ಮವನ್ನು ಪಡೆದಿರುವಿಕೆಯೇ ಕಾವ್ಯ ಎನ್ನುತ್ತಾನೆ. ಟಿ.ಎಸ್. ಎಲಿಯಟ್‌ನು ಕಾವ್ಯ ವ್ಯಕ್ತಿತ್ವದ ಅಭಿಪ್ರಾಯವಲ್ಲ. ಅದರಿಂದ ಪಲಾಯನ ಎಂದು ಹೇಳಿದ್ದಾನೆ. ಹೀಗೆ 'ಪ್ರತಿಭೆಯ ಕೂಸು', 'ಕಲ್ಪನೆಯ ಅಭಿವ್ಯಕ್ತಿ', 'ಸಮಾಜವಿಮರ್ಶೆ', 'ಜೀವನವಿಮರ್ಶೆ'ಮ ಇತ್ಯಾದಿ ಅಭಿಪ್ರಾಯಗಳೂ ಇವೆ. ಇವುಗಳ ನಡುವೆ ಕಾವ್ಯವೆನ್ನುವುದು ಸತ್ಯ, ಸೌಂದರ್ಯ ಮತ್ತು ಸಾಮರ್ಥ್ಯಗಳ ತೀವ್ರ ಅಭೀಷ್ಟೆಗೆ ಕೊಟ್ಟ ವ್ಯಕ್ತರೂಪ ಪ್ರತಿಭೆ ಮತ್ತು ಕಲ್ಪನೆಗಳ ನೆರವಿನಿಂದ ತನ್ನ ಅನುಭವದ ಪರಿಕಲ್ಪನೆಗಳಿಗೆ ಅದು ರೂಪವನ್ನು ಕೊಡುತ್ತದೆ. ಇಡೀ ವಿಶ್ವ ಅದರ ವಸ್ತು. ಆನಂದ ಮತ್ತು ಉದ್ಧಾರವೇ ಅದರ ಗುರಿ ಎಂದು ಲೀ ಹಂಟ್ ಹೇಳುವ ಮಾತು ವಸ್ತು, ರೂಪ, ಧೋರಣೆ, ಆಶಯ, ಗುರಿ ಮುಂತಾದವುಗಳ ಬಗೆಗಿನ ವಿಚಾರವನ್ನು ಒಳಗೊಂಡು ತನ್ನ ವ್ಯಾಪಕತೆಯಿಂದ ಮುಖ್ಯವೆನ್ನಿಸುತದೆ.

ಹೀಗೆ ಕವಿಯ ಅನುಭವದಲ್ಲಿ ರೂಪುಗೊಳ್ಳುವ ಕಾವ್ಯಕ್ರಿಯೆಯನ್ನು ಕಾವ್ಯದ ಗುಣಲಕ್ಷಣ ಪ್ರಯೋಜನಗಳನ್ನು ಕುರಿತು ಆಲೋಚಿಸುವ ಭಾರತೀಯ ಕಾವ್ಯಮೀಮಾಂಸೆ ಮತ್ತು ಈಗಾಗಲೇ ನಿರ್ಮಿತವಾಗಿರುವ ಕೃತಿ ಹಾಗೂ ಕೃತಿಕಾರರನ್ನು ಕುರಿತು ವಿವೇಚಿಸುವ ಪಾಶ್ಚಾತ್ಯ ಸಾಹಿತ್ಯ ವಿಮರ್ಶೆ ಈ ಎರಡೂ ಕಾವ್ಯವನ್ನು ವಿವರಿಸಲು ಮಾಡಿರುವ ಚಿಂತನೆಯ ನೆಲೆಗಳನ್ನು ಅದರ ಲಕ್ಷಣಗಳನ್ನು ಓ.ಎಲ್. ನಾಗಭೂಷಣಸ್ವಾಮಿ ಅವರು ನಾಲ್ಕು ಬಗೆಗಳಲ್ಲಿ ವರ್ಗೀಕರಿಸಿದ್ದಾರೆ.

೧. ಕವಿಯನ್ನು ಕೇಂದ್ರವಾಗಿಟ್ಟುಕೊಂಡು ನಿರೂಪಿಸಿದ ಲಕ್ಷಣಗಳು.

"ಕವೇಃ ಕರ್ಮ್ಯಕಾವ್ಯಂ"

'The whole soul of man in activity", The Spontaneous over flow of powerful feelings'

೨. ಕಾವ್ಯ ಮಾಧ್ಯಮದ ಭಾಷೆ ಮತ್ತು ಇತರ ಕಾವ್ಯತಂತ್ರಗಳನ್ನು ಆಧರಿಸಿದ ಲಕ್ಷಣಗಳು

ಶಬ್ದಾರ್ಥೌ ಸಹಿತೌ ಕಾವ್ಯಂ" ಇಷ್ಟಾರ್ಥವ್ಯವಚ್ಛಿನ ಪದಾವಳಿ", "ಕಾವ್ಯಂಗ್ರಾಹ್ಯಮಲಂಕಾರಾತ್" "ರೀತಿರಾತ್ಮ ಕಾವ್ಯಸ್ಯ", "ವಕ್ರೋಕ್ತಿಯುಳ್ಳ ವಾಕ್ಯ ವಿನ್ಯಾಸದಲ್ಲಿ ಸೇರಿಸುವ ಶಬ್ದಾರ್ಥಗಳು(ಒಟ್ಟಿಗೆ)

ಕಾವ್ಯ",[೬] "Beautiful words are the very and peculiar light of the mind", "The Best words in the best order", "Significant form."

೩. ಓದುಗನ ಮೇಲಾಗುವ ಪರಿಣಾಮಗಳನ್ನು ಆಧರಿಸಿ ಕಾವ್ಯದ ಅರ್ಥವನ್ನು ವಿವರಿಸಲು ಮಾಡಿರುವ ಪ್ರಯತ್ನಗಳು.

'ರಮಣೀಯಾರ್ಥವನ್ನು ಪ್ರತಿಪಾದಿಸುವ ಶಬ್ದವು ಕಾವ್ಯ', 'ಬಂಧೇ ವ್ಯವಸ್ಥಿತಾ ಕಾವ್ಯಂ ತದ್ವಿದಾಹ್ಲಾದಕಾರಿಣಿ.'

"Delight in chief of not the only end", "Empathy favourable to our existance".

೪. ಕವಿ ಕಾವ್ಯಪ್ರಪಂಚದ ವಾಸ್ತವಿಕತೆಗಳ ಸಂಬಂಧವನ್ನು ಗಮನಿಸಿದ ಕಾವ್ಯದ ವಿವರಣೆ:

"A Criticism of life, the Expression of imprission, The disimprisonment of soul of fact". "ಕಾವ್ಯಂಯಶಸೇ ಅರ್ಥಕೃತೇ ಶಿವೇತರ ಕ್ಷತಯೋ ವ್ಯವಹಾರವಿದೆ ಸದ್ಯ ಪರನಿರ್ವೃತಯೆ".[೧೧]

ಮೇಲಿನ ಹೇಳಿಕೆಗಳಲ್ಲಿ ಕಾವ್ಯವು ಶಬ್ದರೂಪವೆಂದೂ, ಅದಕ್ಕೆ ಅರ್ಥವಿದೆಯೆಂದೂ ಗೃಹೀತವಾಗುತ್ತದೆ. ಕೆಲವರು ಶಬ್ದ ಮುಖ್ಯವೆಂದರೆ ಇನ್ನು ಕೆಲವರು ಅರ್ಥ ಮುಖ್ಯವೆಂದು ಹೇಳಿದ್ದಾರೆ. ಹಾಗೆ ಎರಡೂ ಮುಖ್ಯ ಎನ್ನುವ ಅಭಿಪ್ರಾಯಗಳೂ ಇವೆ. ಇಷ್ಟಾದರೂ 'ಕಾವ್ಯ' ಎನ್ನುವುದಕ್ಕೆ 'ಇದಮಿತ್ಥಂ' ಎನ್ನಬಹುದಾದ ಸರ್ವಸಮ್ಮತವಾದ ಉತ್ತರ ದೊರೆತಿಲ್ಲ. ಕಾವ್ಯ ಸೃಷ್ಟಿಗೆ ಮೂಲಕಾರಣವಾದ ನವನವೋನ್ಮೇಷಶಾಲಿನಿಯಾದ ಅಪೂರ್ವ ವಸ್ತುವನ್ನು ನಿರ್ಮಿಸುವ ಪ್ರಜ್ಞೆಯಾದ ಪ್ರತಿಭೆ ಮತ್ತು ಇತರ ಗುಣಗಳಾದ ಲೋಕಜ್ಞಾನ, ಜನ್ಮಸಂಸ್ಕಾರ ಇತ್ಯಾದಿ ವಿಷಯಗಳ ಮೂಲಕ ಕೂಡ ಈ ಮೂಲಭೂತ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಕಾವ್ಯದ ವಸ್ತು, ಭಾವ, ಭಾಷೆಯಂಥ ಮೂಲ ಸಾಮಗ್ರಿಗಳು, ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸಗಳಂಥ ಗುಣಗಳು ಪರಸ್ಪರ ಔಚಿತ್ಯಪೂರ್ಣವಾಗಿ ವಿಶಿಷ್ಟ ರೀತಿಯಲ್ಲಿ ಸೃಜನಶೀಲವಾಗಿ ಕಲೆತು ರಸಾನುಭವಕ್ಕೆ ಕಾರಣವಾಗುವ ಒಂದು ಅಪೂರ್ವ ಅಭಿವ್ಯಕ್ತಿ ರೂಪವಾದ ಕಾವ್ಯದ ಸೃಷ್ಟಿ. "ತಾನೇ ತಾನಾಗಿ ಆಗುವ ಒಂದು ಘಟನೆ, ಅತ್ಯಂತ ಕೌಶಲದಿಂದ ಇಚ್ಛಾಪೂರ್ವಕವಾಗಿ ಯೋಜಿಸಲ್ಪಡುವ ರಚನೆ, ಅದೊಂದು ಕಾಣ್ಕೆ, ಕನಸು, ಭ್ರಮೆ ಮತ್ತು ಇವೆಲ್ಲವನ್ನೂ ಮೀರಿಸುವ ದಿವ್ಯ ರಹಸ್ಯ".[೧೨] ಗೌರೀಶ ಕಾಯ್ಕಿಣಿ ಮಾತಿನಲ್ಲಿ "...ಅರ್ಥದ ಮರ್ಮ, ಮಾತಿನ ಧ್ವನಿ ಭಾವಕ್ಕೆ ತಕ್ಕ ಲಯದಲ್ಲಿ ಆವಿರ್ಭವಿಸಿ ಕಲ್ಪನೆಯ ಬಣ್ಣ ಬೆಳಕು ಪಡೆದು ಸಮರ್ಪಕ ಪ್ರತಿಮೆಯಾಗಿ ಯಥಾರ್ಥ ಪ್ರತೀಕವಾಗಿ 'ನೆವಕೆ ನುಡಿಯನ್ನು ತೊಟ್ಟು' ವಾಙ್ಞಯವಾಗಿ ಪ್ರತಿಫಲಿಸಿದರೆ ಅದು ಕಾವ್ಯ; ಅದು ಗದ್ಯಗಂಧಿಯೋ ಪದ್ಯಗಂಧಿಯೋ, ಮದ್ಗಂಧಿಯೋ ಏನೇ ಇರಲಿ ಈ ಕಾವ್ಯ ಯೋಜನಗಂಧಿ: ಕಾವ್ಯವೆಂದರೇನು ಎಂಬುದಕ್ಕಿಂತ ಕಾವ್ಯವೆಂದರೆ ಏನಲ್ಲ ಎಂಬುದನ್ನು ಹೇಳುವುದು ಹೆಚ್ಚು ಸುಲಭ..."[೧೩]

ಈ ಮೇಲಿನ ಅಭಿಪ್ರಾಯಗಳನ್ನು ಗಮನಿಸಿದರೆ ಕೊನೆಯಲ್ಲಿ ತೀ.ನಂ.ಶ್ರೀ.ಯವರ ಕಾವ್ಯವೆಂದರೆ ಏನೆಂಬುದು ಅನುಭವಕ್ಕೆ ಗೊತ್ತು ಬಾಯಿಮಾತಿನಲ್ಲಿ ಖಚಿತವಾಗಿ ಹೇಳುವುದು ಕಷ್ಟ" ಎಂಬ ತೀರ್ಮಾನವನ್ನು ಅನುಮೋದಿಸಬೇಕಾಗುತ್ತದೆ.

## ೨.೨. ಅಭಿವ್ಯಕ್ತಿಯ ವಿನ್ಯಾಸಗಳು

ಅಭಿವ್ಯಕ್ತಿ ಕ್ರಿಯೆಯಲ್ಲಿ ಭಾಷೆ, ಶೈಲಿ, ತಂತ್ರ, ವಸ್ತು, ನಿರೂಪಣೆಗಳು ಸಾಹಿತ್ಯ ರಚನೆಯ ಆಧಾರಸ್ತಂಭವಾಗಿವೆ. ಮಹಿಳೆಯರ ಅಭಿವ್ಯಕ್ತಿ ವಿನ್ಯಾಸವು ಒಳಗೊಂಡ ಸಾಹಿತ್ಯದ ತಾಂತ್ರಿಕ ಮತ್ತು ತಾತ್ವಿಕ ಅಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಕಾವ್ಯದ ಅಭಿವ್ಯಕ್ತಿಯ ಲಕ್ಷಣಗಳನ್ನು ಈ ಮುಂದಿನಂತೆ ಅವಲೋಕಿಸಲಾಗಿದೆ.

ಅಭಿವ್ಯಕ್ತಿ ವಿನ್ಯಾಸದ ತಾತ್ವಿಕ ಸ್ವರೂಪವನ್ನು ನಿಘಂಟಿನ ಅರ್ಥ ಮತ್ತು ತಾತ್ವಿಕ ಅರ್ಥದಲ್ಲಿ ವಿಂಗಡಿಸಿ ಅಧ್ಯಯನ ಮಾಡಬಹುದಾಗಿದೆ. 'ಅಭಿವ್ಯಕ್ತಿ' ಎಂಬ ಪದದಲ್ಲಿ 'ಅಭಿ' ಮತ್ತು 'ವ್ಯಕ್ತಿ' ಅಥವಾ 'ವ್ಯಕ್ತ' ಎಂಬ ಎರಡು ಪದಗಳಿವೆ. ಅವ್ಯಯ ರೂಪವಾದ 'ಅಭಿ' ಎಂಬ ಶಬ್ದವು ಉಪಸರ್ಗವಾಗಿ, ಕರ್ಮ ಪ್ರವಚನೀಯವಾಗಿ ವಿಶೇಷಣವಾಗಿ ಬಳಕೆಯಾಗುತ್ತದೆ. ಲಕ್ಷಣ; ಚಿಹ್ನೆ; ಗುರುತು; ವ್ಯಾಪ್ತಿ; ಇಚ್ಛೆ; ಸುತ್ತಲೂ; ಒಳಗೆ, ಮುಂಭಾಗ ಮಾತು, ಭಾಗ, ಪಾಲು ಮುಂತಾದ ಅರ್ಥಗಳನ್ನು ಹೊಂದಿದೆ. ವ್ಯಕ್ತ ಎಂಬ ಪದವು ಸ್ಫುಟವಾದ, ಸ್ಪಷ್ಟವಾದ ಗೋಚರವಾಗುವ; ಕಣ್ಣಿಗೆ ಕಾಣಿಸುವ; ಚೆನ್ನಾಗಿ ತಿಳಿಯಬಹುದಾದ ಎಂಬ ಅರ್ಥದಲ್ಲಿ ವಿಶೇಷಣ ಕ್ರಿಯಾ ವಿಶೇಷಣವಾಗಿ ಬಳಕೆಯಾಗಿದೆ 'ವ್ಯಕ್ತಿ' ಪದವು ವಿಮರ್ಶೆಯಿಂದ ಕಂಡುಬರುವ ವ್ಯತ್ಯಾಸ ಸ್ಪಷ್ಟವಾಗಿ ತೋರುವಿಕೆ; ದೃಷ್ಟಿಗೆ ಗೋಚರವಾಗುವಿಕೆ; ಸ್ಪಷ್ಟತೆ; ಸ್ಫುಟವಾಗಿರುವಿಕೆ; ನಿಜ ಸ್ವರೂಪ; ಯಥಾರ್ಥವಾದ ರೂಪ; ಪ್ರತ್ಯೇಕವಾದ ಚರಾಚರಾಭವಿತಗಳು: ಶಬ್ದ ಲಿಂಗಗಳಿಗೆ ಇರುವ ಅರ್ಥವನ್ನು ವ್ಯಕ್ತಗೊಳಿಸುವ ಶಕ್ತಿಯಾಗಿದೆ. ಮೇಲಿನ ಎರಡು ಪದಗಳು ಸೇರಿದ 'ಅಭಿವ್ಯಕ್ತಿ' ಎಂಬ ಪದಕ್ಕೆ ಸ್ಪಷ್ಟವಾಗಿ ಕಾಣುವಿಕೆ; ಪ್ರಕಟವಾಗಿರುವಿಕೆ; ಸೂಕ್ಷ್ಮ ರೂಪದಲ್ಲಿದ್ದುದರ ಸ್ಥೂಲ ರೂಪದಿಂದ ಕಾಣಿಸಿಕೊಳ್ಳುವಿಕೆಯ ಅರ್ಥವನ್ನು ಹೊಂದಿದೆ.

ಇಂಗ್ಲೀಷಿನ 'Expression' ಎಂಬ ಪದಕ್ಕೆ ಸಂವಾದಿಯಾಗಿ 'ಅಭಿವ್ಯಕ್ತಿ' ಎಂಬ ಪದವನ್ನು ಕನ್ನಡದಲ್ಲಿ ಬಳಸಲಾಗುತ್ತದೆ. 'Expression' ಎಂದರೆ ಹೊರಸೂಸುವಿಕೆ; ನಿರೂಪಣೆ; ನಿರೂಪಿಸುವುದು; ಭಾವನೆಗಳ ಗುಣಗಳ ಪ್ರಕಟ; ನುಡಿಯುವುದು; ಹೇಳಿಕೆ; ಮಾತಿನಲ್ಲಿ ತಿಳಿಯಪಡಿಸುವಿಕೆ; ಪದಪ್ರಯೋಗ; ಪದವಿನ್ಯಾಸ; ಮಾತಿನ ಜೋಡಣೆ; ವಾಕ್ಸರಣಿ; ಪದ, ಶಬ್ದ, ಪದಗುಚ್ಛ; ಪದಶಕ್ತಿ, ಶಬ್ದಶಕ್ತಿ, ಪದಗಳ ಯಾ ಮಾತಿನ ಮೂಲಕ ಅಭಿವ್ಯಕ್ತಗೊಳ್ಳುವ ಶಕ್ತಿ; ಮುಖಭಾವ, ಮುಖಭಂಗಿ; ಕಂಠದ ಧ್ವನಿ, ಏರಿಳಿತ ಉಚ್ಚಾರ ರೀತಿ; ಅಭಿವ್ಯಕ್ತಿ ವ್ಯಂಜನೆ, ಶೀಲ, ಗುಣಭಾವ, ಮೊದಲಾದವುಗಳನ್ನು ನಿರೂಪಿಸುವ ರೀತಿ ಎಂಬ ಅರ್ಥವನ್ನು ಹೊಂದಿದೆ.

ಅಭಿವ್ಯಕ್ತಿಯ ಸ್ವರೂಪವನ್ನು ಕುರಿತು ಅಭಿನವಗುಪ್ತನು ತನ್ನ ಕೃತಿಯಾದ 'ಅಭಿನವ ಭಾರತಿ'ಯಲ್ಲಿ ಸಾಂದರ್ಭಿಕವಾಗಿ ವಿಶ್ಲೇಷಿಸಿದ್ದಾನೆ. ಅಭಿವ್ಯಕ್ತಿಯು ಒಂದು ವ್ಯವಸ್ಥಿತವಾದ ಕ್ರಿಯೆ. ಒಳಗಡೆ ಇರುವ ಸಂಗ್ರಹದಿಂದ ಒಂದು ಆಯ್ಕೆ ಅದಕ್ಕೆ ಅಗತ್ಯ. ಆದ್ದರಿಂದ ಅಭಿವ್ಯಕ್ತಿ ಕ್ರಿಯೆಯು ಜ್ಞಾನ, ಇಚ್ಛೆ ಹಾಗೂ ಆತ್ಮಚೈತನ್ಯ ಅಥವಾ ಆನಂದಗಳನ್ನು ಪೂರ್ವಭಾವಿಯಾಗಿ ಹೊಂದಿರುತ್ತದೆ. ಆತ್ಮಾನಂದ ಇರದಿದ್ದರೆ ಇಚ್ಛೆ ಇರುವುದಿಲ್ಲ. ಇಚ್ಛೆ ಇಲ್ಲದಿದ್ದರೆ ಯಾವ ಜ್ಞಾನವೂ ಸಾಧ್ಯವಿಲ್ಲ. ವಿಷಯವನ್ನು ಪಡೆಯುವ ಸಾಧನದ ಮತ್ತು ಮಾರ್ಗಗಳ ಜ್ಞಾನವಿರದಿದ್ದರೆ ವ್ಯವಸ್ಥಿತವಾದ ಕ್ರಿಯೆ ಇರುವುದಿಲ್ಲ. ಆದ್ದರಿಂದ ವಿಶ್ವಾತ್ಮವನ್ನು ಕುರಿತಂತೆ ವಿಮರ್ಶೆ ಎಂಬ ಶಬ್ಧವು ಅನುಕ್ರಮವಾಗಿ ಆತ್ಮಪ್ರಜ್ಞೆ ಅಥವಾ ಇಚ್ಛೆ, ಜ್ಞಾನ ಮತ್ತು ಕ್ರಿಯೆ ಇವುಗಳನ್ನು ಉಂಟುಮಾಡುವ ಶಕ್ತಿಯನ್ನು ಸೂಚಿಸುತ್ತದೆ.[೧೫] ಅಭಿನವಗುಪ್ತನು ಅಭಿವ್ಯಕ್ತಿಗೆ ಸಂಬಂಧಿಸಿದಂತೆ 'ಪ್ರಕಾಶ', 'ವಿಮರ್ಶೆ' ಎಂಬ ಪರಿಭಾಷೆಗಳನ್ನು ಬಳಸಿದ್ದಾನೆ. 'ಪ್ರಕಾಶ' ಎನ್ನುವುದನ್ನು ಅಭಿವ್ಯಕ್ತಿಯ ಆಂತರ್ಯದೊಳಗೆ ಅಡಗಿರುವ ಪರತತ್ವದ ರೂಪವಾಗಿಯೂ 'ವಿಮರ್ಶೆ' ಎನ್ನುವುದು ಆನಂದ, ಇಚ್ಛಾಜ್ಞಾನ ಮತ್ತು ಕ್ರಿಯೆಗಳಿಗೆ ಕಾರಣವಾದ ಅಭಿವ್ಯಕ್ತಿಯ ಶಕ್ತಿಯ ಅಂಶವನ್ನು ಸೂಚಿಸುತ್ತದೆ. ಕನಸಿನ ಅಥವಾ ಕಲ್ಪನೆಯ ವಸ್ತುಗಳು ವ್ಯಕ್ತಿಯೊಬ್ಬನ ಮನಸ್ಸಿನಿಂದ ಕಲ್ಪಿತವಾಗಿರುವಂತೆಯೇ ಅಭಿವ್ಯಕ್ತಿಗೊಂಡಿರುವ ಜಗತ್ತು ಪರತತ್ವದಿಂದ ಕಲ್ಪಿತವಾಗಿದೆ ಎಂದು ಈ ಸಿದ್ಧಾಂತ ಭಾವಿಸುತ್ತದೆ. ಸಹೃದಯನ ಮನಸ್ಸಿನಲ್ಲಿ ಸುಪ್ತವಾಗಿ ಇದ್ದದ್ದು ಸ್ಫುಟವಾಗಿರುವುದು ಅಭಿವ್ಯಕ್ತಿ ಎನ್ನಲಾಗಿದೆ.

ಇಟಲಿಯ ಬೆನೆಡೆಟ್ಟೋ ಕ್ರೋಚೆಯು ಅಭಿವ್ಯಕ್ತಿಯ ಕುರಿತು ತನ್ನ 'Phylosophy of spirit or mind' ಕೃತಿಯಲ್ಲಿ ಚರ್ಚಿಸುತ್ತಾನೆ. "All arts is Expression, therefore all Expression is art" ಎನ್ನುವುದು ಆತನ ಅಭಿಪ್ರಾಯ. ಮುಂದುವರಿದು "ಈ ಪ್ರಪಂಚದಲ್ಲಿ ಸತ್ಯಕ್ಕೇನಾದರೂ ಆಧಾರವಿದ್ದರೆ ಅದು ಮನಸ್ಸಿಗೆ ಅರ್ಥವಾದದ್ದು. ಸತ್ಯವನ್ನು ತಿಳಿದುಕೊಳ್ಳಲು ನಾವು ಅವಲೋಕಿಸುವ ಈ ಲೋಕದ ವಿಷಯಗಳೆಲ್ಲ ನಿಜವಾಗಿ ಇರುವುದು ವಾಸ್ತವಿಕ ಜಗತ್ತಿನಲ್ಲಲ್ಲ; ಮನಸ್ಸಿನಲ್ಲಿ. ಈ ಎಲ್ಲ ಸತ್ಯದ ಅರಿವಿನಿಂದ ತುಂಬಿದ ಮನಸ್ಸು ಒಂದು ಪ್ರಕ್ರಿಯೆ. ಅನೇಕ ರೀತಿಗಳಿಂದ ಅನೇಕವನ್ನು ಗ್ರಹಿಸಿದರೂ ಮನಸ್ಸೊಂದು ಏಕರೂಪದ ಚಟುವಟಿಕೆ. ನಾವೊಂದು ದೃಶ್ಯವನ್ನು ನೋಡಿದರೆ, ಅ ದೃಶ್ಯವು ಮನದ ಕ್ರಿಯೆಯಾಗಿ ಪರಿವರ್ತನೆಗೊಂಡು ಅಭಿವ್ಯಕ್ತಗೊಳ್ಳುತ್ತದೆ. ಇದು ಆ ದೃಶ್ಯದ ಸತ್ಯ; ಅಸ್ತಿತ್ವ[೧೬] ಕ್ರೋಚೆಯ ಪ್ರಕಾರ 'ಪ್ರತಿಭಾನ'(Intuition)ವೇ ಅಭಿವ್ಯಕ್ತಿಯ ಮುಖ್ಯ ಸಾಧನವಾಗಿದೆ. ಪ್ರತಿಭಾನ ಎಂದರೆ "ನಮ್ಮ ಚಿತ್ ಈ ಲೋಕಾನುಭವವನ್ನು ಎರಡು ರೀತಿಯಲ್ಲಿ ಗ್ರಹಿಸುತ್ತದೆ. ಒಂದು ಪ್ರತಿಭಾನದ ಮೂಲಕ ಮತ್ತೊಂದು ಬುದ್ಧಿವ್ಯಾಪಾರದ ಮೂಲಕ. ಮೊದಲನೆಯದು ಒಂದು ರಸ ವ್ಯಾಪಾರ. ಎರಡನೆಯದು ತಾರ್ಕಿಕ ವ್ಯಾಪಾರ. ತರ್ಕ ಪ್ರತಿಭಾನವನ್ನು ಅವಲಂಬಿಸಿದ್ದರೂ ಪ್ರತಿಭಾನವು ತರ್ಕವನ್ನು ಅವಲಂಬಿಸಿಲ್ಲ. ಈ ಪ್ರತಿಭಾನ ಎನ್ನುವುದು ಎಲ್ಲರಲ್ಲೂ ಇದೆ. ಅದು ವಸ್ತುಗಳಿಗೆ ಮನಸ್ಸು ಮಿಡಿಯುವುದರಿಂದ ಆಗುವ

ಸಂವೇದನಾ ಜ್ಞಾನವಲ್ಲ ಅಥವಾ ಬುದ್ಧಿಪೂರ್ವಕವಾಗಿ ಗ್ರಹಿಸುವ ವಿಧಾನವೂ ಅಲ್ಲ. ಅದೊಂದು ನಿರಂತರತೆಯನ್ನು ಗ್ರಹಿಸುವ ಶಕ್ತಿ."[೧೭]

ಒಂದು ಭಾವನೆ ಯಾವುದೇ ತರ್ಕವಿಲ್ಲದೆ, ಅಪ್ರಯತ್ನಪೂರ್ವಕವಾಗಿ, ಕವಿಯ ಮನಸ್ಸಿನಲ್ಲಿ ಮೈದುಂಬಿಕೊಂಡಾಗಲೇ ಪ್ರತಿಭಾನ ಸಂಭವಿಸಿದೆ. ಈ ಪ್ರತಿಭಾನವನ್ನೇ ಅಭಿವ್ಯಕ್ತಿ ಎಂದು ಕ್ರೋಚೆ ಕರೆದಿದ್ದಾನೆ. ಹೀಗಾಗಿ ಕಲೆಯು ವೈಯಕ್ತಿಕವಾದ ತೀರ ಖಾಸಗಿಯಾದ ಅಭಿವ್ಯಕ್ತಿಯಾಗಿದ್ದು, ಅದನ್ನು ಹೊರರೂಪಕ್ಕೆ ಇಳಿಸಿದರೆ, ಮೂಲಭಾವನೆ ಕಾಣೆಯಾಗಿ ಅದರ ಛಾಯೆ ಮಾತ್ರ ಉಳಿಯುತ್ತದೆ. ಕಲೆಯ ಬಗ್ಗೆ ಮಾಡುವ ವಿಶ್ಲೇಷಣೆ, ವರ್ಗೀಕರಣ, ರೂಪಕಗಳು, ಆಲಂಕಾರಿಕ ಭೇದಗಳನ್ನು ಕ್ರೋಚೆಯ ಸಿದ್ಧಾಂತ ಅಲ್ಲಗಳೆಯುತ್ತದೆ.

ವಿದ್ವಾಂಸರು ಚರ್ಚಿಸುವ ಮಿತಿಗಳೇನೆ ಇದ್ದರೂ ಮೊದಲ ಬಾರಿಗೆ ಕ್ರೋಚೆ ಅಭಿವ್ಯಕ್ತಿಯ ಆವಿರ್ಭಾವವು ಮನಸ್ಸಿನ ಭಾವನೆಗೆ, ಅಂತರಂಗಕ್ಕೆ ಸಂಬಂಧಿಸಿದ್ದೆಂದು ಹೇಳಿರುವುದು ಮಹತ್ವದ್ದಾಗಿದೆ. ಪ್ರತಿಭಾನ ಕೇವಲ ಕಲಾಕಾರನದು ಮಾತ್ರವಲ್ಲ. ಅದನ್ನು ಆಸ್ವಾದಿಸುವ ಸಹೃದಯನಲ್ಲೂ ಇದೆ ಎಂಬುದರ ಕಡೆಯೂ ಲಕ್ಷ್ಯ ವಹಿಸಿದ್ದಾನೆ. ಅಭಿವ್ಯಕ್ತಿಯ ಹೊರ ರೂಪವನ್ನು ಅಲ್ಲಗಳೆಯುತ್ತಾನೆಂದು ತೋರಿದರೂ ಕಲೆಯ ಭಾಗವಾಗಿ ಮನದಲ್ಲಿ ಮೂಡಿದ ಅಭಿವ್ಯಕ್ತಿಯ ಛಾಯೆಯಾಗಿ ಅದನ್ನು ಒಪ್ಪಿಕೊಳುತ್ತಾನೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕಲೆಯ ತಿರುಳನ್ನು 'ಭಾವ'ವೆಂದು ಸೂಚಿಸಿದ ಕ್ರೋಚೆ ಭಾವಕ್ಕೆ ವಿಶಿಷ್ಟ ಸ್ಥಾನ ನೀಡಿರುವುದು ಗೋಚರಿಸುತ್ತದೆ.

ವಿ.ಕೃ. ಗೋಕಾಕ್ ಅವರು ಮಗು ಜನ್ಮ ತಳೆಯುವ ಮುನ್ನ ಬೆಳೆಯುವ ಹಂತದ ರೂಪಕದಲ್ಲಿ ಅಭಿವ್ಯಕ್ತಿಯ ಕ್ರಮವನ್ನು ವಿವರಿಸಿದ್ದಾರೆ. ವಾಸ್ತವಿಕ ಬದುಕಿನಲ್ಲಿ ಪಡೆದ ಅನುಭವ ಸ್ಥಾಯಿಯಾಗುವುದು ಮೊದಲನೆಯ ಹಂತದ್ದಾದರೆ, ನಂತರ ಆ ಪಿಂಡಕ್ಕೆ ಕೈ ಕಾಲುಗಳು ಕಣ್ಣು, ಮೂಗು ಇತರ ಅಂಗಗಳು ರೂಪುಗೊಳ್ಳುವುದು/ವಿಕಾಸಗೊಳ್ಳುವುದು ಮುಂದಿನ ಹಂತ. ಕೊನೆಯ ಹಂತದಲ್ಲಿ ಕವಿಯಿಂದ/ಕಲಾಕಾರನಿಂದ ಆ ಕೃತಿ ಬಿಡುಗಡೆಗೊಳ್ಳಬೇಕು. ತಾಯಿಯ ಗರ್ಭದೊಳಗೆ ನವಮಾಸದ ಅವಧಿಯಲ್ಲಿ ಪಿಂಡವಾಗಿ ನಂತರ ಶಿಶುವಾಗಿ ಭೂಮಿಗೆ ಹೇಗೆ ಬರುತ್ತದೋ ಹಾಗೆಯೇ ಕೃತಿಯೊಂದರ ಸೃಷ್ಟಿಯೂ ಆಗಿದೆ ಎಂದು ವಿವರಿಸುತ್ತಾರೆ. ಅಭಿವ್ಯಕ್ತಿಯ ಮಾರ್ಗವನ್ನು ಕುರಿತು "ಯಾವುದೇ ಒಂದು ಸಾಲು ಮನಸ್ಸಿನ ಕ್ಷಿತಿಜದ ಮೇಲೆ ಮೂಡುತ್ತದೆ. ಕಲಾಕೃತಿಯು ನಾಟಕ ಇಲ್ಲವೇ ಕಾದಂಬರಿಯಾಗುವುದಿದ್ದರೆ ಯಾವುದೋ ಒಂದು ಸನ್ನಿವೇಶ ಮನಸ್ಸಿನಲ್ಲಿ ಅರಳುತ್ತದೆ. ಕವಿಯು ಅದನ್ನು ಬರೆದು ತೆಗೆಯುತ್ತಾನೆ. ಆಮೇಲೆ ಅದರ ಹಿಂದಿನ ಇಲ್ಲವೆ ಮುಂದಿನ ಸಾಲುಗಳಲ್ಲಾಗಲಿ, ಸನ್ನಿವೇಶಗಳಾಗಲಿ ಜೋಡಿಸಿಕೊಂಡು ಬರುತ್ತವೆ. ಕವಿ ಅವುಗಳ ಲಿಪಿಕಾರನಾಗುತ್ತಾನೆ. ಲೇಖನ ಕಾರ್ಯ ವ್ಯವಸ್ಥಿತವಾಗಿ ಹೇಗೆ ಪ್ರಾರಂಭವಾಗಿ ಬೆಳೆಯುತ್ತಾ ಹೋಗಬೇಕೋ ಹಾಗೆ ಆಗಬಹುದು. ಇಲ್ಲವೇ ಮಧ್ಯಭಾಗದಲ್ಲಿಯೇ ಧುಮುಕಿ ಅಲ್ಲಿಂದ ಹಿಂದೆ

ಮುಂದೆ ಸಾಗಬಹುದು. ಅಭಿವ್ಯಕ್ತಿಯ ಮಾರ್ಗ ಸ್ವಚ್ಛಂದವಾದುದು. ಅದಕ್ಕಾವ ನಿರ್ಬಂಧವೂ ಇಲ್ಲ. ಅದು ಸ್ವಾನಂದದ ಮಾರ್ಗ."[೧೮]

ಭಾಷೆಯ ಮೂಲಕ ಕೃತಿಯನ್ನು ಸೃಷ್ಟಿಸುವುದು ಎಷ್ಟು ಮುಖ್ಯವೋ ಅದು ಸಾಹಿತ್ಯಾಸಕ್ತರನ್ನು ತಲುಪುವುದೂ ಅಷ್ಟೇ ಮುಖ್ಯವಾಗಿದೆ. ಅಭಿವ್ಯಕ್ತಗೊಂಡ ಸಾಹಿತ್ಯವು ಸಹೃದಯರನ್ನು ತಲುಪುವ ವಿಧಾನವೇ ಸಂವಹನವಾಗಿದೆ. ಅಭಿವ್ಯಕ್ತಿ ಹಾಗೂ ಸಂವಹನಗಳೆರಡೂ ಒಂದರೊಳಗೊಂದು ಬೆಸೆದುಕೊಂಡಿವೆ. ಇವುಗಳ ಅನ್ಯೋನ್ಯತೆಯನ್ನು ಕುರಿತು ಯಶವಂತ ಚಿತ್ತಾಲರು "ಭಾಷೆಗಿರುವ ಇಬ್ಬಗೆಯ ಸಾಮರ್ಥ್ಯ ಒಂದು; ಸುಪ್ತಪ್ರಜ್ಞೆಯನ್ನು ಪ್ರತಿಮೆಗಳ ಮೂಲಕ ಪ್ರಕಟಿಸುವ ಸಾಮರ್ಥ್ಯ. ಇದನ್ನೇ ನಾನು 'ಅಭಿವ್ಯಕ್ತಿ'ಯೆಂದು ಕರೆಯುತ್ತೇನೆ. ಇನ್ನೊಂದು; ಹೀಗೆ ಪ್ರತಿಮೆಯಾಗಿ ಮೂಡಿದ್ದನ್ನು ಉಳಿದವರೊಂದಿಗೆ ಹಂಚಿಕೊಂಡು, ಹಂಚಿಕೊಳ್ಳುವುದರ ಮೂಲಕವೇ ಅದನ್ನು ಜಾಗೃತಪ್ರಜ್ಞೆಯಲ್ಲಿ ಅರಗಿಸಿಕೊಳ್ಳುವ ಸಾಮರ್ಥ್ಯ. ಇದನ್ನೇ ನಾನು 'ಸಂವಹನ' ಎಂದು ಕರೆಯುತ್ತೇನೆ. ಸುಪ್ತ ಪ್ರಜ್ಞೆಯ ಆವಿಷ್ಕಾರಕ್ಕೆ ಭಾಷೆ ನಿರ್ಮಿಸಿದ ಪ್ರತಿಮೆಗಳಲ್ಲಿ ಉಳಿದವರೊಂದಿಗೆ ಹಂಚಿಕೊಂಡು, ಹಂಚಿಕೊಳ್ಳುವುದನ್ನು ಸಾಧ್ಯಮಾಡುವ ಕೊಂಡಿಗಳಿವೆ. ಈ ಕೊಂಡಿಗಳ ಮೂಲಕ ತನ್ನ ಅಂತರಂಗಕ್ಕೂ ಪರಿಸರಕ್ಕೂ ನಡುವೆ ಲೇಖಕ ಸಂಬಂಧ ಜೋಡಿಸುತ್ತಾನೆ. ಆ ಸಂಬಂಧವನ್ನು ಜೋಡಿಸುವುದರಲ್ಲೇ ಅಥವಾ ಜೋಡಿಸುವುದನ್ನು ತಪ್ಪಿಸದೇ ಇರುವುದರಲ್ಲೇ ಸೃಷ್ಟಿಕ್ರಿಯೆಯ ನಿಜವಾದ ಆನಂದವಿರುತ್ತದೆ; ತನಗೆ 'ಅಭಿವ್ಯಕ್ತಿ'ಸಲೇಬೇಕಾದ ಭಾವನೆಯಿಂದ ವಿಮೋಚನೆ ಪಡೆಯುವುದೇ ಹೀಗೆ ಹಂಚಿಕೊಳ್ಳುವುದರಿಂದ, ಅದರ 'ಸಂವಹನೆ'ಯಿಂದ.[೧೯]

'ಸಂವಹನ' ಎನ್ನುವುದಕ್ಕೆ ಸಾಗಿಸುವುದು, ತಿಳಿಯಪಡಿಸುವುದು ಎಂಬ ಅರ್ಥಗಳಿವೆ. ಇದಕ್ಕೆ ಸಂವಾದಿಯಾದ ಇಂಗ್ಲಿಶ್ ಪದ Communication.[೨೦] "ಒಂದು ಮನಸ್ಸು, ಇನ್ನೊಂದು ಮನಸ್ಸನ್ನು ಪ್ರಭಾವಿತಗೊಳಿಸುವಂತೆ ಸುತ್ತಲ ಪರಿಸರದಲ್ಲಿ ತೊಡಗಿಸಿಕೊಂಡಾಗ, ಆ ಇನ್ನೊಂದು ಮನಸ್ಸಿನಲ್ಲಿ ಮೊದಲ ಮನಸ್ಸಿನಲ್ಲಿ ಇದ್ದಂತಹ ಅನುಭವ ಉಂಟಾಗುತ್ತದೆ ಮತ್ತು ಹಾಗಾಗುವುದಕ್ಕೆ ಆ ಮೊದಲ ಮನಸ್ಸಿನ ಅನುಭವ ಭಾಗಶಃ ಕಾರಣವಾಗಿರುತ್ತವೆ" ಎಂದು ಐ.ಎ.ರಿಚರ್ಡ್ಸ್ ಸಂವಹನೆಯ ಪ್ರಕ್ರಿಯೆಯನ್ನು ವಿವರಿಸುತ್ತಾನೆ. ಮಾತು, ಬರವಣಿಗೆ, ಸಂಜ್ಞೆ, ಮುಖಭಾವ ದೇಹದ ಭಂಗಿ ಇವು ಸಂವಹನೆಯ ಮಾಧ್ಯಮಗಳಾಗಿ ವರ್ತಿಸುತ್ತವೆ.[೨೧] 'ವಿನ್ಯಾಸ'ಕ್ಕೆ ಸಂವಾದಿಯಾದ ಇಂಗ್ಲಿಶ್ ಪದ 'Style'. ಪಾಶ್ಚಾತ್ಯ ವಿಮರ್ಶೆಯಲ್ಲಿ ಅತಿ ಪ್ರಾಚೀನವಾದ ಮತ್ತು ಅತಿಯಾದ 'ಹಿಂಸೆ'ಗೆ ಗುರಿಯಾಗಿರುವ ಪರಿಭಾಷೆಗಳಲ್ಲಿ ಒಂದು. ಈ ಪದದ ಅರ್ಥ, ವಿವರಣೆಗಳು ವಿವಾದಾಸ್ಪದ; ಪರಿಕಲ್ಪನೆಯ ಔಚಿತ್ಯಪ್ರಶ್ನಿತ ಶೈಲಿ ಕುರಿತು ತಕ್ಕಮಟ್ಟಿಗೆ ಒಪ್ಪಿತವಾದ ವಿವರಣೆ– "ಶೈಲಿ ಅಭಿವ್ಯಕ್ತಿಯ ಒಂದು ವಿಧಾನ, ಭಾಷೆಯ ಒಂದು ಮುಖ. ಇದಕ್ಕೆ ಮಹತ್ವ ಬರುವುದು ವೈಯಕ್ತಿಕ ಹಾಗೂ ಸಾಂಸ್ಕೃತಿಕ ಅಂಶಗಳಿಂದಲೇ ಹೊರತು ಶಾಬ್ದಿಕ ಅಂಶಗಳಿಂದ ಅಲ್ಲ."[೨೨]

ಶೈಲಿಯನ್ನು ಸಾಮಾನ್ಯ ಅರ್ಥದಲ್ಲಿ 'ವಿಶಿಷ್ಟ ಲಕ್ಷಣ'ವಾಗಿ ಗುರುತಿಸಲಾಗಿದೆ. ಕವಿ ಮತ್ತು ಕೃತಿಗಳನ್ನು ಕುರಿತು ಚರ್ಚಿಸುವಾಗ ಆಯಾ ಕವಿಗಳ ಭಾಷಿಕ ವೈಶಿಷ್ಟ್ಯಗಳನ್ನು ಆಯಾ ಕವಿಗಳ

ಶೈಲಿ ಎಂದು ಕರೆಯುಲಾಗಿದೆ. "ಸಾಹಿತ್ಯ ಕೃತಿಯ ಭೌತಿಕ ಅಸ್ತಿತ್ವವೇ ಭಾಷಿಕ. ಭಾಷೆಯ ಒಂದು ವಿಶಿಷ್ಟ ಉಪಯೋಗಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ ನಿಯುಕ್ತವಾಗುವುದು ಒಂದು. ಸಾಮಾನ್ಯಗ್ರಹಿಕೆಗೂ ನಿಲುಕುವ ವಿಚಾರವೆಂದರೆ ಸಾಹಿತ್ಯಕೃತಿಗಳ ಭಾಷೆ ನಿಯಮದ ಭಾಷೆಗಿಂತ ಭಿನ್ನವಾಗಿರುವುದು. ಈ ಭಿನ್ನತೆ ಎಲ್ಲಿದೆ, ಏಕಿದೆ ಎಂಬುದನ್ನು ವಿವರಿಸುವುದಕ್ಕೆ ಸಾಧ್ಯವಿಲ್ಲದವರೂ ಭಿನ್ನತೆ ಇರುವುದನ್ನು ಗುರುತಿಸಬಲ್ಲರು. ಈ ಭಿನ್ನ ಬಳಕೆ ಬಾಹ್ಯ ಒತ್ತಡಗಳಿಂದ ಆದುದಲ್ಲ. ಅಲ್ಲದೆ ಅಲ್ಲಿನ ವ್ಯತ್ಯಾಸಗಳು ಆಕಸ್ಮಿಕವೆಂದೂ ಹೇಳುವಂತಿಲ್ಲ. ಯಾಕೆಂದರೆ ವ್ಯತ್ಯಾಸಗಳ ಸ್ವರೂಪ ಬಹುಮಟ್ಟಿಗೆ ನಿಯತವಾಗಿದ್ದು ನಿರ್ದಿಷ್ಟ ನಿಯೋಗಗಳನ್ನು ಪಡೆದಿರುತ್ತದೆ.[೨೩]

ಎಸ್.ವಿ. ರಂಗಣ್ಣನವರು ಶೈಲಿಶಾಸ್ತ್ರದ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದಾರೆ. 'ಆಲೋಚನೆಯ ಉಡುಗೆ ಶೈಲಿ' ಎಂಬ ವ್ಯಾಖ್ಯಾನದಿಂದ ಹಿಡಿದು ಶೈಲಿ ಎಂಬುದು 'ಲೇಖಕನ ಅಂಗಿಯಲ್ಲಿ ತೊಗಲು', 'ಶೈಲಿ ವದನ ತೇಜಸ್ಸಿನಂತೆ', 'ಕವಿಯೇ ಶೈಲಿ', 'ಶೈಲಿ ಮಾನವನ ಆತ್ಮ' ಎಂಬ ಪಾಶ್ಚಾತ್ಯ ವಿದ್ವಾಂಸರ ವ್ಯಾಖ್ಯಾನಗಳನ್ನು ವಿಶ್ಲೇಷಣೆ ಮಾಡಿದ್ದಾರೆ. "ನಾನಾ ಕಾರಣಗಳು ಒಟ್ಟಿಗೆ ಸೇರಿ ಸಹಕರಿಸಿ ತಮ್ಮ ತಮ್ಮ ಪ್ರಮಾಣಗಳಲ್ಲಿ ಪ್ರಭಾವವನ್ನು ಬೀರುವುದರ ಫಲವಾಗಿ ಶೈಲಿ ಉದ್ಭವಿಸುತ್ತದೆ. ಅವೆಲ್ಲವನ್ನೂ ಎಣಿಸಿ ಹೇಳಲು ಅಸಾಧ್ಯ. ಹಾಗೆ ಎಣಿಸಿ ಗುಣಿಸುವುದರಿಂದ ಉಪಯೋಗವೂ ಕಡಿಮೆ. ಅದನ್ನು ಹೀಗೆ ಸ್ಥೂಲವಾಗಿ ಮೂರು ಗುಂಪು ಮಾಡಬಹುದು; ಜನಾಂಗ, ತಲೆಮಾರು, ವ್ಯಕ್ತಿಬಲ, ಶೈಲಿಯನ್ನು ಸೃಷ್ಟಿಸಬಲ್ಲ ಎಲ್ಲ ದ್ರವ್ಯಗಳನ್ನೂ ಈ ಮೂರು ವಿಭಾಗಗಳಲ್ಲಿ ಅಡಕ ಮಾಡುವುದು ಕಷ್ಟವಲ್ಲ"[೨೪] ಎಂದು ಬರಹದ ಶೈಲಿಯನ್ನು ವಿಭಾಗಿಸುವ ರಂಗಣ್ಣನವರು "ಶೈಲಿಗೆ ನೆಲೆಗಟ್ಟು ಕಂಬ, ಗೋಡೆಮಾಡ, ಕಳಶ-ಗಿಳಶಗಳೆಲ್ಲವೂ ಸಾಹಿತಿಯ ವ್ಯಕ್ತಿತ್ವ ಕವಿಯಂತೆ ಶೈಲಿ ಶೈಲಿಯಿಂದ ಕವಿ' ಎಂಬ ತೀರ್ಮಾನಕ್ಕೆ ಬರುತ್ತಾರೆ.

ಎ. ಶಂಕರ್ ಅವರು ಶೈಲಿಯನ್ನು ಕುರಿತು. "ಯಾವ ಬರಹಗಾರ ತನ್ನ ಭಾಷೆಯ ವ್ಯಾಕರಣ, ಶಬ್ದಾರ್ಥ ರೀತಿ ಮತ್ತು ಜಾಯಮಾನಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಅವಕ್ಕೆ ತನ್ನ ವೈಯಕ್ತಿಕ ಭಾವಗಳ ಒತ್ತಡಕ್ಕೆ ತಕ್ಕಂತೆ ಹೊಸ ವ್ಯಾಪ್ತಿ ಕೊಡುತ್ತಾನೋ ಅವನಲ್ಲಿ 'ಶೈಲಿ' ಎನ್ನುವುದಿದೆ ಎಂದು ಹೇಳಬಹುದು. ಅಂದರೆ, ಬರಹಗಾರ ಶಬ್ದಾರ್ಥಗಳ ಜೊತೆ ಕಾದಾಡುತ್ತಲೇ ತನ್ನ ಶೈಲಿಯನ್ನು ಸೃಷ್ಟಿಸಿಕೊಳ್ಳಬೇಕು."[೨೫]

**ಟಿಪ್ಪಣಿಗಳು**

೧. ಎಚ್. ತಿಪ್ಪೇರುದ್ರಸ್ವಾಮಿ, ತೌಲನಿಕ ಕಾವ್ಯ ಮೀಮಾಂಸೆ, ಪುಟ ೧೪೫.

೨. ಅದೇ, ಪುಟ ೩೬೭.

೩. ಅದೇ, ಪುಟ ೩೬೮.

೪. ಡಾ. ಸೋಮನಾಥ ಯಾಳವಾರ; 'ತೌಲನಿಕ ಕಾವ್ಯಮೀಮಾಂಸೆ-ಒಂದು ಸಮೀಕ್ಷೆ, 'ಅಕ್ಷರ ಪ್ರೀತಿ', ಪುಟ ೯.

೫. ಕೆ.ವಿ.ಪುಟ್ಟಪ್ಪ(ಪ್ರಸಂ). ಕನ್ನಡ ಕೈಪಿಡಿ-ಸಂಪುಟ-೧. ಪುಟ ೩೪, ೧೭೯.

೬. ಅದೇ, ಪುಟ ೧೭೯.

೭. ಎಚ್. ತಿಪ್ಪೇರುದ್ರಸ್ವಾಮಿ ತೌಲನಿಕ ಕಾವ್ಯ ಮೀಮಾಂಸೆ, ಪುಟ ೯೨.

೮. ಎಚ್. ತಿಪ್ಪೇರುದ್ರಸ್ವಾಮಿ ತೌಲನಿಕ ಕಾವ್ಯ ಮೀಮಾಂಸೆ, ಪುಟ ೯೭.

೯. ಅದೇ, ಪುಟ ೯೭.

೧೦ ಅದೇ, ಪುಟ ೯೭.

೧೧. ನಾಗಭೂಷಣಸ್ವಾಮಿ ಓ.ಎಲ್., ವಿಮರ್ಶೆಯ ಪರಿಭಾಷೆ, ಪುಟ ೧೪೧.

೧೨. ರಾಮಚಂದ್ರನ್ ಸಿ.ಎನ್., ಕಾವ್ಯ ಸೃಷ್ಟಿಯ ಸ್ವರೂಪ, 'ಆಶಯ-ಆಕೃತಿ', ಪುಟ ೭೫.

೧೩. ಗೌರೀಶ ಕಾಯ್ಕಿಣಿ, ಕಾವ್ಯವೆಂದರೇನು? "ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು", ಪುಟ ೩೩.

೧೪. ನಾಗಭೂಷಣ ಸ್ವಾಮಿ ಓ.ಎಲ್., ವಿಮರ್ಶೆಯ ಪರಿಭಾಷೆ, ಪುಟ ೧೪೦.

೧೫. ಜಿ.ಟಿ. ದೇಶಪಾಂಡೆ(ಮೂಲ), ಎನ್ ಬಾಲಸುಬ್ರಹ್ಮಣ್ಯಂ(ಅನುವಾದ) 'ಅಭಿನವಗುಪ್ತ', ಪುಟ ೩೯.

೧೬. ಪಿ.ವಿ. ಶಾಸ್ತ್ರಿ, 'ಸಾಹಿತ್ಯದಲ್ಲಿ ತತ್ವವಾದಗಳು', ಪುಟ ೭೬.

೧೭. ಜಿ.ಎಸ್. ಶಿವರುದ್ರಪ್ಪ, ಕಾವ್ಯಾರ್ಥ ಪದಕೋಶ, ಪುಟ ೨೦.

೧೮. ವಿ.ಕೃ. ಗೋಕಾಕ್, 'ಕಲಾಸಿದ್ಧಾಂತ', ಪುಟ ೧೯.

೧೯. ಯಶವಂತ ಚಿತ್ತಾಲ, 'ಸಾಹಿತ್ಯ, ಸೃಜನಶೀಲತೆ ಮತ್ತು ನಾನು', ಪುಟ ೮೩.

೨೦. ಪ್ರೊ. ಎಲ್.ಎಸ್. ಶೇಷಗಿರಿರಾವ್, 'ಸುಭಾಷ್ ನಿಘಂಟು', ಪುಟ ೪೪೮.

೨೧. ಓ.ಎಲ್. ನಾಗಭೂಷಣಸ್ವಾಮಿ, ವಿಮರ್ಶೆಯ ಪರಿಭಾಷೆ, ಪುಟ ೨೭೫.

೨೨. ಅದೇ, ಪುಟ ೨೬೧.

೨೩. ಕೆ.ವಿ. ನಾರಾಯಣ, ಶೈಲಿಶಾಸ್ತ್ರ, ಪುಟ ೩.

೨೪ ಎಸ್.ವಿ. ರಂಗಣ್ಣ, ಶೈಲಿ ೧, ೨, ೩, ಪುಟ ೧೮.

೨೫. ಡಿ.ಎ. ಶಂಕರ್, ದಶವಾರ್ಷಿಕ ವಿಮರ್ಶೆ(೧೯೭೪-೮೩), ಕೆ.ಎಸ್. ನಿಸಾರ್ ಅಹಮದ್(ಪ್ರಸಂ), ಎಲ್.ಎಸ್. ಶೇಷಗಿರಿರಾವ್(ಸಂ), ಪುಟ ೧೩೦.



## ಅಧ್ಯಾಯ : ಮೂರು

# ಆಧುನಿಕ ಮಹಿಳಾಕಾವ್ಯ : ಪ್ರಭಾವ, ಪ್ರೇರಣೆಗಳು

೩.೧. ಸಾಹಿತ್ಯಕ ಪ್ರಭಾವ ಪ್ರೇರಣೆಗಳು

೩.೨. ಸಾಹಿತ್ಯೇತರ ಪ್ರಭಾವ ಪ್ರೇರಣೆಗಳು

### ಅಧ್ಯಾಯ : ಮೂರು

# ಆಧುನಿಕ ಮಹಿಳಾಕಾವ್ಯ : ಪ್ರಭಾವ, ಪ್ರೇರಣೆಗಳು

ವೇದಕಾಲದಿಂದ ಆರಂಭಿಸಿ ಇಪ್ಪತ್ತನೆಯ ಶತಮಾನದ ಪ್ರಾರಂಭದವರೆಗೂ ಸಮಾಜದಲ್ಲಿ ಹೆಣ್ಣನ್ನು ಕುರಿತ ದೃಷ್ಟಿಕೋನ ಸಾಂಪ್ರದಾಯಿಕವಾಗಿರುವಂತೆಯೇ, ಮಹಿಳೆಯರು ಲಿಖಿತವಾದ ಸಾಹಿತ್ಯಕ ಲೋಕದಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಳ್ಳದಿರುವುದೂ ಕಂಡುಬರುತ್ತದೆ. ಇಷ್ಟೆಲ್ಲಾ ದೀರ್ಘಕಾಲದ ಮೌನ ಮುರಿದು ಏಕಾಏಕಿ ಧ್ವನಿ ಬಂದವರಂತೆ ಕಾವ್ಯಲೋಕದಲ್ಲಿ ತಮ್ಮದೇ ಛಾಪನ್ನು ಸಂಖ್ಯೆ ಮತ್ತು ಗುಣ ಎರಡರಲ್ಲೂ ಎದ್ದು ಕಾಣುವಂತಹ ಮಹಿಳಾ ಕಾವ್ಯದ ಬೆಳವಣಿಗೆಯ ಹಿಂದಿರಬಹುದಾದ ಪ್ರಭಾವ, ಪ್ರೇರಣೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೩.೧. ಸಾಹಿತ್ಯಕ ಪ್ರಭಾವ, ಪ್ರೇರಣೆಗಳು

ಇಂಗ್ಲಿಶ್ ಸಾಹಿತ್ಯದ ಪ್ರಭಾವದಿಂದ ಬೆಳೆದುಬಂದ 'ನವೋದಯ'ವೆಂದು ಗುರುತಿಸಲ್ಪಡುವ ಸಾಹಿತ್ಯಕ ಕಾಲಘಟ್ಟ ಮಹಿಳೆಯರನ್ನು ಸಾಹಿತ್ಯಕವಾಗಿ ತೊಡಗಿಸಿಕೊಂಡದ್ದು ಅಪರೂಪ. ಆದರೂ ಸಮಕಾಲೀನ ಚಿಂತನೆಗಳಾದ ರಾಷ್ಟ್ರಭಕ್ತಿ, ಪ್ರಕೃತಿಪ್ರೇಮ, ಆದರ್ಶವಾದಗಳು ಮಹಿಳೆಯರನ್ನು ಸಾಹಿತ್ಯದತ್ತ ಆಕರ್ಷಿಸಿದ್ದನ್ನು ಅಲ್ಲಗಳೆಯುವಂತಿಲ್ಲ. ಸ್ವಾತಂತ್ರ್ಯೋತ್ತರ ಕಾಲದ ಸಾಹಿತ್ಯಕ ವಾತಾವರಣದಲ್ಲಿ 'ಪ್ರಗತಿಶೀಲ' ಪಂಥದಿಂದ ಮಹಿಳಾ ಬರಹಗಾರರು ಪ್ರಭಾವಿತರಾಗಿದ್ದರೂ, ಕಾವ್ಯಕ್ಕಿಂತ ಕಾದಂಬರಿ, ಸಣ್ಣಕತೆ ಪ್ರಕಾರಗಳು ಹೆಚ್ಚು ಗುರುತಿಸಿಕೊಂಡವು. 'ನವ್ಯ'ಕಾವ್ಯದ ಚಿಂತನೆಗಳು ಕಾವ್ಯದಿಂದ ಸಮಾಜಕ್ಕೆ ಏನೂ ಆಗಬೇಕಾಗಿಲ್ಲ ಎನ್ನುವ ಉದಾಸೀನ ಪ್ರವೃತ್ತಿ ಮೂಡಿ ಅಂತರ್ಮುಖ ವ್ಯಕ್ತಿತ್ವದ ಹುಡುಗಾಟದಲ್ಲಿ ಗಮನ ಕೇಂದ್ರೀಕರಿಸಿದವು. ಈ ಕಾಲಘಟ್ಟದಲ್ಲಿ ಸಾಮಾಜಿಕ ಧೋರಣೆಗಿಂತ ವೈಯಕ್ತಿಕ ಸಮಸ್ಯೆಗಳು ಪ್ರಧಾನ ನೆಲೆಗೆ ಬಂದುದಲ್ಲದೆ ಇತರೆ ಪ್ರಕಾರಗಳಿಗಿಂತ ಕಾವ್ಯ ಹೆಚ್ಚು ಪ್ರಖರತೆಯನ್ನು ಕಂಡಿತು. ಕಾವ್ಯವು ಸಾಮಾಜಿಕ ಮೌಲ್ಯಗಳ ಒರೆಗಲ್ಲಾಯಿತು. ವ್ಯಕ್ತಿತ್ವದ ಔನ್ನತ್ಯ, ದೌರ್ಬಲ್ಯ, ಸಣ್ಣತನಗಳನ್ನು ಬಯಲುಗೊಳಿಸಿತು. ಇಲ್ಲಿ ಮಾನಸಿಕ ವಿಶ್ಲೇಷಣೆಗೆ ಹೆಚ್ಚು ಗಮನ ನೀಡಲಾಗಿದೆ. ಬದುಕಿನ ವಿಶ್ಲೇಷಣೆಯಲ್ಲಿ ಹೊಸ ಶೋಧಕವಾಗಿ ಭಾಷೆ ಬಳಕೆಗೊಂಡದ್ದೊಂದು ವಿಶೇಷ. ಸಾವಯವ ಸಮಗ್ರತೆಯ ಶಿಲ್ಪದ

ಪರಿಕಲ್ಪನೆಯನ್ನು ಹುಟ್ಟು ಹಾಕಲಾಯಿತು. ವಿಮರ್ಶೆಗೆ ಹೆಚ್ಚು ಒತ್ತು ಸಿಕ್ಕಿತು. ವಾಸ್ತವದ ಚಿತ್ರಣ ಬಾಹ್ಯ ಜಗತ್ತಿನಲ್ಲಿರದೆ, ಮನುಷ್ಯನ ಪ್ರಜ್ಞೆಯಲ್ಲಿದೆಯೆಂಬುದನ್ನು ಮನಗಾಣಿಸಲು ಪ್ರಯತ್ನಿಸಲಾಯಿತು. ಮುಕ್ತ ಅಭಿವ್ಯಕ್ತಿಯ ಹಂಬಲದಿಂದ ಸಾಂಪ್ರದಾಯಿಕ ಮಡಿವಂತಿಕೆಯನ್ನು ಬರಹಗಾರರು ಕೊಡವಿ ನಿಂತರು. ಈ ಕಾಲದಲ್ಲಿ ವಸ್ತು, ತಂತ್ರ, ಶೈಲಿಯ ದೃಷ್ಟಿಯಿಂದಲೂ ವಿಶಿಷ್ಟತೆಯನ್ನು ಸಾಧಿಸಲು ಪ್ರಯತ್ನಿಸಲಾಗಿದೆ. ಈ ಎಲ್ಲ ಲಕ್ಷಣಗಳೊಂದಿಗೆ ಹೆಣ್ಣಿನ ಮನಸ್ಸಿನ ಮುಕ್ತ ಅಭಿವ್ಯಕ್ತಿ ಮಹಿಳೆಯರ ಬರವಣಿಗೆಯ ಮುಖ್ಯ ಹಿತಾಸಕ್ತಿಯಾಯಿತು.

ಕ್ರಿ.ಶ. ೧೯೭೦ರ ನಂತರ ವ್ಯಕ್ತಿವಾದಿ ನೆಲೆಗೆ ವಿರುದ್ಧವಾಗಿ, ಸಮಾಜವಾದಿ ನೆಲೆಯಲ್ಲಿ ಆಲೋಚಿಸುವ 'ದಲಿತ-ಬಂಡಾಯ'ದ ಉದ್ದೇಶಗಳು ಮಹಿಳಾ ಬರಹಗಾರರನ್ನು ಪ್ರೇರೇಪಿಸಿದವು.

ಕನ್ನಡದ ಮಟ್ಟಿಗೆ ಮಾತ್ರವಲ್ಲದೆ, ಜಾಗತಿಕವಾಗಿಯೂ ಮಹಿಳಾ ಜೀವನದ ಎಲ್ಲ ಸ್ತರಗಳ ಬದಲಾವಣೆಗೆ ಕಾರಣವಾದ ಚಿಂತನೆ ಸ್ತ್ರೀವಾದ. ಕ್ರಿ.ಶ. ೧೯೭೫ರ ವೇಳೆಗೆ ಮಹಿಳಾ ಚಿಂತನೆಗಳು ಜಗತ್ತಿನ ಗಮನ ಸೆಳೆದವು. ಸಿಮೋನ್ ದಿ ಬುವಾ ಮುಂತಾದ ಸ್ತ್ರೀವಾದಿಗಳಿಂದ ರೂಪಿಸಲ್ಪಟ್ಟ ಸ್ತ್ರೀವಾದಿ ಚಳುವಳಿಯ ಕಾವು ಕರ್ನಾಟಕಕ್ಕೂ ಪ್ರವೇಶಿಸಿತು. ಇದರಿಂದ ಸಾಂಪ್ರದಾಯಿಕವಾದ ಮಹಿಳಾ ಅವಗಣನೆ ಮರುಪರಿಶೀಲನೆಗೆ ಒಳಗಾಯಿತು. ಬದಲಾದ ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ಮಹಿಳಾ ಸಮಸ್ಯೆಗಳ ಸ್ವರೂಪವೂ ಬದಲಾಗಿದೆ. ಬಾಲ್ಯವಿವಾಹ, ವಿಧವಾವಿವಾಹ, ಅಂತರ್ಜಾತೀಯ ವಿವಾಹ, ಸ್ತ್ರೀಶಿಕ್ಷಣ ಮುಂತಾದ ಚರ್ಚೆಗಳು ಹಿನ್ನೆಲೆಗೆ ಸರಿದು, ಕೌಟುಂಬಿಕ ಕಲಹಗಳು, ಸಮಾನತೆಯ ಪ್ರಶ್ನೆ, ಲೈಂಗಿಕ ದಬ್ಬಾಳಿಕೆ, ಮಾನಭಂಗ ಮುಂತಾದ ಸಂಗತಿಗಳು ಮುಖ್ಯವಾಗಿ ಕಾಣಿಸಿಕೊಂಡಿವೆ. ಮದುವೆ, ವೈವಾಹಿಕ ತಾಕಲಾಟಗಳು, ಪ್ರೀತಿ, ಪ್ರೇಮ ಮುಂತಾದ ಸಂಗತಿಗಳನ್ನು ಪುನರವಲೋಕನಕ್ಕೆ ಒಡ್ಡಿರುವುದು ಕಂಡುಬರುತ್ತದೆ. ೭೦-೮೦ರ ದಶಕದಲ್ಲಿ ಅಧ್ಯಾಪಕಿಯರು ಹೆಚ್ಚಿನ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರೆ, ಇಂದು ಎಲ್ಲ ಬಗೆಯ ಉದ್ಯೋಗಸ್ಥರೂ ತಮ್ಮ ಸ್ವಯಂನಿರ್ಬಂಧಿತ ಮಿತಿಗಳನ್ನು ಮೀರಿ ಬರೆಯುವ ಆತ್ಮವಿಶ್ವಾಸವನ್ನು ದಿಟ್ಟತನವನ್ನು ಬೆಳೆಸಿಕೊಳ್ಳಲು ಅನೇಕ ಮಹಿಳಾ ಚಳುವಳಿಗಳು ಕಾರಣವಾಗಿವೆ. ವರ್ತಮಾನದ ಹೊಸ ಅರಿವಿನಲ್ಲಿ ಸ್ತ್ರೀ ವ್ಯಕ್ತಿತ್ವವನ್ನು ಪುನರ್‌ನಿರ್ಮಿಸುವ ಕೆಲಸವನ್ನು ಮಹಿಳೆಯರು ಮಾಡುತ್ತಿದ್ದಾರೆ. ಸಾಮಾಜಿಕ ಸ್ವಾಸ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಜವಾಬ್ದಾರಿಯುತ ಬರವಣಿಗೆಗೆ ತೊಡಗಿದ್ದಾರೆ.

'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ'ಯಲ್ಲಿ ಸಮಕಾಲೀನ ಮಹಿಳಾಕಾವ್ಯವನ್ನು ಕುರಿತು ಹೀಗೆ ಹೇಳಲಾಗಿದೆ. "...ಹೆಚ್ಚಿನವರಿಗೆ ಕವಿತೆಯು ಒಂದು ಸಾಹಿತ್ಯಕ ಹವ್ಯಾಸಕ್ಕಿಂತ ಹೆಚ್ಚಾಗಿ ತಮ್ಮ ಮನಸ್ಥಿತಿಯನ್ನು ಪ್ರಕಟಪಡಿಸುವ ಅನಿವಾರ್ಯ ಮಾಧ್ಯಮವಾಗಿದೆ ಎಂಬುದು ಗಮನಕ್ಕೆ ಬರುತ್ತದೆ. ಕವಿತೆಗಳ ವಸ್ತುವನ್ನು ಹಾಗೂ ಅದರಲ್ಲಿ ತೊಡಗಿದವರನ್ನು ನೋಡಿದರೆ ಈ ಅಂಶ ಇನ್ನೂ ಸ್ಪಷ್ಟವಾಗುತ್ತದೆ. ಎಷ್ಟೋ ಕವಯಿತ್ರಿಯರು ಹೇಳಿಕೊಂಡಿರುವಂತೆ ಅವರು ಕವಿತೆ

ಬರೆಯುವುದು ತಮ್ಮ ನೋವಿನ ಒತ್ತಡಗಳಿಂದ ಬಿಡುಗಡೆ ಪಡೆಯಲು ತಮ್ಮ ನೋವು ಹಾಗೂ ವಿಷಾದಗಳಿಗೆ ದನಿ ಕೊಡಲು ತಾವು ಯಾರಿಗೂ ಹೇಳಿಕೊಳ್ಳಲಾಗದ ತಲ್ಲಣಗಳನ್ನು, ಅನುಭವಗಳನ್ನು ಕವಿತೆಯ ರೂಪದಲ್ಲಿ ಹೊರಗಡೆವಿದ್ದಾರೆ".[೧]

### ೩.೨. ಸಾಹಿತ್ಯೇತರ ಪ್ರಭಾವ, ಪ್ರೇರಣೆಗಳು

ಭಾರತದ ಆಡಳಿತವನ್ನು ತನ್ನ ಕೈಗೆತ್ತಿಕೊಂಡ ಬ್ರಿಟಿಷ್ ಸರ್ಕಾರ ಭಾರತೀಯರ ಜೀವನ ವಿಧಾನದಲ್ಲಿ ಬದಲಾವಣೆಗಳಿಗೆ ಕಾರಣವಾಗಬಹುದಾದಂತಹ ಅನೇಕ ಕ್ರಮಗಳನ್ನು ಕೈಗೊಂಡಿದೆ. ಬ್ರಿಟಿಷರು ತಮ್ಮ ಆಡಳಿತದ ಸೇವೆಗೆ ಭಾರತೀಯರನ್ನು ಬಳಸಿಕೊಳ್ಳಲು, ಅಕ್ಷರಲೋಕಕ್ಕೆ ದೂರವಾಗಿದ್ದ ಶೂದ್ರ ಜನಾಂಗಗಳಿಗೆ ಪ್ರಥಮ ಬಾರಿಗೆ ವಿದ್ಯಾಭ್ಯಾಸದ ಅವಕಾಶದ ಬಾಗಿಲನ್ನು ತೆರೆದರು. ಗ್ರಾಮಜೀವನ ಮತ್ತು ಗ್ರಾಮೀಣ ಅರ್ಥವ್ಯವಸ್ಥೆ ಮೂಲವಾಗಿದ್ದ ಭಾರತೀಯ ಸಮಾಜಕ್ಕೆ ಕೈಗಾರಿಕೀಕರಣದ ಬದಲಾವಣೆಯ ಗಾಳಿ ಬೀಸಿ, ಕೈಗಾರಿಕಾ ಕೇಂದ್ರಗಳು ಸ್ಥಾಪನೆಯಾಗಿ ತನ್ಮೂಲಕ ನಗರಸಮಾಜ ಬೆಳವಣಿಗೆ ಕಂಡುಕೊಂಡಿತು. ಪರಿಣಾಮವಾಗಿ ಅವಿಭಕ್ತ ಕುಟುಂಬಗಳ ವಿಘಟನೆ, ನಗರಕ್ಕೆ ಬಂದು ವಾಸಿಸುವ ವಿಭಕ್ತ ಕುಟುಂಬಗಳಲ್ಲಿ ಹೆಣ್ಣಿನ ಪಾಲ್ಗೊಳ್ಳುವಿಕೆ ಹೆಚ್ಚಾಯಿತು. ಸಾಂಸಾರಿಕ ಸಮಸ್ಯೆಗಳನ್ನು ಬಿಡಿಸುವ ಸಮಾಲೋಚಕಳಾಗಿ ಆಕೆಯ ಸಹಭಾಗಿತ್ವ ಹೆಚ್ಚಾಯಿತು.

ಶಿಕ್ಷಣದ ವ್ಯಾಪಕತೆ, ಉದ್ಯೋಗದ ಅನಿವಾರ್ಯತೆಗಳು ಸಮಾನತೆ, ಸ್ವಾತಂತ್ರ್ಯ, ಸ್ತ್ರೀವಾದಿ ಸಂವೇದನೆಗಳನ್ನು ಜಾಗೃತಗೊಳಿಸಿದವು. ಮುದ್ರಣದ ಸೌಕರ್ಯ ಹೆಚ್ಚಿದಂತೆ ಕೇಳುಗರಾಗಿದ್ದವರು ಓದುಗರಾಗುತ್ತಾ ಬದಲಾದದ್ದು ವೈಚಾರಿಕತೆಯನ್ನು ಇನ್ನಷ್ಟು ವ್ಯಾಪಕಗೊಳಿಸಿತು.

ರಾಷ್ಟ್ರೀಯ ಹೋರಾಟದ ಫಲವಾಗಿ ಬಂದ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಈ ಹಿಂದಿನ ಸಮಸ್ಯೆಗಳು ಹೊಸಹೊಸ ರೂಪದಲ್ಲಿ ಕಾಣಿಸಿಕೊಳ್ಳತೊಡಗಿದವು. ವಿವಿಧ ಯೋಜನೆಗಳ ಅನುಷ್ಠಾನದ ಫಲವಾಗಿ ಹೆಣ್ಣುಮಕ್ಕಳ ಶಿಕ್ಷಣ, ಕೌಟುಂಬಿಕ ಕ್ಷೇಮಾಭಿವೃದ್ಧಿ, ಗರ್ಭಿಣಿ ಹಾಗೂ ಶಿಶು ಆರೋಗ್ಯ ಸಂರಕ್ಷಣೆ, ಕುಟುಂಬ ಯೋಜನೆ, ಮಹಿಳಾ ಕಾರ್ಮಿಕರ ಕ್ಷೇಮಾಭಿವೃದ್ಧಿ ಮುಂತಾದ ಕಾರ್ಯಕ್ರಮಗಳು ಸಾಮಾಜಿಕವಾಗಿ ಹೆಣ್ಣಿನ ಸ್ಥಾನಮಾನವನ್ನು ಸಬಲಗೊಳಿಸುವಲ್ಲಿ ಗಣನೀಯ ಪಾತ್ರ ವಹಿಸಿದವು.

ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ ಸಮಾಜದಲ್ಲಿ ಮಹತ್ತರ ಬದಲಾವಣೆಗೆ ಕಾರಣವಾದ ತುರ್ತುಪರಿಸ್ಥಿತಿ, ರಾಷ್ಟ್ರವ್ಯಾಪೀ ಚಳವಳಿಗೆ ಕಾರಣವಾಯಿತಲ್ಲದೆ 'ಬಂಡಾಯ'ವೆಂಬ ಸಾಹಿತ್ಯಕ ಚಳವಳಿಗೂ ನಾಂದಿಯಾಯಿತು. ಇದು ಹೆಣ್ಣನ್ನು ಕುರಿತ ದೃಷ್ಟಿಕೋನವನ್ನು ಬದಲಾಯಿಸಲು ಕಾರಣವಾಗುತ್ತಲೇ ಮಧ್ಯಮ ಮತ್ತು ದಲಿತವರ್ಗದ ಹೆಣ್ಣುಮಕ್ಕಳು ಬಂಡಾಯದ ಆಶಯಗಳ ಜೊತೆ ತಮ್ಮನ್ನು ಗುರುತಿಸಿಕೊಂಡು, ವಿಪುಲ ಕಾವ್ಯಸೃಷ್ಟಿಗೆ ತೊಡಗಿದರು. ಕೇವಲ ಸೀಮಿತ ವ್ಯಾಪ್ತಿಯಲ್ಲಿ ತಮ್ಮ ದೃಷ್ಟಿಕೋನವನ್ನಿರಿಸದೆ, ಅನ್ಯಾಯಕ್ಕೆ ಮೂಲವಾದ ಸಾಮಾಜಿಕ ಕಾರಣಗಳ

ಬಗೆಗೂ ಚಿಂತಿಸಿದರು. ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ದಮನಕ್ಕೆ ಒಳಗಾಗುವ 'ದಲಿತರು' ತಮ್ಮ ನೋವು, ಸಂಕಟ, ತಳಮಳಗಳನ್ನು, ಅನುಭವಿಸಿದ ಅಸ್ಪೃಶ್ಯತೆಯ ಭಾವನೆಗಳನ್ನು ಬರಹದ ಮೂಲಕ ಹಂಚಿಕೊಳ್ಳತೊಡಗಿದ್ದು, ಕನ್ನಡ ಸಾಹಿತ್ಯ ಹೊಸ ಅಲೆಯನ್ನು ತಲುಪಲು ಕಾರಣವಾಯಿತು. ಹೆಣ್ಣನ್ನು ಅಕ್ಷರದಿಂದ ವಂಚಿತರನ್ನಾಗಿ ಮಾಡಿದ ವ್ಯವಸ್ಥೆಯಲ್ಲಿ, ಮಹಿಳೆಯರು ಅಕ್ಷರಗಳ ಮೂಲಕ ಮಾತನಾಡಿದ್ದು ಸಾಹಿತ್ಯ ಚರಿತ್ರೆಯಲ್ಲಿ ದೊಡ್ಡ 'ಬಂಡಾಯ'ವಾಯಿತು.

ಹೀಗೆ ಬಾಹ್ಯವಾಗಿ ದೊರೆತ ಪ್ರೋತ್ಸಾಹ, ಬೆಂಬಲಗಳು ಹೆಣ್ಣಿನ ಅಂತಃಸ್ಸತ್ವವನ್ನು ಹೊರಗೆಳೆಯುವ ಪರೋಕ್ಷ ಸಾಧನಗಳಾಗಿ ಒದಗಿದವು. ಅಲ್ಲದೆ ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಳ್ಳುವಲ್ಲಿ ಮಹಿಳೆ ಕೂಡ ತನ್ನ ಚಾಣಾಕ್ಷತನವನ್ನು ಪ್ರಕಟಪಡಿಸಿದ್ದಾಳೆ.

ಹೀಗೆ ಕಾವ್ಯ ಸಾಮೂಹಿಕ, ಸಾಮಾಜಿಕ ಅಗತ್ಯಕ್ಕಿಂತಲೂ ವೈಯಕ್ತಿಕ ಪ್ರೇರಣೆಯಿಂದಲೇ ರೂಪ ತಳೆಯುತ್ತದೆ ಎಂಬುದನ್ನು ಈ ಮಾತುಗಳು ದೃಢೀಕರಿಸುತ್ತವೆ. ಜಿ.ಎಸ್. ಆಮೂರ ಅವರ ಅಭಿಪ್ರಾಯ ಇದನ್ನು ಇನ್ನಷ್ಟು ಬಲಪಡಿಸುತ್ತದೆ. "...ಈ ಅದ್ಭುತ ಪರಿವರ್ತನೆಯ ಹಿಂದಿನ ಪ್ರೇರಣೆಗಳ ಸ್ವರೂಪವನ್ನು ಅರಿತುಕೊಳ್ಳುವುದು ಮಹಿಳಾ ಕಾವ್ಯದ ಸಂದರ್ಭದಲ್ಲಿ ಅಗತ್ಯವಾಗಿ ನಡೆಯಬೇಕಾದ ಕಾರ್ಯ. ಇವುಗಳಲ್ಲಿ ನನ್ನ ದೃಷ್ಟಿಯಿಂದ ಅತ್ಯಂತ ಮಹತ್ವವಾದುದು ವೈಯಕ್ತಿಕ ಪ್ರತಿಭೆ. ಕಳೆದ ಎರಡು ದಶಕಗಳಲ್ಲಿ ಕಾವ್ಯ ಮಾಧ್ಯಮ ಹಲವಾರು ಪ್ರತಿಭಾವಂತ ಮಹಿಳೆಯರನ್ನು ಆಕರ್ಷಿಸಿದೆ. ನವ್ಯಕಾವ್ಯದ ಯಶಸ್ಸಿಗೆ ಅಡಿಗರ ವೈಯಕ್ತಿಕ ಪ್ರತಿಭೆ ಕಾರಣವಾದಂತೆ ವೈಯಕ್ತಿಕ ಪ್ರತಿಭೆಯೇ ಇಂದಿನ ಮಹಿಳಾ ಕಾವ್ಯದ ಪ್ರಯೋಗಶೀಲತೆಯನ್ನು, ಗುಣಮಟ್ಟವನ್ನು ನಿರ್ಧರಿಸಿದೆ".[೨] ಈ ಮಾತುಗಳು ಮಹಿಳೆಯ ಪಾಲಿಗೆ ಕಾವ್ಯ ಕೇವಲ ಮಾನಸಿಕ ಸಾಂತ್ವನ ನೀಡುವ ಸಾಧನ ಮಾತ್ರವಾಗದೆ ಆಕೆಯ ಸೃಜನಶೀಲತೆಯ, ಅಸ್ಮಿತೆಯ ಪ್ರಕಟಣೆಯ ಸಾಧನವೂ ಆಗಿದೆ.

ಹೀಗೆ ಕಾವ್ಯಕೃಷಿಯಲ್ಲಿ ಮಹಿಳೆ ತಡವಾಗಿ ಸೇರಿಕೊಳ್ಳಲು ಕಾರಣವಾದ ಅಡೆತಡೆಗಳು ಒಂದೊಂದಾಗಿ ಹಿಂದೆ ಸರಿಯಲು ಚಾರಿತ್ರಿಕವಾದ ಹಲವಾರು ಸಂಗತಿಗಳು ಕಾರಣವಾಗಿವೆ. ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಕಾರಣವಾದ ಈ ಸಂಗತಿಗಳೆಲ್ಲವೂ ಮಹಿಳೆ ತನ್ನನ್ನು ತಾನು ತೆರೆದುಕೊಳ್ಳಲು ಹಾಗೆಯೇ ತನ್ನ ಸುತ್ತಲ ಕಣ್ಣು ತೆರೆಸಲು ಸಹಕಾರಿಯಾಗಿದ್ದನ್ನು ಚಾರಿತ್ರಿಕವಾದ, ಸಮಕಾಲೀನವಾದ ಅಂಶಗಳೆಲ್ಲವೂ ಮನಗಾಣಿಸುತ್ತಿವೆ.

**ಟಿಪ್ಪಣಿಗಳು**

೧. ಎಚ್.ಎಸ್. ಶ್ರೀಮತಿ(ಸಂ), **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪುಟ ೩೬೫.

೨. ಜಿ.ಎಸ್. ಅಮೂರ(ಸಂ), (ಲೇ), **ಕೊರಳು-ಕೊಳಲು**, 'ಮಹಿಳಾ ಕಾವ್ಯ; ಸಾಧನೆ ಹಾಗೂ ಸಮಸ್ಯೆಗಳು', ಬೆಂಗಳೂರು, ೨೦೦೫.



## ಅಧ್ಯಾಯ : ನಾಲ್ಕು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಸಂವೇದನೆಯ ನೆಲೆಯಲ್ಲಿ

೪.೧. ಸ್ವೀಕೃತಿಯ ನೆಲೆ

೪.೨. ನಿರಾಕರಣೆಯ ನೆಲೆ

೪.೩. ರೂಪಾಂತರದ ನೆಲೆ

೪.೪. ಮುಖಾಮುಖಿಯ ನೆಲೆ

೪.೫. ಶೋಧದ ನೆಲೆ

## ಅಧ್ಯಾಯ : ನಾಲ್ಕು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಸಂವೇದನೆಯ ನೆಲೆಯಲ್ಲಿ

ಆಧುನಿಕ ಕಾವ್ಯಲೋಕಕ್ಕೆ ಪ್ರತಿಕ್ರಿಯಿಸಲು ಮಹಿಳೆಯರು ತಡವಾಗಿ ತೊಡಗಿಸಿಕೊಂಡರೂ ತಮ್ಮ ತಮ್ಮ ಸೈದ್ಧಾಂತಿಕ ನಿಲುವುಗಳೂ ವೈಯಕ್ತಿಕ ಪ್ರತಿಭೆಗಳಿಗೆ ಅನುಗುಣವಾಗಿ ಮಹಿಳಾ ಕಾವ್ಯ ಯಾವುದೋ ಒಂದು ಸಿದ್ಧಾಂತ, ದೃಷ್ಟಿಕೋನದ ಸೀಮಿತತೆಗೆ ಪಕ್ಕಾಗದೆ ಪರಸ್ಪರ ವೈರುಧ್ಯವೂ, ಪೂರಕವೂ ಆಗಬಹುದಾದ ಹಲವು ನೆಲೆಗಳಲ್ಲಿ ವಿಸ್ತರಿಸಿಕೊಂಡಿದೆ. ಅಧ್ಯಯನದ ಅನುಕೂಲಕ್ಕಾಗಿ ಮಹಿಳಾ ಕಾವ್ಯ ವಿನ್ಯಾಸವನ್ನು ನಾಲ್ಕು ಪ್ರಧಾನ ವಿಭಾಗಗಳಲ್ಲಿ ಅಧ್ಯಯನ ಮಾಡುವ ಮಿತಿಯನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಿಕೊಳ್ಳಲಾಗಿದೆ. ಕಾವ್ಯವೊಂದು ಬಹುಮುಖ ಆಯಾಮಗಳನ್ನು ಹೊಂದಿರುವ ಕಲಾಕೃತಿ ಎಂಬುದನ್ನು ಒಪ್ಪಿಕೊಳ್ಳುತ್ತಲೇ, ಸಂವೇದನೆ, ಭಾಷೆ, ಸಂವಹನ, ರಚನೆಗಳ ವಿನ್ಯಾಸದಲ್ಲಿ ಅದು ಕವಯಿತ್ರಿಯಿಂದ ಕವಯತ್ರಿಗೆ ಭಿನ್ನಗೊಳ್ಳುವುದೆಂಬ ಅಭಿಪ್ರಾಯದೊಂದಿಗೆ ಅಧ್ಯಯನ ಮುಂದುವರಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಮಹಿಳಾ ಕಾವ್ಯ ಒಳಗೊಂಡಿರುವ ಬಹುಮುಖ್ಯ ಸಂವೇದನೆಗಳ ವಿನ್ಯಾಸವನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ.

'ಸಂವೇದನೆ' ಎಂಬ ಪದಕ್ಕೆ ನಿಘಂಟು ನೀಡುವ ಅರ್ಥ, ಅನಿಸಿಕೆ, ಅನುಭವ, ತಿಳಿವಳಿಕೆ.[೧] ವಿಮರ್ಶೆಯ ಪರಿಭಾಷೆಯಲ್ಲಿ ಇದನ್ನು ಇನ್ನಷ್ಟು ವಿಸ್ತರಿಸಲಾಗಿದೆ. ಸಂವೇದನೆ ಎಂಬುದನ್ನು ಇಂಗ್ಲೀಷಿನ 'Sensibility' ಎಂಬ ಪದಕ್ಕೆ ಸಂವಾದಿಯಾಗಿ ಬಳಸುತ್ತಿದ್ದು, "ಆಧುನಿಕ ವಿಮರ್ಶೆಯಲ್ಲಿ ಯಾವುದೇ ಅನುಭವಕ್ಕೆ ವ್ಯಕ್ತಿಯೊಬ್ಬನ ವಿಶಿಷ್ಟವಾದ, ಭಾವನಾತ್ಮಕ ಮತ್ತು ಬೌದ್ಧಿಕ ಪ್ರತಿಕ್ರಿಯೆ ಎಂಬರ್ಥದಲ್ಲಿ ಬಳಕೆಯಾಗುತ್ತದೆ".[೨] ಮುಂದುವರಿದು "ಸಮಾಜದಲ್ಲಿ ನ್ಯಾಯವಾದದ್ದು ಯಾವುದು, ಪ್ರಕೃತಿಯಲ್ಲಿ ಜಗತ್ತಿನ ವ್ಯವಸ್ಥೆಯಲ್ಲಿ 'ಸುಂದರ'ವಾದದ್ದು ಯಾವುದು ಎಂಬುದನ್ನು ತಿಳಿಯುವುದಕ್ಕೆ Sensibilityಯಿಂದ ಸಾಧ್ಯ ಎಂಬ ನಂಬಿಕೆ ಬೆಳೆಯಿತು" ಎಂದು ವ್ಯಾಖ್ಯಾನವನ್ನು ವಿಸ್ತರಿಸಲಾಗಿದೆ. ಇದು ಒಂದು ನೈತಿಕ ಪ್ರಜ್ಞೆಯೂ ಹೌದು. ಆದರೆ ವೈಯಕ್ತಿಕ ಅಭಿರುಚಿಯ ತಳಪಾಯದ ಮೇಲೆ ನಿಂತಿರುವಂಥದು.... ಸಂವೇದನೆಯು ಒಂದು ಮಾನಸಿಕ ಕ್ರಿಯೆ ಎಂದು ಮುಂತಾಗಿ ಅರ್ಥೈಸಲಾಗಿದೆ. ಹೀಗೆ ಸಂವೇದನೆ ಮನಸ್ಸಿಗೆ ಸಂಬಂಧಿಸಿದ, ವೈಯಕ್ತಿಕ ಅಭಿರುಚಿಯ ಜೊತೆಗೆ, ನೈತಿಕ ಪ್ರಜ್ಞೆಯ ಕಾರಣದಿಂದ ಸಾಮೂಹಿಕವೂ ಆಗುತ್ತಾ ಹೋಗುವ ಸಂಕೀರ್ಣತೆಯನ್ನು

ಹೊಂದಿದೆ. ಈ ಕಾರಣದಿಂದಲೇ ಮಹಿಳಾಕಾವ್ಯದಲ್ಲಿ ಪೂರಕವಾದ, ವಿಭಿನ್ನವಾದ ನೆಲೆಗಳೆರಡರಲ್ಲೂ ಪ್ರತಿಕ್ರಿಯೆ ಕಂಡುಬರುತ್ತದೆ.

### ೪.೧. ಸ್ವೀಕೃತಿಯ ನೆಲೆ

ಸಾಂಪ್ರದಾಯಿಕ ಸಮಾಜದಲ್ಲಿ ಈಗಾಗಲೇ ಸ್ಥಾಪಿತಗೊಂಡಿರುವ ಮೌಲ್ಯ, ಆದರ್ಶ, ನಂಬಿಕೆಗಳನ್ನು ಒಪ್ಪಿಕೊಂಡು ಅವುಗಳ ಮುಂದುವರಿಕೆಗೆ ಮಹಿಳಾಕಾವ್ಯ ಕೂಡ ತನ್ನದೇ ರೀತಿಯಲ್ಲಿ ಸ್ಪಂದಿಸಿರುವುದನ್ನು ಈ ನೆಲೆಯಲ್ಲಿ ಗುರುತಿಸಲಾಗಿದೆ. ಮಹಿಳಾಕಾವ್ಯದಲ್ಲಿ ಸ್ವೀಕರಿಸಲಾದ ಪಾರಂಪರಿಕ ಆಶಯಗಳನ್ನು ಮೂರು ಉಪಶೀರ್ಷಿಕೆಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನಕ್ಕೊಂದು ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಅವುಗಳೆಂದರೆ :

ಅ. ಸ್ಮರಣೆ

ಆ. ಸ್ಪಂದನೆ

ಇ. ಅನುಸರಣೆ

ಯಾವುದೇ ಕವಯಿತ್ರಿಗೂ ತಾನಿರುವ ಕಾಲಕ್ಕೆ ದೇಶ, ಕಾಲಗಳ ಹಿನ್ನೆಲೆಯೊಂದು ಇದ್ದೇ ಇರುತ್ತದೆ. ಅವುಗಳ ಪ್ರಭಾವವನ್ನು ಮೀರಲೆತ್ನಿಸಿದರೂ, ಮೂಲಭೂತವಾಗಿ ಅವುಗಳ ಪ್ರಭಾವವನ್ನು ಒಪ್ಪಿಕೊಳ್ಳಲೇಬೇಕಾಗಿರುತ್ತದೆ. ಇದು ಕೆಲವೊಮ್ಮೆ ಅನಿವಾರ್ಯವಾಗಿದ್ದರೂ, ಅನೇಕ ಸಂದರ್ಭಗಳಲ್ಲಿ ಅಗತ್ಯವಾಗಿಯೂ ಕಾಣಿಸಬಹುದು. ಈ ಹಿನ್ನೆಲೆಯಲ್ಲಿ 'ಸ್ಮರಣೆ' ಎಂಬುದರಡಿಯಲ್ಲಿ ನಾಡು, ನುಡಿ, ಒಡನಾಡಿಗಳೊಂದಿಗಿನ ಭಾವನಾತ್ಮಕತೆಗೆ ಮಹಿಳಾಕಾವ್ಯ ನೀಡಿರುವ ಪ್ರತಿಕ್ರಿಯೆಯನ್ನು ಪರಿಗಣಿಸಲಾಗಿದೆ.

೨೦ನೇ ಶತಮಾನದ ಪೂರ್ವಾರ್ಧದಲ್ಲಿ ಕವನರಚನೆಯಲ್ಲಿ ತೊಡಗಿಕೊಂಡಿದ್ದ ಬೆಳಗೆರೆ ಜಾನಕಮ್ಮನವರು 'ದೇಶಪ್ರೇಮ'ದ ಸಂವೇದನೆಯೊಂದಿಗೆ ಅನೇಕ ಕವನಗಳನ್ನು ರಚಿಸಿದ್ದಾರೆ.[೮] ನವೋದಯ ಕಾಲಘಟ್ಟದ ಆದರ್ಶದಂತೆಯೇ ಇಲ್ಲಿ ಭಾರತ, ಭರತ ಭೂಮಿಗೆ ಜನನಿಯ ಸ್ಥಾನಮಾನ ನೀಡಿ ದೈವತ್ವಕ್ಕೇರಿಸಲಾಗಿದೆ. ಪಾರತಂತ್ರ್ಯದಿಂದ ಬಿಡುಗಡೆ ಪಡೆಯಲು ಸಮಕಾಲೀನ ಸಮಾಜದಲ್ಲಿ ನಡೆಯುತ್ತಿದ್ದ ಹೋರಾಟ, ಭಾವನೆಗಳ ತಾಕಲಾಟಗಳನ್ನು ಇವರ ಕವನಗಳಲ್ಲಿ ಗುರುತಿಸಬಹುದಾಗಿದೆ.

> **ಜಯ ಜಯ ಭಾರತ ಜನನಿಯೇ ನಮಿಪೆವು**
> **ಜಯವನು ಪಾಲಿಸಿ ಜನರನುದ್ಧರಿಸು ॥**
> ..............................................
> **ಸುತ್ತಲು ಬೆಂಕಿಯ ಹತ್ತಿಹುದಮ್ಮ**
> **ಕತ್ತಲೆ ಕವಿದಿದೆ ಕಾಣದು ದಾರಿ ॥**
> ..............................................

**ಸುಗುಣರು ಕೆಲವರು ಕಣ್ಮರೆಯಾದರು**
**ಇನ್ನುಳಿದವರು ಗೋಳಿಡುತಿಹರು ॥**
**ಸುಂದರಿ ನಿನ್ನಯ ಅಂದವು ಕೆಡುತಿದೆ**
**ಅಂಧಳಂತಿ ಇರುವೆ ಅದೇತಕೆ ತಾಯೇ?**

**(ಜಯ-ಜಯ ಭಾರತ ಜನನಿ - 'ಕಲ್ಯಾಣ')**

ಪ್ರಾರ್ಥನೆಯೊಂದಿಗೆ ಆರಂಭವಾಗುವ ಈ ಕವನ ಕೇವಲ ಸ್ತುತಿಯೊಂದಿಗೆ ಮುಂದುವರಿಯುವುದಿಲ್ಲ. ಬದಲಿಗೆ ವಸ್ತುಸ್ಥಿತಿಯನ್ನು ಚಿತ್ರಿಸುತ್ತಿದೆ. ಸ್ವಾತಂತ್ರ್ಯ ಸಂಗ್ರಾಮದ ತೀಕ್ಷ್ಣತೆ, ಭಯಾನಕತೆಗಳು ತೀವ್ರವಾಗಿ ತಟ್ಟುವ ಪದಬಳಕೆಯಿಂದ ಪರಿಸ್ಥಿತಿ ವಿವರಣೆಯನ್ನು ಕವನ ನೀಡುತ್ತಿದೆ. ಹೋರಾಟದಲ್ಲಿ ಮಡಿದ ಅನೇಕರನ್ನು ಸ್ಮರಿಸಿಕೊಳ್ಳುತ್ತಲೇ ಬ್ರಿಟಿಷ್ ಆಳ್ವಿಕೆಯ ಪರಿಣಾಮವಾಗಿ ಹಂಚಿಹೋಗುತ್ತಿರುವ ಭೌಗೋಳಿಕ, ಭಾಷಿಕ ರಚನೆಗಳ ಕುರಿತು ಕವಿಗೆ ಆತಂಕವಿದೆ. ಆದರೆ ಇಂತಹ ಒಂದು ಸ್ಥಿತಿಯ ನಿವಾರಣೆಗೆ ನಿರೂಪಕಿಯ ಕೊಡುಗೆ ಏನು ಎಂದು ಅವಲೋಕಿಸಿದರೆ ಕೇವಲ ವಿಷಾದ, ಪ್ರಾರ್ಥನೆ ಮಾತ್ರ ಎಂಬುದು ಸಮಕಾಲೀನ ಸಾಮಾಜಿಕ ಚಿತ್ರಣವನ್ನು ನೀಡುತ್ತದೆ. ತನ್ನ ಈ ಅಸಹಾಯಕತೆಗೆ ಆಕೆ ಕಂಡುಕೊಂಡ ಮಾರ್ಗವೆಂದರೆ ದೈವಸ್ವರೂಪಿಯಾದ ತಾಯ್ನಾಡೇ ತನ್ನ ರಕ್ಷಣೆ ಮಾಡಿಕೊಳ್ಳಲು ಮನವೊಲಿಸುವುದು. ದೇಶದ ಸ್ವಾತಂತ್ರ್ಯಗಳಿಕೆಯಲ್ಲಿ ಕವಿಗಳ ಪಾತ್ರ ಮಹತ್ತರವಾಗಿರುವುದನ್ನು ಈಗಾಗಲೇ ನಮ್ಮ ಚರಿತ್ರೆಯಲ್ಲಿ ದಾಖಲಿಸಲಾಗಿದೆ. ಆದರೆ ಇಂತಹ ಕವಯಿತ್ರಿಯರ ಭಾವತೀವ್ರತೆಗಳು ಅಷ್ಟಾಗಿ ಗುರುತಿಸಲ್ಪಡದೇ ಇರುವುದನ್ನೂ ಸಹ ನಾವು ಕಾಣಬಹುದಾಗಿದೆ.

ಅದೇ ಸ್ವಾತಂತ್ರ್ಯದ ಕನಸು ನನಸಾದ ದಿನ ಈ ಕವಿಯ ಪ್ರತಿಕ್ರಿಯೆ:

**ನಲವತ್ತೇಳರ ಎಂಟನೆ ತಿಂಗಳ ಹದಿನೈದರ ದಿನವು**
**ನಮ್ಮೀ ದೇಶವು ದಾಸ್ಯದ ಹೊರೆಯನು**
**ಇಳುಹಿದ ಶುಭದಿನವು**
**.....................................**
**ಸರ್ವಸಮತೆಯಲಿ ಮುಂದಡಿಯಿಡುವ ಸರ್ವೋದಯ ದಿನವು**
**ಭಾರತ ಮಾತೆಗೆ ಜನಕಜೆ ಆರತಿ**
**ಬೆಳಗುವ ಮಂಗಳವು**

**(ಸ್ವಾತಂತ್ರ್ಯ - ಕಲ್ಯಾಣ)**

ಇದು ಇಡೀ ದೇಶವೇ ಸಂತಸದಲ್ಲಿರುವಾಗ ತಾನೂ ಕೂಡ ಆ ಸಂಭ್ರಮದಲ್ಲಿ ಭಾಗಿಯಾದ ಸಹಜತೆಯನ್ನು ಬಿಂಬಿಸುತ್ತದೆ. ಆದರೆ ಈ ಸಂಭ್ರಮ ಹಾಗೆಯೇ ಮುಂದುವರಿಯದಿರುವುದೂ, ದಾಸ್ಯದಿಂದ ಬಿಡುಗಡೆಗೊಂಡರೂ ಸಮಸ್ಯೆಗಳ ಸುಳಿಯಲ್ಲಿ ಇಲ್ಲಿನ ವ್ಯವಸ್ಥೆ ಅರಾಜಕತೆ ಅನುಭವಿಸುತ್ತಿರುವುದನ್ನೂ ಸಹ ಈ ಕವಿ ಮನ ಗುರುತಿಸುತ್ತದೆ. ಈಗಾಗಲೇ ದೈವರೂಪೀ ಆವರಣ ತೊಟ್ಟ ದೇಶವೇ ತನ್ನ ಪರಿಸ್ಥಿತಿಯನ್ನು ವಿವರಿಸಿಕೊಳ್ಳುತ್ತಿರುವಂತೆ ಹೀಗೆ ನಿರೂಪಿಸುತ್ತಾರೆ.

ಏಳಿರಿ ಕೇಳಿರಿ ಸುತರೆ ಬಾಳು ಮುಳುಗುತಲಿಹುದು
ತಾಳಲಾರೆ ನನ್ನ ಒಡಲ ದುಃಖವಿದನು
................
ಮೂರು ದಿನ ಕಳೆದಿಲ್ಲ ಮರೆತಿರದನೆಲ್ಲ
ಘೋರ ಕೃತ್ಯಕೆ ಮತ್ತೆ ತೊಡಗಿರುವಿರಲ್ಲ
ಒಂದೆ ತಾಯ್ಮಕ್ಕಳೆಂಬ ಭಾವವಿಲ್ಲ
ಹೊಂದಿಕೊಂಡಿರುವ ಸುಂದರ ಹೃದಯವಿಲ್ಲ
..............................
ಏಳಿರಿನ್ನೆಚ್ಚತ್ತು ಬಾಳ ಹದಗೊಳಿಸಿ
ಜನಕಜೆಯು ಪೂಜಿಪಳು ಪೂಗುಚ್ಛ ಮುಡಿಸಿ

(ಭಾರತ ಮಾತೆಯ ವಾಕ್ಯ – ಕಲ್ಯಾಣ)

ಪರಕೀಯರ ವಿರುದ್ಧ ಒಟ್ಟಾಗಿದ್ದ ತನ್ನ ಮಕ್ಕಳೇ, ಪರಸ್ಪರರಲ್ಲಿ ಹೊಂದಿಕೊಳ್ಳದೆ ದೇಶದಲ್ಲಿ ಇನ್ನೊಂದು ಬಗೆಯ ಅರಾಜಕತೆಯನ್ನುಂಟು ಮಾಡುತ್ತಿರುವುದಕ್ಕೆ ನಿರೂಪಕಿಗೆ ಬಹಳ ಖೇದವಿದೆ. ಮತ್ತೆ ಆಕೆ ಅನುಸರಿಸಿದ ತಂತ್ರ ತಾಯಿಯಿಂದಲೇ ಬುದ್ಧಿ ಮಾತು ಹೇಳಿಸುವುದು. ಇಲ್ಲಿ ಯಾವುದೇ ಶಬ್ದಾಡಂಬರವಿಲ್ಲದೆ ಸಹಜತೆಯೊಂದಿಗೆ ಸಮಕಾಲೀನ ತಲ್ಲಣಗಳಿಗೆ ತನ್ನದೇ ರೀತಿಯಲ್ಲಿ ಸ್ಪಂದಿಸುವುದನ್ನು ಕಾಣಬಹುದು. ಕನ್ನಡ ನುಡಿಯ ಬಗ್ಗೆಯೂ ಇವರ ಭಾವುಕತೆಯನ್ನು ಇತರ ಕವನಗಳಲ್ಲಿ ಗುರುತಿಸಬಹುದಾಗಿದೆ.

ಈ ನಾಡು-ನುಡಿಗಳ ಪ್ರೇಮವು ಯಾಂತ್ರಿಕವಾಗಿ ಸಾಂಪ್ರದಾಯಿಕತೆಯನ್ನು ಪಡೆದಾಗ ತಾನಾಗಿಯೇ ಭಾವತೀವ್ರತೆಯನ್ನು ಕಳೆದುಕೊಳ್ಳುವುದನ್ನೂ ಕೂಡ ಮಹಿಳಾಕಾವ್ಯ ಗುರುತಿಸುತ್ತದೆ.

ಹಬ್ಬ ಬಂದೈತಂತ ಘರ - ಘರಿ ಕಟ್ಟಾರ
ನನಗೂ ಒಂದು ತಟಕು ಸುತ್ಯಾಽಽರ
ಹಬ್ಬ ಬಂದಾಗಷ್ಟೆ ಹಿಂಗಽಽ ತೊಳಿತಾರ
ಇಲ್ಲಂದ್ರ ಮಾರಿ ತಿರುವ್‌ತಾರ

('ನಾ ಭಾರತಿ' - ಕತ್ತಲ ಇಬ್ಬನಿ, ಬಣ್ಣದ ಚಿತ್ತಾರ - ಜಿ ಪೂರ್ಣಿಮಾ)

ಮೌಲ್ಯವೊಂದು ಎಲ್ಲ ಕಾಲಕ್ಕೂ ಒಂದೇ ಬಗೆಯ ತೀವ್ರತೆಯನ್ನು ಹೊಂದಿರುವುದಿಲ್ಲವೆಂಬ ಸಾಮಾಜಿಕ ಸತ್ಯವನ್ನು ತೆರೆದಿಡುತ್ತಲೇ, ವಸ್ತುಸ್ಥಿತಿಗೆ ಪ್ರತಿಕ್ರಿಯಿಸುವ ಕವಿ ಮನಗಳು ಮಾತ್ರ ನಾಡು-ನುಡಿಯ ಕುರಿತು ಸದಾ ಕಾಳಜಿಯ ಕಣ್ಣಿರಿಸಿರುತ್ತವೆ ಎನ್ನುವುದಕ್ಕೂ ಈ ಕವನ ನಿದರ್ಶನವಾಗಿದೆ. ನಾಡಿಗಾಗಿ ತ್ಯಾಗ-ಬಲಿದಾನಗೈಯುವ ಸೈನಿಕರ ಬಗ್ಗೆಯೂ ಇಂತಹುದೇ ಒಂದು ಸಂವೇದನೆಯನ್ನು ಸದಾಕಾಲ ಉಳಿಸಿಕೊಳ್ಳುವ ಪ್ರಯತ್ನವನ್ನು ಕಾವ್ಯಲೋಕದ ಒಳ-ಹೊರಗಿನ ವ್ಯಾಪಾರಗಳಲ್ಲಿ ಗುರುತಿಸಬಹುದು.

**ಕಾರ್ಗಿಲ್ಲ ಬಯಲಲಿ । ಕೊರೆಯುವ ಚಳಿಯಲಿ**
**ಗಡಿಕಾಯುವ, ವೀರಪುತ್ರ । ರಾತ್ರಿಯ ವೇಳೆಯಲಿ,**
**ಜನನಿಯ ಮಡಿಲಲಿ । ಸುಖನಿದ್ರೆ ಹೋದ**
**ಬಾಲ್ಯದ ದಿನಗಳು । ನಿನ್ನ ನೆನಪಿಗೆ । ಬಾರದೆ ಇರುವುದಿಲ್ಲ**
**ಮರುಕ್ಷಣವೇ**
**ಸ್ವಾತಂತ್ರ್ಯ ಸಂಗ್ರಾಮದಲಿ । ದೇಶಕ್ಕಾಗಿ ಬಲಿದಾನಗೈದ**
**ಜನ್ಮಭೂಮಿಯ ಮಡಿಲಲಿ । ಚಿರನಿದ್ರೆ ಹೋದ**
**ಹುತಾತ್ಮರ ಚಿತ್ರ । ನಿನ್ನ ಕಣ್ಮುಂದೆ । ಸುಳಿಯದೆ ಇರುವುದಿಲ್ಲ**

**(ಜನನಿ-ಜನ್ಮಭೂಮಿಶ್ಚ ಸ್ವರ್ಗಾದಪಿಗರೀಯಸಿ' - ಭಾವಯಾನ - ಕೆ.ಆರ್. ಪ್ರೇಮಲೀಲ)**

ಇದು ಸವಕಲಾಗುತ್ತಿರುವ ಆದರ್ಶವೊಂದನ್ನು ಒತ್ತಾಯಪೂರ್ವಕವಾಗಿ ಹೇಳುತ್ತಿರುವ ಕವನವಾಗಿ ಕಾಣಿಸುತ್ತದೆ. "ಹುತಾತ್ಮ" ಎನ್ನುವ ಆದರ್ಶ ಸ್ಥಿತಿ ವೈಯಕ್ತಿಕ ತ್ಯಾಗದಿಂದ ದೊರೆತದ್ದೋ, ಅವಶ್ಯಕ, ಅನಿವಾರ್ಯತೆಗಳ ಫಲವೋ ಎಂಬುದರ ಬಗ್ಗೆ ಕವನ ಯಾವುದೇ ಆಸಕ್ತಿ ಹೊಂದಿಲ್ಲ. 'ಹುತಾತ್ಮ'ನಾಗುವುದರ ಹಿಂದಿನ ಆರ್ಥಿಕ, ರಾಜಕೀಯ ಒತ್ತಡಗಳ ಬಗ್ಗೆ ಕವನ ಮೌನವಾಗಿದ್ದರೂ ರಾಜಕೀಯ ಪ್ರತಿಷ್ಠೆ, ಧಾರ್ಮಿಕ ಅಂಧತ್ವಗಳು ಮತ್ತೆ ಮತ್ತೆ ಬಿತ್ತುವ ಈ ಆದರ್ಶಗಳು ಹೊಂದಿರುವ ಸಾಮಾಜಿಕ ಮನ್ನಣೆಗಳನ್ನೂ ಕವನ ಬಿಂಬಿಸುತ್ತಿದೆ. ಆದರೆ ಇದರ ಹಿಂದಿನ ಕ್ರೂರತೆಯನ್ನು ಭಿನ್ನಬಗೆಯಲ್ಲಿ ಹಿಡಿದಿಡುವ ಕವನಗಳನ್ನೂ ನಾವು ಕಾಣಬಹುದಾಗಿದೆ :

**ತಾಯಿದೆಯಲ್ಲಿ ಕನಸು ಕಳವಳಿಸುತ್ತಿವೆ**
**ಮಂದಿರ ಮಸೀದಿಗಳು ಹತಾರಗಳಾದಲ್ಲಿ**
**ಪ್ರತಿ ಅಂಗಳಕೂ ರಕ್ತದ ರಂಗೋಲಿ**
**ನಿರಂತರವಾಗಿ ಬಸಿರಬೇನೆ ತಿನ್ನುವ**
**ನೆಲದ ಗರ್ಭದಲಿ । ನಿಷ್ಪಾಪಿ ರಕ್ತದ ಹಕ್ಕಳೆ...**

........................

**ಸಾವು ಅರ್ಥ ಕಳಕೊಂಡ ನೆಲದಲ್ಲಿ**
**ಹುಟ್ಟು ಹಬ್ಬವಾಗುವುದಿಲ್ಲ ಮಗೂ**
**ನೀನೊಂದು ಬೆಳಕಿನ ಬೀಜ**
**ಹೊತ್ತು ತಾ ಜೀವಸೆಲೆಯನ್ನು । ಬಸವಳಿದ ಬದುಕಿಗೆ**

**(ಮುಲುಗುಡುವ ತಾಯ ಬಸಿರು - ಬಾಯಾರಿಕೆ - ಡಾ. ವಿನಯಾ)**

ಬಸವಳಿದ ಬದುಕಿಗೆ ಜೀವಸೆಲೆ ಹೊತ್ತು ತರುವ ಕನಸು ಈ ಕವನದ ನಿರೀಕ್ಷೆಯಾಗಿದ್ದರೆ, ತನ್ನ ಕನಸು ಕಳವಳಗೊಂಡಿದ್ದ ಹಿಂದಿನ ಧರ್ಮರಾಜಕಾರಣ ತನ್ಮೂಲಕ ವ್ಯಾಪಿಸಿಕೊಂಡ ಹಿಂಸೆ, ಅದನ್ನೇ ಮತ್ತೆ ಮತ್ತೆ ಸಮರ್ಥಿಸಿಕೊಳ್ಳುವ ಹುಂಬತನಗಳು - ಇದ್ಯಾವುದಕ್ಕೂ ಕಾರಣವಾಗದೆ ಪರಿಣಾಮವನ್ನು ಮಾತ್ರ ಎದುರಿಸಬೇಕಾಗಿರುವ ಮುಗ್ಧ ಮನಸ್ಸುಗಳ ತಲ್ಲಣವನ್ನು ತನ್ನದೇ

ತಣ್ಣನೆಯ ದನಿಯಲ್ಲಿ ನಿರೂಪಿಸುವ ಈ ಕವನ ಕಲಹ/ಯುದ್ಧವೆಂಬ ಮೌಲ್ಯದ ನೈಜ ಚಿತ್ರಣವನ್ನು ನೀಡುತ್ತದೆ.

ಇದನ್ನೇ ತಾರಿಣಿ ಶುಭದಾಯಿನಿಯವರು

**ಯುದ್ಧವೆಂದರೆ । ಮರಳುಗಾಡಿನ**

**ಗುರಿಯಿರದ ದಾರಿ**

**ಹಸಿದ ಪಕ್ಷಿ । ಮೈಚೆಲ್ಲಿದ ನೋವು**

**ಯುದ್ಧವೆಂದರೆ । ರಕ್ತದಲಿ ಬಿದ್ದ ಮಗು**

**ಸೂಜಿ ದಬ್ಬಳದಿ ಹೊಲಿದ । ತಾಯಿಯ ಹೊಟ್ಟೆ**

**ಯುದ್ಧವೆಂದರೆ ತಳಮಳದ ಹೊತ್ತು**

**ಉಂಡೆ ಉಂಡೆ ಮಾಡಿ । ತುರುಕುವ ಬಲವಂತದ ತುತ್ತು**

**(ಯುದ್ಧವೆಂದರೆ – ತೋಡಿರಾಗ)**

ಈ ಬಲವಂತದ ತುತ್ತು ಈಗ ಮಾತ್ರವಾಗಿರುವುದೋ, ಯಾವತ್ತೂ ಇವರ ಅಗತ್ಯ ಇಷ್ಟರಮಟ್ಟಿನದೇ ಆಗಿತ್ತೋ! ಈ ಗುರಿಯಿಲ್ಲದ ದಾರಿಯನ್ನು ಕ್ರಮಿಸಲೇಬೇಕೆಂಬ ಹಂಬಲದ ಹುಂಬತನ ಬರುವುದಾದರೂ ಏತಕ್ಕೆ? ಆಯಾ ಕಾಲಘಟ್ಟದ ಚಾರಿತ್ರಿಕ ತುರ್ತುಗಳೇನೆ ಇದ್ದಿರಬಹುದಾದರೂ, ಆಯಾ ಕಾಲದಲ್ಲಿ ಅನುಕೂಲವಾದಿಗಳು ರೂಪಿಸಿರುವ ಮೌಲ್ಯ ಮಾತ್ರವಾಗಿದೆ ಎಂಬ ನೈಜ ಪ್ರಜ್ಞೆಯನ್ನೂ ಮಹಿಳಾ ಕಾವ್ಯಜಗತ್ತು ಹೊಂದಿರುವುದು ಅದರ ಸಂವೇದನಾಶೀಲತೆಯ ಗುಣಮಟ್ಟವನ್ನು ನಿರ್ಧರಿಸುತ್ತದೆ.

ವ್ಯಕ್ತಿಪೂಜೆ, ವ್ಯಕ್ತಿ ಸ್ಮರಣೆಗಳು ಕೂಡ ಭಾರತೀಯ ಪಾರಂಪರಿಕ ಆಶಯಗಳಾಗಿಯೇ ಉಳಿದುಕೊಂಡು ಬಂದಿವೆ. ಪ್ರತಿಯೊಬ್ಬ ಸಾಧಕ ವ್ಯಕ್ತಿಯ ಶಕ್ತಿಗೂ ದೈವಿಕ ನೆಲೆ ನೀಡಿ ಆರಾಧನೆಗೊಳಪಡಿಸುವುದು ಇದರ ಒಂದು ಭಾಗವಾಗಿ ಬೆಳೆದುಕೊಂಡು ಬಂದಿದೆ. ಇಂತಹ ವ್ಯಕ್ತಿಗಳಲ್ಲಿ ಬಹುಮುಖ್ಯವಾಗಿ ಕಾಣಿಸಿಕೊಳ್ಳುವವರು ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್. ಇನ್ನು ಪೌರಾಣಿಕ, ಚಾರಿತ್ರಿಕ ವ್ಯಕ್ತಿ, ಪ್ರತೀಕಗಳೂ ಕೂಡ ಇವುಗಳ ಸಾಲಿಗೆ ಸೇರುತ್ತವೆ. ತಮ್ಮ ಒಡನಾಡಿಗಳಾಗಿರುವ, ಅತಿಯಾಗಿ ತಮ್ಮ ಸಂಪರ್ಕದಲ್ಲಿರುವ, ತಮ್ಮ ಮೇಲೆ ಪ್ರಭಾವ ಬೀರಿದವರನ್ನು ಬದುಕಿರುವಾಗ ಅಥವಾ ಸಾವಿನ ನಂತರ ಸ್ಮರಿಸಿಕೊಳ್ಳುವ ಪರಿಪಾಟ ಕೂಡ ನಮ್ಮ ಪರಂಪರೆಯ ಆಶಯಗಳಲ್ಲಿ ಒಂದಾಗಿ ಕಂಡುಬರುತ್ತದೆ. ಹೀಗೆ ಸ್ಮರಣೆಗೊಳಗಾದ ವ್ಯಕ್ತಿ, ಶಕ್ತಿಗಳ ಚಿತ್ರಣದಲ್ಲಿ ಮಹಿಳಾ ಕಾವ್ಯದ ಸಂವೇದನೆಗಳು ಹೇಗಿವೆ ಎಂಬುದಕ್ಕೂ ಅನೇಕ ಕವನಗಳನ್ನು ಪರಿಶೀಲಿಸಬಹುದಾಗಿದೆ.

**ಚಿದ್ರೂಪನಂತೆ ತೊಳತೊಳಗಿ ಬೆಳಗುತಿಹ ದಿವ್ಯಜ್ಞಾನಿ ತಾತ**

**ಸದ್ಗುಣ ಕಣಿಯು ಬಹು ಪೂಜ್ಯನೆಂದು ಮನ**

**ಗಂಡೆನೆಂದೊ ಪೂತ**

**ನಿಜತತ್ವವರಿತು ಗುರು ಪೀಠವೇರಿ ಮೆರೆದಿರುವ | ಕರ್ಮಯೋಗಿ**
**ವಿಜಯವನುಗೈದೆ ಅದ್ವೈತದೊಳಗೆ ಬಿಡು**
**ನೀನೆ ಪರಮಾತ್ಮಾಗಿ**

**(ಕರ್ಮಯೋಗಿ ಗಾಂಧೀಜಿ - ಕಲ್ಯಾಣ)**

ಕಾರ್ಯದ ಕಾರಣದಿಂದ ಯೋಗಿಗಳಾದವರು ಗಾಂಧೀಜಿ. ಪಂಡಿತ-ಪಾಮರ, ಉಚ್ಚ-ನೀಚಗಳೆಂಬ ಸಾಮಾಜಿಕ ದ್ವೈತವನ್ನು ಹೋಗಲಾಡಿಸಲು ಕಟಿಬದ್ಧರಾಗಿದ್ದ ಗಾಂಧಿ ಮೌಲ್ಯಗಳನ್ನು ಹಿಡಿದಿಟ್ಟಿರುವುದು ಈ ಕವಿ ತನ್ನದೇ ಸಹಜ ನುಡಿಗಟ್ಟುಗಳಲ್ಲಿ. ಗಾಂಧಿತತ್ವ, ವ್ಯಕ್ತಿತ್ವ ಎರಡರ ವಿಮರ್ಶೆಯೂ ಆಕೆಗೆ ಬೇಕಾಗಿಲ್ಲವೆಂದು ಕಾಣುತ್ತದೆ. ಶ್ರಮಮೌಲ್ಯವನ್ನು ಮಾತ್ರ ಗುರುತಿಸಿರುವ ಅವರು ಮುಖಸ್ತುತಿಯನ್ನು ಮಾತ್ರ ಮಾಡುತ್ತಿಲ್ಲವೆಂಬುದನ್ನೂ ಗುರುತಿಸಬೇಕಾಗಿದೆ. ಇಂತಹ ಮೌಲ್ಯವೊಂದು ಮತೀಯವಾದ ಸಂಕುಚಿತ ಭಾವಕ್ಕೆ ಬಲಿಯಾದಾಗ ಅವರ ಪ್ರತಿಕ್ರಿಯೆ ತೀವ್ರವಾಗಿಯೇ ಮೂಡಿಬಂದಿದೆ.

**ತಾರುಮಾರಿನ ಸೆಲೆಯು ಮೂಡಿತು ದಿಗ್‌ದಿಗಂತವೆ ನಡುಗಿತು**
**ವೀರಗಾಂಧಿಯ ಮರಣವೆನುತಲೆ ಧಗ್ಗನೇ ಕಿಚ್ಚೆದ್ದಿತು**
**......................**
**ಬಿದ್ದರಾಯಿತೆ ನಿನ್ನ ದೇಹವು ಗೆದ್ದಿತೇ ಈ ದೇಶವು**
**ಶುದ್ಧ ಶುಂಠರು ನಿನ್ನ ಕೊಂದರೆ**
**ಆಯಿತೇ ಘನಕಾರ್ಯವು**

**(ಧಗ್ಗನೇ ಕಿಚ್ಚೆದ್ದಿತು.......ಕಲ್ಯಾಣ)**

ಪದ್ಯದ ಮೊದಲ ಭಾಗವು ಗಾಂಧಿಯ ಮರಣ ಉಂಟುಮಾಡಿದ ಪರಿಣಾಮದ ತೀಕ್ಷ್ಣತೆಯನ್ನು ಹೇಳಿದರೆ ಎರಡನೇ ಭಾಗದಲ್ಲಿ ಕವಿ ಮನಸ್ಸಿನ ಖೇದ ವ್ಯಕ್ತವಾಗಿದೆ. ಹತ್ಯೆಯ ಹಿಂದಿನ ಹೇಡಿತನವನ್ನು ವ್ಯಂಗ್ಯದಿಂದ ಪ್ರಶ್ನಿಸುವ ಕವಿಯ ನುಡಿಗಳಲ್ಲಿ ಅಂತಹ ಯಾವ ಸಾಧನೆಯೂ ಸಾಧಿತವಾಗಿಲ್ಲ ಎಂಬ ಸತ್ಯ ಕೂಡ ಅಡಗಿದೆ. ಆದರೆ ಈ ಗಾಂಧಿತತ್ವ ಒಂದಲ್ಲಾ ಒಂದು ರೂಪದಲ್ಲಿ ಜಗತ್ತನ್ನು ವ್ಯಾಪಿಸಿರುವುದನ್ನು ಯಾರೂ ತಿರಸ್ಕರಿಸಲಾಗದು. ಕೆಲವರಿಗೆ ಗಾಂಧಿ ಬದುಕಿನ ಮಾರ್ಗವಾದರೆ, ಇನ್ನು ಕೆಲವರಿಗೆ ರಕ್ಷಾಕವಚ. ಏನೆಲ್ಲಾ ಬಗೆಗಳಲ್ಲಿ ಗಾಂಧಿ ಮೌಲ್ಯಗಳನ್ನು ಅಪಮೌಲ್ಯಗೊಳಿಸಬಹುದೋ ಅಷ್ಟೆಲ್ಲ ಪ್ರಯತ್ನಗಳನ್ನೂ ಮೀರಿ ಮತ್ತೆ ಮತ್ತೆ ಗಾಂಧಿತತ್ವ ಹೊಸ ಹೊಸ ರೂಪದಲ್ಲಿ ಕಂಗೊಳಿಸುತ್ತದೆ. ಇದಕ್ಕೆ ಹೊಸ ತಲೆಮಾರಿನ ಕವಿಯ ಪ್ರತಿಕ್ರಿಯೆ ಹೀಗಿದೆ :

**ನನಗೆ ಗಾಂಧಿ ಗೊತ್ತು**
**ಅವನಿಗಿಂತ ಚೆನ್ನಾಗಿ ಗೊತ್ತಿರೋದು**
**"ಅಣ್ಣಾ, ಶಾಮಣ್ಣೋ....**
**ನಾಕು ಶಾಮ ಪೆಪ್ಪಿ ಕೊಡೊ"**
**ಅಂತ ಒಂದು ರೂಪಾಯಿ ನಾಣ್ಯನ**

ತಗಡಿನ ಡಬ್ಬಿ ಮೇಲೆ ಕುಟ್ಟೋವಾಗ
ಈ ಬಕ್ಕತಲೆ ಗಾಂಧಿಗೆ | ನಗು ಅಂದ್ರೆ ನಗು

"ಬರೀ ಕಾಲು ಬೋಳು ಬೋಳು ಕಣ್ಣ ಮಗ,
ಗಾಂಧಿ ತಲೆಯಂಗೆ"
ಅಂತ ಆ ಹುಡುಗ ಕಿಚಾಯಿಸಿದರೆ
ಕಿವಿಯಲ್ಲಿ ಬಿಸಿ ಬಿಸಿ ಹೊಗೆ,
"ಯಪ್ಪಾ, ನನ್ನ ದೋಸ್ತಿ ಅತ್ರವ
ಕಾಲಂದಗೆ ಅದೆ, ಕೊಡ್ಸು ಮಂತೆ ನನಗೂ ಒಂದ"
ನಾನು ದುಂಬಾಲು ಬಿದ್ದಾಗ ಅಪ್ಪನ
ಹರಕುಚೆಡ್ಡಿ ಜೇಬಲ್ಲಿ ಗಾಂಧಿ ನಗು
ಗಾಂಧಿ ನನಗೆ ಗೊತ್ತು | ಗಾಂಧಿ ಅಂದ್ರೆ
ಒಂದು ರೂಪಾಯಿ ನಾಣ್ಯ,
ನೂರು ರೂಪಾಯಿ ನೋಟು
ಕೋಲು, ಕನ್ನಡಕ,
ಮತ್ತೆ.............ಕತ್ತಲು

(ಗಾಂಧಿ ನನಗೆ ಗೊತ್ತು - ಉಸ್ರುಬುಂಡೆ - ಜ.ನಾ. ತೇಜಶ್ರೀ)

'ಸರಳ ಜೀವನ ಉದಾತ್ತ ಚಿಂತನ' ಎಂದು ಗಾಂಧಿ ಅನುಸರಿಸಿದ ಮೌಲ್ಯವನ್ನು ಸಮಕಾಲೀನ ಜಗತ್ತು ಬಳಸಿಕೊಂಡಿರುವ ಬಗೆಯನ್ನು ಈ ಕವಿ ಲಘುವ್ಯಂಗ್ಯದೊಂದಿಗೆ ನಿರೂಪಿಸಿದ್ದಾರೆ. ಇಲ್ಲಿ ಮೊದಲ ಭಾಗದಲ್ಲಿ ಶ್ರೀ ಸಾಮಾನ್ಯನಿಗೂ ದೊರೆತ ಸ್ವತಂತ್ರತೆ, ಮುಕ್ತತೆಗಳು ಮನಮುಟ್ಟುತ್ತವೆ. ಮಧ್ಯದ ಪದ್ಯಸಾಲುಗಳು ಅದೇ ಕಾಲಕ್ಕೆ ಇನ್ನೂ ಸಮಾಜದಲ್ಲಿರುವ ಆರ್ಥಿಕ ಅಸಮಾನತೆಯನ್ನು ಬಿಂಬಿಸುತ್ತಿದೆ. ಯಾವ ಸಾಮಾಜಿಕ, ಆರ್ಥಿಕ ಸ್ವಾವಲಂಬನೆಯ ಆದರ್ಶವನ್ನು ಗಾಂಧಿ ನೀಡಿದ್ದರೋ ಅದನ್ನು ಮುಂದಿನ ತಲೆಮಾರು ಅನುಸರಿಸದೇ ಉಳ್ಳವರು-ಇಲ್ಲದವರ ನಡುವಿನ ಅಸಮಾನತೆಯನ್ನು ಇನ್ನಷ್ಟು ಹೆಚ್ಚಿಸಿರುವುದನ್ನು ವ್ಯಂಗ್ಯವಾಗಿ ಈ ಕವಿ ನಿರೂಪಿಸಿದ್ದಾರೆ. ಗಾಂಧಿ ಮೌಲ್ಯವನ್ನು ಹೊಸ ತಲೆಮಾರು ಅರ್ಥಮಾಡಿಕೊಂಡದ್ದಷ್ಟು! ಗಾಂಧಿ ಎಂದರೆ ಕೇವಲ ಸರಳಜೀವನ ಮಾತ್ರವೆ? ಇಂತಹ ಚಿತ್ರಣವನ್ನು ನೀಡಿರುವ ಸಂಗತಿಗಳಾದರೂ ಯಾವುದು? ಈ ಎಲ್ಲ ಪ್ರಶ್ನೆಗಳಿಗೆ ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ-ಆರ್ಥಿಕ ಅನುಸರಣೆಗಳೇ ಉತ್ತರಿಸಬೇಕು. ಹೀಗೆ ಸರಳೀಕರಿಸಿದ ಮಾತ್ರಕ್ಕೆ ಗಾಂಧಿತತ್ವ ಸೊರಗಿ ಹೋಗುವುದೇ? 'ಇಲ್ಲ' ಎಂಬುದನ್ನು ಈ ಕವಿ ಕವನದ ಧ್ವನಿಪೂರ್ಣ ಮುಕ್ತಾಯದೊಂದಿಗೆ ಸಮರ್ಥಿಸುತ್ತಾರೆ. ಮತ್ತೆ... ಕತ್ತಲು ಈ ಸಾಲಿನ ನಡುವಿನ ಮೌನ ಎಷ್ಟೆಲ್ಲ ಅರ್ಥಗಳನ್ನು ಸ್ಫುರಿಸಬಲ್ಲದು. ಕೊನೆಯಲ್ಲಿ ಕತ್ತಲು ಬರುವುದ್ಯಾಕೆ? ಇದು ಅಜ್ಞಾನದ ಸಂಕೇತವೋ ಅಥವಾ ಆಯೋಮಯ ಸ್ಥಿತಿಯೋ? ಎದುರಾಗುವ ಎಲ್ಲ ಬಗೆಯ ಸಮಸ್ಯೆಗಳನ್ನು ಅದು ಸೂಚಿಸುತ್ತಿರಬಹುದೇ? ಕತ್ತಲೆಯ ನಂತರ ಬೆಳಕು

ಬರಲೇಬೇಕು. ಅಂತಹ ಕತ್ತಲೆ, ಅಜ್ಞಾನ ತುಂಬಿರುವ ಕಡೆಯಲ್ಲೆಲ್ಲ ಗಾಂಧಿತತ್ವ ತನ್ನ ಸತ್ವದ ಪ್ರಭಾವವನ್ನು ತೋರಿಸಿಯೇ ತೋರಿಸುತ್ತದೆ ಎಂಬ ಸೂಚ್ಯಾರ್ಥವನ್ನು ಇಲ್ಲಿ ಊಹಿಸಬಹುದಾಗಿದೆ.

ಹೀಗೆಯೇ ಸಮಕಾಲೀನ ಮಹಿಳಾಕವಿಗಳನ್ನು ತೀವ್ರವಾಗಿ ತಟ್ಟಿದ ಇನ್ನೊಂದು ವ್ಯಕ್ತಿಮೌಲ್ಯ 'ಬುದ್ಧ.' ಸವಿತಾ ನಾಗಭೂಷಣ ಅವರು ಹೂವಿನೊಂದಿಗೆ ಬುದ್ಧನನ್ನು ಸಮೀಕರಿಸಿ ಬುದ್ಧ ತತ್ವಗಳ ಸಾರವನ್ನು ಹೂವಿನ ಸೌಂದರ್ಯ, ಸರಳತೆಯೊಂದಿಗೆ ತಾದಾತ್ಮ್ಯಗೊಳಿಸಿದ್ದಾರೆ.

**ಗರ್ವವೆಂಬುದು । ಹೂವಿನ ಬಳಿ । ಸುಳಿಯದು**
**ಎಷ್ಟೊಂದು ಚೆಲುವು । ಘನವಾದ ಒಲವು**
**ನಿರಂತರ । ಧ್ಯಾನದ ಫಲವು**
**ಮೈತ್ರಿ - ಕರುಣೆ । ಎಂದು ಬುದ್ಧ । ಬೋಧಿಸಿದ್ದ**
**ಪೂರ್ವಜನ್ಮದ ಸ್ಮರಣೆ**
**ಅವನು ಹೂವಾಗಿದ್ದ**

**('ಬುದ್ಧ ಮತ್ತು ಹೂವು' - ಆಕಾಶಮಲ್ಲಿಗೆ)**

ಹೀಗೆ ಗರ್ವವಿಲ್ಲದ ಮೈತ್ರಿ - ಕರುಣೆಗಳನ್ನು ಸಿದ್ಧಿಸಿಕೊಳ್ಳಬೇಕಾದರೆ ಮೊಗ್ಗು ಹೂವಾಗಿ ಅರಳಬೇಕಾದಾಗ ಇರುವ ವ್ಯವಧಾನ ಇರಬೇಕು. ಇದು ಧ್ಯಾನ ಸ್ಥಿತಿಯಲ್ಲಿ ಸಾಧ್ಯವಾಗುವಂತಹುದು ಎಂಬುದನ್ನು ಕೆಲವೇ ಸಾಲುಗಳಲ್ಲಿ ಅರ್ಥಗರ್ಭಿತಗೊಳಿಸಿದ್ದಾರೆ. ಇದೇ ಬುದ್ಧ ಇನ್ನೊಬ್ಬ ಕವಿಗೆ ನಿಗೂಢ ಮೌನ. ಈ ಮೌನದ ಹಿಂದಿನ ಅರ್ಥವೇನು ಎಂಬುದನ್ನು ಗ್ರಹಿಸಲು ಕೂಡ ಧ್ಯಾನಸ್ಥ ಸ್ಥಿತಿಯೇ ಬೇಕು.

**ಮನಸಿನಾಳದಿಂದ । ಎದ್ದ ಬುದ್ಧ ಈಗ**
**ಮತ್ತೆ ಬಂದಿದ್ದಾನೆ.**
........................
**ಕೇಳುತ್ತಾನೆ ಒಂದೇ ಪ್ರಶ್ನೆ**
**ಈಗ............ಈಗ ಬರುವೆಯಾ ನನ್ನೊಡನೆ?**
............................
**ನಿತ್ಯವೂ ಕಾದೆಣ್ಣೆಯಲಿ । ಸಿಡಿದು ಸತ್ತರೂ**
**ಸಾವಿರ ಸಾಸಿವೆಗಳು । ವೈರಾಗ್ಯೋದಯವಾಗುವುದಿಲ್ಲ**
........................
**ಆದರೆ ಏಕೋ । ಇತ್ತೀಚೆಗವ ನಗುವುದಿಲ್ಲ ।**
**ಮಹಾಮೌನಿಯಾಗಿದ್ದಾನೆ । ನಾನು ಹೆದರುತ್ತೇನೆ**
**ಬಹುಶಃ ಅವನು ಬೆಳೆದಿದ್ದಾನೆಂದು**

**('ಮುಖಾಮುಖಿ' - ಬಾಗಿಲಾಚೆಯ ಮೌನ - ರೂಪಹಾಸನ)**

'ಬುದ್ಧ' ಎಂದರೆ ಜ್ಞಾನ ಎಂಬ ಅರ್ಥ ಕೂಡ ಇದೆ. ಯಾವ ಆಸೆ ದುಃಖಕ್ಕೆ ಕಾರಣವೆಂದು ಸಿದ್ಧಾರ್ಥ ಬುದ್ಧನಾಗ ಹೊರಟನೋ ಆ ಮೌಲ್ಯ ಅನುಸರಣೆಯಲ್ಲಿ

ಕಷ್ಟಸಾಧ್ಯವಾಗಿರುವ ಹಾಗೆಯೇ ಕೆಲವೊಮ್ಮೆ ಇಷ್ಟವೂ ಆಗದಿರುವ ಸಾಮಾಜಿಕ ಸತ್ಯವನ್ನು ಹೇಳುತ್ತಲೇ, ಆ ಮೌಲ್ಯದತ್ತ ಹಿಂಜರಿಕೆಗೆ ಕಾರಣವಾಗುವ ಸ್ವಾರ್ಥ, ಸ್ವಹಿತಗಳಾವುವು ಎಂಬುದನ್ನು ಬುದ್ಧನ ಮೌನದೊಂದಿಗೆ ಓದುಗರ ವಿವೇಚನೆಗೆ ಈ ಕವಿ ಬಿಡುತ್ತಿದ್ದಾರೆ. ಅಂತಹ ಜ್ಞಾನವನ್ನು ತಾನು ಸಾಧಿಸಿಕೊಳ್ಳಲಾಗದಿರುವ ಹಿಂದಿನ ವಸ್ತುಸ್ಥಿತಿಯ ಅರಿವಿನೊಂದಿಗೇ, ತನ್ನ ಮಾನಸಿಕ ಅಸಹಾಯಕತೆಯ ಬಗ್ಗೆ ಬೇಸರ ಕೂಡ ಕವನದಲ್ಲಿ ಧ್ವನಿಸುತ್ತಿರುವಂತೆ ಭಾಸವಾಗುತ್ತದೆ. ಇದೇ ಬುದ್ಧನನ್ನು ಚೇತನಾ ತೀರ್ಥಹಳ್ಳಿ ಅವರು ವಾಸ್ತವಿಕ ನೆಲೆಯಲ್ಲಿ ಚಿತ್ರಿಸುತ್ತಾರೆ:

**ಬುದ್ಧ ಎಂದರೆ | ಜಗಕೆ ಜೋಗುಳ ಹಾಡಿ**
**ನಿದ್ದೆಗೆಟ್ಟವನು**
**ನಡುರಾತ್ರಿ ಕದವಿಕ್ಕಿ | ಮನೆ ಬಿಟ್ಟವನು**
**ಬುದ್ಧ ಎಂದರೆ ನನಗೆ | ಯಶೋಧರೆಯ ಕಣ್ಣೀರು**
................
**ಬುದ್ಧ**.......
**ಬಂಡಾಯದ ಬೀಜ**
**ಶಾಂತಿಯೊಡಲಿನ | ಕ್ರಾಂತಿ ಬೋಧೆ**
**ಸುಟ್ಟುರಿಯದೆ | ಬೆಳಗುವ**
**ಮಿಣುಕುಹುಳು**
**ಬುದ್ಧ | ಪಡುವಣದಿಂದ**
**ಮೂಡಣಕ್ಕೆ ಹರಿದ | ಐಕ್ಯೆಕ ಬೆಳಕು**
...............
**ಹೀಗೆಲ್ಲ ಇರುವ ಬುದ್ಧ | ಹೊರಗೆ ಕಂಡರೆ**
**ಕೊಂದು ಹಾಕು!**
**"If you meet the Buddha Outside, Kill him" - Linji**

('ಬುದ್ಧ ಸಿಕ್ಕರೆ' ... ಶಬರಿಯ ಆವಸರ)

"ಬುದ್ಧ" ಏನೆಲ್ಲ ಹೌದು ಎಂದು ಎಳೆ ಎಳೆಯಾಗಿ ಬಿಡಿಸಿಡುವ ಕವನದಲ್ಲಿ ಕವಯಿತ್ರಿಗೆ ಮಾತ್ರ ಬುದ್ಧನೆಂದರೆ ಯಶೋದರೆಯ ಕಣ್ಣೀರು. ಯಾವುದೇ ಯಶಸ್ವೀ ಪುರುಷನ ಹಿಂದೆ ಒಬ್ಬ ಮಹಿಳೆ ಇರುತ್ತಾಳೆ ಎಂಬುದು ಜನಜನಿತವಾಗಿರುವ ಮಾತು. ಈ ಯಶಸ್ವಿ ಪುರುಷನ ಹಿಂದಿರುವ ಮಹಿಳೆಯ ಮನಸ್ಥಿತಿಯನ್ನು ವಿವರಿಸುವಾಗ ನಮ್ಮ ಪರಂಪರೆ ಮೌನವಾಗಿ ಉಳಿಯುತ್ತದೆ. ಆದರೆ ಮಹಿಳಾ ಕವಿಗಳು ಅಂತಹ ವ್ಯಕ್ತಿತ್ವಗಳಿಗೂ ದನಿ ನೀಡಿದ್ದಾರೆ. ಬುದ್ಧನ ಸತ್ವ ವ್ಯಕ್ತಿತ್ವವನ್ನು ಹೀಗೆ ಬಿಡಿಸಿಡುವ ಕವನ ಕೊನೆಯಲ್ಲಿ ಪಡೆದುಕೊಳ್ಳುವ ತಿರುವು ವಾಸ್ತವದಲ್ಲಿ ಬುದ್ಧ ಒಲ್ಲದ ಮೌಲ್ಯ ಎಂಬುದನ್ನು ಧ್ವನಿಸುತ್ತದೆ. ಇದರ ಹಿಂದೆ ಸಮಕಾಲೀನ ಚಿಂತನೆಗಳ ಬಗ್ಗೆ ವ್ಯಂಗ್ಯವೂ ಇರಬಹುದು. ಆದರ್ಶವೊಂದು ಅನುಸರಣೆಯಲ್ಲಿ ತಂದೊಡ್ಡುವ ಸವಾಲುಗಳನ್ನು

ಎದುರಿಸಲು ಎದೆಗಾರಿಕೆ ಬೇಕು. ಸದಾ ಅಶಾಂತಿಯನ್ನು ಬಿತ್ತಿ ತಮ್ಮ ಕಾರ್ಯ ಸಾಧಿಸಿಕೊಳ್ಳುವ ವಿಕೃತ ಮನಸ್ಸುಗಳು ಬುದ್ಧತತ್ವಗಳನ್ನು ಹತ್ತಿಕ್ಕಲು ನಡೆಸುವ ಪ್ರಯತ್ನವನ್ನು ಕವನ ಸೂಚ್ಯಗೊಳಿಸಿದೆ. ಬುದ್ಧನನ್ನು ಇನ್ನಷ್ಟು ಸಮಕಾಲೀನಗೊಳಿಸಿ ಡಾ. ಎಚ್.ಎಲ್. ಪುಷ್ಪ ಅವರು ಬುದ್ಧನ ವೈರಾಗ್ಯದ ಹಿಂದಿರುವ ಕಾರಣವನ್ನು ಬೇರೆಯದೇ ನೆಲೆಯಲ್ಲಿ ವಿಸ್ತರಿಸಿದ್ದಾರೆ. ಇದಕ್ಕೆ ಕವನದ ಅಡಿಟಿಪ್ಪಣಿಯಲ್ಲಿ ಕಪಿಲವಸ್ತು ಮತ್ತು ಕೊಲಿಯಾಗಳ ನಡುವೆ ಹರಿಯುತ್ತಿದ್ದ ರೋಹಿಣಿ ನದಿಯ ವಿವಾದವೇ ಸಿದ್ಧಾರ್ಥ ಬುದ್ಧನಾಗಲು ಕಾರಣ ಎಂಬ ವಿವರಣೆಯಿದೆ.

**ಕೊಲೆಗೆ ಕೊಲೆ, ಜೀವಕ್ಕೆ ಜೀವ**
**ಸಾವಿಗೆ ಸಾವು, ಯುದ್ಧಕ್ಕೆ ಯುದ್ಧ**
**ನೀಲನಕ್ಷೆಯ ಖಾಲಿ ಪಾಯದಲ್ಲಿ**
**ಸುರಿಯಲಾಗಿದೆ ಇಟ್ಟಿಗೆ, ಮರಳು**
**ಬರಿಯ ಸಿದ್ಧಾರ್ಥ ನಾನು, ಬುದ್ಧನಲ್ಲ**
**ನದಿಯ ನೀರಿಗಾಗಿ ಕೊಲ್ಲಲಾರೆ**
**ನನ್ನ ಮತ್ತೊಬ್ಬ ಸೋದರನನ್ನು**

**(ಬುದ್ಧನ ನದಿಯ ಹಾಡು - ಲೋಹದ ಕಣ್ಣು)**

ಹೀಗೆ ವಾಚ್ಯವಾಗಿಯೇ ಸನ್ನಿವೇಶವನ್ನು ಬಿಚ್ಚಿಡುವ ದೀರ್ಘವಾದ ಈ ಕವನ ಸಮಕಾಲೀನ ಸಮಸ್ಯೆಗಳನ್ನೂ ಸಹ ಅಂತರ್ಗತಗೊಳಿಸಿಕೊಂಡಿದೆ. ರಾಜ್ಯ ರಾಜ್ಯಗಳ ನಡುವೆ, ದೇಶ ದೇಶಗಳ ನಡುವೆ ಜೀವಜಲಕ್ಕಾಗಿ ನಡೆಯುವ ಹೋರಾಟ, ಮೇಲಾಟಗಳು ಈಗ ನಿತ್ಯದ ಸುದ್ದಿಗಳಾಗಿವೆ. ಸಾಮಾನ್ಯನನ್ನು ಅಸಾಮಾನ್ಯನನ್ನಾಗಿ ಮಾಡಬಹುದಾದಷ್ಟು ಜುಗುಪ್ಸೆಯನ್ನು ಇಂತಹ ವಿವಾದಗಳು ಸೃಷ್ಟಿಸಬಲ್ಲವೆಂಬ ಕಾಲಿಕ ಸತ್ಯವನ್ನು ಕವನ ಓದುಗನ ಮುಂದಿಡುತ್ತಿದೆ.

ಇನ್ನು ತಮ್ಮ ಸಮಕಾಲೀನ ವ್ಯಕ್ತಿಗಳ ಸ್ಮರಣೆಯನ್ನು ಸಹ ಮಹಿಳಾಕಾವ್ಯ ಪರಂಪರೆ ಮುಂದುವರಿಸಿರುವುದನ್ನು ಅನೇಕ ಕವನಗಳ ಮೂಲಕ ಕಂಡುಕೊಳ್ಳಬಹುದು. ಹೀಗೆ ಸ್ಮರಣೆಗೊಳ್ಳುವವರಲ್ಲಿ ಕವಿಗಳು, ರಾಜಕೀಯ ವ್ಯಕ್ತಿಗಳು, ಗುರುಗಳು... ತಂದೆ, ಅಣ್ಣ, ತಾಯಿ... ಮುಂತಾದ ಸಂಬಂಧಗಳೂ ಸೇರಿಕೊಂಡಿವೆ. ಕುವೆಂಪು, ಠಾಗೂರ್, ಕೆ.ಎಸ್.ನ. ತೇಜಸ್ವಿ ಲಂಕೇಶ್, ಸಿಜಿಕೆ, ಪ್ರತಿಭಾ ನಂದಕುಮಾರ್ ಹೀಗೆ ವ್ಯಕ್ತಿಗಳ ಪಟ್ಟಿಯೇ ಬೆಳೆಯುತ್ತದೆ.

ಅಧ್ಯಯನದ ಮಿತಿಯಲ್ಲಿ ಕೆಲವನ್ನು ಉದಾಹರಣೆಯಾಗಿ ಎತ್ತಿಕೊಳ್ಳಲಾಗಿದೆ.

**ಕದ್ದು ಓಡುವ ಚಂದ್ರನಿಗೆ | ಬೆಳ್ದಿಂಗಳ ರೆಕ್ಕೆಗಳು ಮೂಡಿ**
**ಅಲ್ಲಿ ಇಲ್ಲಿ ತಾರಾಡುತ್ತಾ ಹಗುರಾಗಿ ಹಾರಿ**
**ಸೀಳುತ್ತಾ ಕತ್ತಲಿನ ಗರ್ಭವನ್ನು**
**ಬೆಟ್ಟಗಳ ಮೇಲೆ ಹಂಸ ಪಕ್ಷಿಯಂತೆ ತೇಲಿ**
**...............................................**

ನಿನ್ನ ಮಂತ್ರ ಮಾಂಗಲ್ಯದಡಿ ದನಿಸೋತ ವಿಧಿಗಳು
ತಳಿರು ತೋರಣಗಳ ನಡುವೆ ಗಿಜಿಗಡುವ ಹಕ್ಕಿಲೋಕ
ಸೂರ್ಯ, ಚಂದ್ರ, ಅಗಣಿತ ತಾರೆಗಳು ಸಂಭ್ರಮದಿ ತೂಗಿ
ಕೌದಿಯಾದವು ಉಳುವ ರೈತರಿಗೆ, ಕನ್ನಡದ ಕಂದಮ್ಮಗಳಿಗೆ

(ರಸಋಷಿಯ ಕೈ ಬುಟ್ಟಿಯಲ್ಲಿ - ಲೋಹದ ಕಣ್ಣು)

ವಿವರಣೆಯಲ್ಲಿಯೇ ಕುವೆಂಪು ಅವರ ವ್ಯಕ್ತಿ ಚಿತ್ರಣವೆಂದು ಗುರುತಿಸಬಹುದಾದಷ್ಟು ಸರಳವಾಗಿರುವ ಈ ಕವನ ಕುವೆಂಪು ಸಾಹಿತ್ಯ ಜನಸಾಮಾನ್ಯರ ಜೀವನದ ಮೇಲೆ ಉಂಟು ಮಾಡಿದ ಪರಿಣಾಮವನ್ನು ಕೂಡ ಸೂಚ್ಯವಾಗಿ ಸ್ತುತಿಸುತ್ತಿದೆ. ಇಲ್ಲಿ ವಿಮರ್ಶೆಗೆ ಅವಕಾಶವೇ ಇಲ್ಲ. ಇದೇ ಕವಿ ಪ್ರೊ. ಸಿ.ಜಿ.ಕೆ. ಕುರಿತು ಬರೆದ ಕವನದಲ್ಲಿ ವಿವರಣೆಯನ್ನು ಇನ್ನಷ್ಟು ನಿಗೂಢಗೊಳಿಸಿ ಕವನದ ಗಾಂಭೀರ್ಯ ಹೆಚ್ಚಿಸಿದ್ದಾರೆ:

ನಿರಾಳದ ನಿದ್ದೆಯ ಸರಿ ಹೊತ್ತಲ್ಲಿ
ಬಗೆ ಕದಡಿ ಎಚ್ಚತ್ತಿದೆ ರಾತ್ರಿ
ಅಲ್ಲಿ ಆಮುಖವಿತ್ತು ಆತಂಕದಲ್ಲಿ
ನೂರು ಯೋಚನೆಗಳ ಹೊತ್ತು ಒದ್ದೆಯಾಗಿ
ನೂರಾರು ಪುಟ್ಟ ಕನಸುಗಳನ್ನು ಹೊತ್ತು

('ಏಕಲವ್ಯನೆಂಬ ಗುರುವಿಗೆ' - ಲೋಹದ ಕಣ್ಣು)

ಎಂದು ಆರಂಭವಾಗುವವ ಕವನ ಸಿಜಿಕೆ ಜೀವನದ ವಿವಿಧ ಹಂತಗಳನ್ನು, ಸಮಸ್ಯೆ, ಸಾಧನೆಗಳನ್ನು ರೂಪಕಗೊಳಿಸುತ್ತಾ ಮುಂದುವರಿಯುತ್ತದೆ. ಅಡಿಟಿಪ್ಪಣಿಯಲ್ಲಿ ಸಿಜಿಕೆ ನೆನಪಿನಲ್ಲಿ ಎಂದು ಕೊಡದಿದ್ದಲ್ಲಿ ಈ ಏಕಲವ್ಯನೆಂಬ ಗುರು ಯಾರೆಂಬುದನ್ನು ಪ್ರಯಾಸಪಟ್ಟು ಗುರುತಿಸಬೇಕಾಗುತ್ತಿತ್ತು. ಆ ಮಟ್ಟಿಗೆ ಇದೊಂದು ಉತ್ತಮ ವ್ಯಕ್ತಿಚಿತ್ರಣವಾಗಿ ಕಾಣಿಸುತ್ತದೆ. ಇದೇ ಸಿಜಿಕೆ ನೆನಪಿನಲ್ಲಿ ತಾರಿಣಿ ಶುಭದಾಯಿನಿಯವರ ಪ್ರತಿಕ್ರಿಯೆ ಅವರ ವ್ಯಕ್ತಿತ್ವದ ಉತ್ತರವನ್ನು ಇನ್ನಷ್ಟು ಪರಿಣಾಮಕಾರಿಯಾಗಿಸಿದೆ.

ಸಿದ್ಧ ದಾರಿಗಳ ನೊದ್ದು ಸುಡುವ ಭೂಮಿ ತುಂಬ
ತಿರುಗುತ್ತಿದ್ದ ಆ ಸಿದ್ಧ
................................
ಕನಸು ಬವಣೆಗಳ ಹೊತ್ತು | ಮರೆದ ಈ ಸುಟ್ಟ ಕಾಲ
ಜಂಗಮನ ಜರೆದರು ಎಲ್ಲ | ನೆಟ್ಟಗಿದ್ದ ಜನರು
ಇವರ ನಡುವೆ ನೋಯುತ್ತ
ನೋವಿಗೊಂದು ರೂಪಕ ಹುಡುಕುತ್ತ
ಕತ್ತಲು ಬೆಳದಿಂಗಳಿನಲ್ಲಿ ನಿಂತ

(ಸಿಜಿಕೆ ಎಂಬ ಜಂಗಮ - ಚಿತ್ತಗ್ಲಾನಿಯ ಮಾತು)

'ಸಿದ್ಧ ದಾರಿಗಳನೊದ್ದ ಸಿದ್ಧ', 'ಸುಟ್ಟ ಕಾಲ ಜಂಗಮ', 'ಕತ್ತಲ ಬೆಳದಿಂಗಳಲ್ಲಿ ನಿಂತವ' ಹೀಗೆ ರೂಪಕಗಳಲ್ಲೇ ಅವರ ವ್ಯಕ್ತಿತ್ವವನ್ನು ಅರ್ಥಗರ್ಭಿತವಾಗಿ ಹಿಡಿದಿಟ್ಟಿದ್ದಾರೆ. ಇದೇ ಕವಯಿತ್ರಿ

'ಪ್ರತಿಭಾ ನಂದಕುಮಾರ್' ಎಂಬ ತನಗಿಂತ ಹಿರಿಯ ಕವಯಿತ್ರಿಯ ಚಿತ್ರಣವನ್ನು ಕಟ್ಟುವಾಗ ಯಾವುದೇ ನಿರ್ದಿಷ್ಟ ಪಂಥದಲ್ಲೂ ಗುರುತಿಸಿಕೊಳ್ಳದೆ, ಹೊಗಳಿಕೆ, ತೆಗಳಿಕೆಗಳಿಗೂ ತಲೆ ಕೆಡಿಸಿಕೊಳ್ಳದೆ ಮುನ್ನುಗ್ಗುವ ಎದೆಗಾರಿಕೆಯನ್ನು ಪ್ರತಿಭಾರ ಕವನ ಓದುತ್ತಿರುವಂತೆಯೇ ಭಾಸವಾಗುವಂತೆ ರಚಿಸುತ್ತಾರೆ. ಆದರೆ ಈ ಪ್ರತಿಭಾ ನಂದಕುಮಾರ್ ಲಂಕೇಶ್ ಚಿತ್ರಣ ನೀಡುವಾಗ ಆ ವ್ಯಕ್ತಿತ್ವದ ನೇತ್ಯಾತ್ಮಕ ಅಂಶಗಳನ್ನೂ ಬಿಡದೆ ಬರೆಯುತ್ತಾರೆ :

**ಊರೆಲ್ಲಾ ಸುತ್ತಿ ಮಾಡಬೇಕಾದ್ದು ಬಾರದ್ದು**
**ಎಲ್ಲಾ ಮಾಡಿ ಬಂದು ಮೂಲೆಯಲ್ಲಿ**
**ಬೆಚ್ಚಗೆ ಕೂತ ಬೆಣ್ಣೆ ಮೆದ್ದ ಬೆಕ್ಕು**
**ಮತ್ತು ಒಡೆಯನಿಲ್ಲದ ನಾಯಿಮರಿ**
**ಸ್ವೇಚ್ಛೆಯಲ್ಲಿ ಎಲ್ಲೆಂದರಲ್ಲಿ ಉಚ್ಚೆ ಮಾಡಿ**
**ಬಂದು ಪರಸ್ಪರ ಎದಿರಾಗಿ ಒಂದು ಕ್ಷಣ**
**ದಿಟ್ಟಿಸಿ ನೋಡಿ.........**

**(ಅಂಕಲ್ ಉವಾಚ - ಕವಡೆಯಾಟ)**

ಹೀಗೆ ಮುಂದುವರಿಯುತ್ತದೆ. ಈ ನಡುವೆ ಆ ವ್ಯಕ್ತಿತ್ವದ ವಿಶಿಷ್ಟ ಅಂಶಗಳನ್ನು ದಾಖಲಿಸಲು ಮರೆಯುವುದಿಲ್ಲ. ಇದು ವ್ಯಕ್ತಿಸ್ಮರಣೆ ಎಂದರೆ ಕೇವಲ ಅವರ ಗುಣಗಳ ಪಟ್ಟಿ ಮಾಡಿ ನೇತ್ಯಾತ್ಮಕ ಅಂಶಗಳನ್ನು ಮರೆಮಾಚುವುದೆಂಬ ತೀರ್ಮಾನವನ್ನು ಧಿಕ್ಕರಿಸುತ್ತದೆ. ಅಲ್ಲದೆ ಒಬ್ಬ ವ್ಯಕ್ತಿಯನ್ನು ಗೌರವಿಸುವುದೆಂದರೆ ಆತನ ದೋಷಗಳ ಸಮೇತ ಒಪ್ಪಿಕೊಳ್ಳುವುದು. ಇದು ಅವರ ವೈಯಕ್ತಿಕ ಭಿನ್ನತೆಗೂ ತೋರಿಸಿದ ಗೌರವವಾಗುತ್ತದೆ. ಇದೇ ಕವಿ ಎಕೆಆರ್ ಬಗ್ಗೆ ಬರೆದಿರುವ ಕವನದಲ್ಲೂ ಇಂತಹುದೇ ವಸ್ತುನಿಷ್ಠತೆಯನ್ನು ನೋಡಬಹುದು.

ಜ್ಯೋತಿ ಗುರುಪ್ರಸಾದ್ ಅವರು ತೇಜಸ್ವಿ ಸಾವನ್ನು ಇನ್ನೂ ವಿಶಿಷ್ಟವಾಗಿ ಗ್ರಹಿಸುತ್ತಾರೆ. ಪ್ರತಿ ಮನದಲ್ಲೊಂದು ತೇಜಸ್ವಿ ಉದ್ಭವಿಸುವ ಆಶಾಭಾವನೆ ಅವರದು. ಅದಕ್ಕೆ ಕಾರಣ ತೇಜಸ್ವಿ ಬದುಕಿದ ರೀತಿ :

**ಸಾವು ಕೂಡ ಇಂದು | ತೇಜಸ್ಸಿನಿಂದ ಬೀಗುತ್ತಿದೆ!**

**.......................................**

**ಒಂದಿಷ್ಟು ಹಸಿರಿಗೆ | ಒಂದಿಷ್ಟು ಹಕ್ಕಿಗೆ**
**ನಮ್ಮೊಳಗೆ ಜಾಗ ಕೊಟ್ಟರೆ | ನಮಗೇ ತಿಳಿಯದಂತೆ**
**ಆ ಭಾವಚಿತ್ರ ಸೆರೆ ಹಿಡಿಯಲು | ತೇಜಸ್ವಿ | ಬಂದೇ ಬರುತ್ತಾರೆ**

**(ತೇಜಸ್ವಿ - ಮಾಯಾಪೆಟ್ಟಿಗೆ)**

ಒಬ್ಬ ವ್ಯಕ್ತಿ ಸಾವಿನ ನಂತರವೂ ಬದುಕುವ ಪರಿ ಅಥವಾ ಒಬ್ಬ ವ್ಯಕ್ತಿಯನ್ನು ಆತನ ಸಾವಿನ ನಂತರವೂ ಬದುಕಿಸುವ ಪರಿಯೆಂದೂ ಇದನ್ನು ನಾವು ಗ್ರಹಿಸಬಹುದಾಗಿದೆ. ಇದೇ ಕವಿ ಅಮೃತಾ ಪ್ರೀತಂ ಸಾವನ್ನು ಸಹ ಅಷ್ಟೇ ಅರ್ಥಪೂರ್ಣವಾಗಿ ಸ್ವೀಕರಿಸುತ್ತಾರೆ.

**ದೀಪವಾರಿ ಹೋಗಲಿಲ್ಲ, ಕತ್ತಲನ್ನು ಅಳಿಸಿತು!**
**ಬೆಳಕಿನೊಡನೆ ಬೆಳಕು ಸೇರಿ ಬೆಳಕು ಮಾತ್ರ ಉಳಿಯಿತು....**
**(ಅಮೃತಾ ಪ್ರೀತಂಗೆ - ಮಾಯಾಪೆಟ್ಟಿಗೆ)**

ಹೀಗೆ ಸಾವು ದೇಹಕ್ಕೆ ವಿನಾ ಆತ್ಮಕ್ಕಲ್ಲ ಎನ್ನುವ ಪಾರಂಪರಿಕ ಆಶಯವನ್ನು ಕವಯಿತ್ರಿ ಒಪ್ಪಿಕೊಳ್ಳುತ್ತಾ, ದೈಹಿಕ ಸಾವಿನ ಜೊತೆಗೆ ಒಬ್ಬ ವ್ಯಕ್ತಿಯ ಅಂತ್ಯವಿರುವುದಿಲ್ಲ ಎಂಬ ಅಂಶವನ್ನು ಬೆಳಕಿನ ರೂಪಕದಲ್ಲಿ ಹಿಡಿದಿಡುತ್ತಾರೆ. ಆದರೆ ಇದು ಎಲ್ಲ ಸಂದರ್ಭಗಳಲ್ಲೂ ಸತ್ಯವಾಗುವುದಿಲ್ಲ. ಜೀವನದ ತುದಿಯ ಬಿಂದುವಿನಲ್ಲಾದರೆ ಈ ರೀತಿಯ ಸಮಾಧಾನ ಸಾಧ್ಯವಾಗಬಹುದೇನೋ! ಆದರೆ ಮೊಗ್ಗು ಹೂವಾಗುವ ಮೊದಲೆ ಅಂದರೆ ಜೀವನಕ್ಕೆ ಕಣ್ತೆರೆಯುವಾಗಲೇ ಬಂದು ಅಪ್ಪಳಿಸುವ ಅಲೆಗಳು ಸಾವನ್ನು ಅಷ್ಟೊಂದು ಅರ್ಥಪೂರ್ಣವಾಗಿ ಸ್ವೀಕರಿಸಲು ಅಡ್ಡಿಯಾಗುತ್ತವೆ. ಇದಕ್ಕೆ ಅಕಾಲಿಕ ಮೃತ್ಯುವಿಗೀಡಾದ 'ವಿಭಾ' ಅವರ ಕೊನೆಯನ್ನು ಡಾ. ವಿನಯಾ ಹಿಡಿದಿಡುವ ರೀತಿಯಿಂದ ನಿದರ್ಶಿಸಬಹುದು.

**ಅಂದುಕೊಂಡಿರಲಿಲ್ಲ । ನಿನಗಾಗಿ ನಾ ನಿದ್ದೆಗೇಡಿ**
**ರಾತ್ರಿಗಳ ಕಳೆಯುತ್ತೇನೆಂದು**
**.....................................**
**ಆಡುವ ಎಷ್ಟೊಂದು ಮಾತುಗಳು**
**ಇತ್ತು ಹಾಗೇ ಇತ್ತು ಎಲ್ಲ ಬಾಕಿ ಇತ್ತು**
**ಎಂದೂ ತುಂಬದ ಹಾಳುಬಾವಿಯ ಹಾಗೆ**
**ಎದೆಯೊಳಗೆ ಅಳುವಿನ ಮುಳುಮುಳು ಸದ್ದು**
**('ವಿಭಾ' - ಮಾಯಾಪೆಟ್ಟಿಗೆ)**

ಇಲ್ಲಿ ಕವಯಿತ್ರಿ ಬಳಸಿರುವ ಹಾಳುಬಾವಿಯ ಉಪಮೆ ಪ್ರೀತಿಸುವ ಸಂಬಂಧವೊಂದು ಕಣ್ಮರೆಯಾದಾಗ ಉಳಿದ ಜೀವನದಲ್ಲಿ ಕಾಣುವ ದೀರ್ಘಕಾಲದ ಗೈರುಹಾಜರಿಯ ಅಸಹನೀಯತೆಯನ್ನು ಮನಸ್ಸಿಗೆ ತಟ್ಟಿಸುತ್ತಿದೆ. ಆದರೆ ಎಲ್ಲದಕ್ಕೂ ಒಂದು ತಾತ್ವಿಕ ಅಂತ್ಯ ಕಂಡುಕೊಳ್ಳುವ ಸ್ವಭಾವ ಕೂಡ ಪರಂಪರೆಯಿಂದ ಬಂದ ಆಶಯಗಳಲ್ಲೊಂದಾಗಿದೆ. ಅದಕ್ಕೆ ಕವನ

**ಸಾವನುಂಡವರು ಯಾರೆ?**
**ಸಾವ ಗೆದ್ದವರು ಯಾರೆ?**

ಎಂಬ ತಾತ್ವಿಕ ಸಮಾಧಾನದೊಂದಿಗೆ ಕೊನೆಯಾಗುತ್ತದೆ. ಮಹಿಳಾಕಾವ್ಯದಲ್ಲಿ ಈ ಸ್ಮರಣೆಯ ವಿಸ್ತಾರ ಕೇವಲ ಜೈವಿಕ ಸಂಬಂಧಗಳಿಗೆ ಮಾತ್ರ ಸಂಬಂಧಿಸಿರದೆ ಅಜೈವಿಕವೆಂದು ನಾವು ಗುರುತಿಸುವ ಚರಾಚರ ಜಗತ್ತಿನ ಕಡೆಗೂ ಹರಡಿಕೊಂಡಿದೆ. ಹಾಗಾಗಿಯೇ ತಾವಿರುವ ಮನೆ, ಊರು, ಹತ್ತಿರದ ಬೆಟ್ಟ, ಬಳಸಿದ ವಸ್ತುಗಳು ಎಲ್ಲದರೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿರುವ ಹಾಗೂ ಅದನ್ನು ಚಿತ್ರಿಸುವ ಅನೇಕ ಕವನಗಳನ್ನು ನೋಡಬಹುದು. ವೈದೇಹಿಯವರು

ತನ್ನ ತವರು ಮನೆ, ಗಂಡನ ಊರುಗಳ ಮೇಲೂ ಕವನ ಬರೆಯುತ್ತಾರೆ. ತಾವು ಕೆಲವು ಕಾಲ ವಾಸವಿದ್ದ ಶಿವಮೊಗ್ಗೆಯ ತುಂಗಾ ನದಿಯನ್ನು ಭಾವನಾತ್ಮಕವಾಗಿ ಅವರು ಹಿಡಿದಿಡುವುದು ಹೀಗೆ.

**ನದಿಯೂರಿಗೆ ಕೊಟ್ಟ ಕಡಲ ನಗರಿಯ ತಂಗಿ**
**ಬೆಳಗು ಕದ ತೆರೆವಾಗ ಎದುರು ತುಂಗೆ**
**ಮೊದಲೆ ಪರಿಚಯದಂತೆ ನಸುನಕ್ಕಳು**
**...........................**
**...ಮುನ್ನವೇ ಮನಗಂಡ ಯಾವ ಬನ್ನದ ಭಯವೊ**
**ಏನು ಗಡಿ-ಗಡು-ಗಂಡ ದುಗುಡ ತತ್ತರ ಅಥವಾ**
**ಭಾಗೀರತೀ ಹಾರ ಉತ್ತರ ಭಾಗವೋ**
**ಮಣ್ಣು ಬಣ್ಣದ ಮಣ್ಣ ಸೀರೆಯುಟ್ಟದ್ದು**
**ಯಾವ ಸೂಚನೆಯೊ ಯೋಚನೆಯೊ । ಕೇಳಿದವರಾರು?**
**ನೆರೆ ಬಂತು ನೆರೆ ಎಂದು ಕರೆದರು ನೆರೆದರು**
**ನೆರೆಯಂತೆ ಮಂದಿಯೂ ಚದುರಿ ಕರಗಿದರು**
**ಏನೊ ಹೇಳಲು ಹೊರಟೂ ಬಿಗಿದು ದನಿ ಬಂತು**
**ಬಂದಂತೆ ಮರಳಿದಳು ಆಡದೊಂದೂ ಮಾತು**

**(ತುಂಗೆಯನು ನೆನೆದು - ಹೂವ ಕಟ್ಟುವ ಕಾಯಕ)**

ಹೀಗೆ ಸದಾ ಪ್ರಶಾಂತವಾಗಿ ಹರಿಯುವ ತುಂಗೆ ಇದ್ದಕ್ಕಿದ್ದಂತೆ ಪ್ರವಾಹ ಉಂಟಾದಾಗ ಕವಯಿತ್ರಿ ಮನಸ್ಸಿನಲ್ಲಿ ಉಂಟುಮಾಡುವ ತಲ್ಲಣಗಳು, ಮೂಡಿಸುವ ಚಿತ್ರಗಳು ಕವನವನ್ನು ಲೌಕಿಕ ಪಾತಳಿಯಿಂದ ಚಾರಿತ್ರಿಕ, ಅಲೌಕಿಕ ಚಿಂತನೆಗಳತ್ತ ಜಿಗಿಯುವಂತೆ ಮಾಡುತ್ತದೆ. ಕವನ ಮುಂದುವರಿದು ಇಡೀ ಪ್ರಕೃತಿಯನ್ನೇ ಹೆಣ್ಣಾಗಿ ಅಥವಾ ಹೆಣ್ಣನ್ನೇ ಪ್ರಕೃತಿಯನ್ನಾಗಿ ನೋಡಿ ಸ್ತ್ರೀಶಕ್ತಿಯೊಂದು ಉಂಟು ಮಾಡಬಹುದಾದ ಪರಿಣಾಮಗಳನ್ನೂ ಕೂಡ ಸೂಚಿಸುತ್ತದೆ. ಯಾವುದೇ ಮೌನ ಕೇವಲ ಮೌನವಾಗಿರದೆ ಅದರೊಳಗೆ ಇನ್ನೇನನ್ನೋ ಕೌತುಕವನ್ನು ಅಡಗಿಸಿಕೊಂಡಿರ ಬಹುದೆಂಬ ಎಚ್ಚರಿಕೆ ನೀಡುವ ಪ್ರತಿಮೆಯಾಗಿಯೂ ತುಂಗೆಯನ್ನು ಬಳಸಿಕೊಂಡಂತಿದೆ. ನವೋದಯ ಕಾಲದ ಕವಿಗಳು ಪ್ರಕೃತಿವಿಸ್ಮಯಗಳನ್ನು ಆರಾಧನೆಯ ದೃಷ್ಟಿಯಿಂದ ನೋಡುತ್ತಿದ್ದರೆ, ಇಲ್ಲಿ ಆರಾಧನೆಗೂ ಮೀರಿದ ಇನ್ನೇನೋ ಜೀವನಪಾಠ ತೆರೆದಿಟ್ಟಂತಿದೆ. 'ಬೆಳಗು' ಎಂಬ ಭೌತಿಕ ಸಂಗತಿಯನ್ನು ಕನ್ನಡದ ಕವಿಗಳು ಇನ್ನಿಲ್ಲದ ಬೆರಗಿನಲ್ಲಿ ಹಿಡಿದಿಟ್ಟಿದ್ದಾರೆ. ಸವಿತಾ ನಾಗಭೂಷಣ ಅವರು ಬೆಳಗನ್ನು ಎದುರುಗೊಳ್ಳುವುದು ಹೀಗೆ:

**ಮತ್ತೆ ಬೆಳಗಾಗಿದೆ । ಬೆಳಕಿನ ಸಮುದ್ರದಲ್ಲಿ**
**ಜಗತ್ತು ಮುಖ । ತೊಳೆದುಕೊಳ್ಳುತ್ತಿದೆ**
**ಸೂರ್ಯ ಮೈಮುರಿಯುತ್ತಿದ್ದಾನೆ.**

ಪೇಪರು ಕೊಡುವ | ಪುಟ್ಟ ಹುಡುಗನಿಗೆ
ಕರೆಗಂಟೆ ಎಟುಕುತ್ತಿಲ್ಲ
ಹಾಲು ಕೊಡುವ ಮುದುಕ
ಸಾವಿನ ಸುಖದಲಿ | ಮೈಮರೆತಿರುವ
ಹೆಂಗಸರನ್ನು ಬದುಕಿನ
ಬಾಗಿಲಿಗೆ ಎಳೆಯುತ್ತಿದ್ದಾನೆ....

('ಮತ್ತೆ ಬೆಳಗಾಗಿದೆ' - ಆಕಾಶಮಲ್ಲಿಗೆ)

ಬೆಳಗೆಂಬ ಬೆಳಗು ದೈನಂದಿನ ಸಾಮಾನ್ಯ ಪ್ರಕ್ರಿಯೆಗಳಿಗೆ ಚಾಲನೆ ನೀಡುವ ಈ ಚಿತ್ರಣದಲ್ಲಿ ಸಾಧಾರಣವಾಗಿರುವುದೆಂದು ಪ್ರಾರಂಭದಲ್ಲಿ ಭಾಸವಾಗುವ ಕವನ ಕೊನೆಯಲ್ಲಿ ಪಡೆಯುವ ತಿರುವು, ಹೆಣ್ಣಿನ ಮಟ್ಟಿಗೆ ವಿಶಿಷ್ಟವಾಗುತ್ತದೆ. ಜಗತ್ತಿಗೆಲ್ಲ ಒಂದು ಸಂಭ್ರಮವಾದರೆ ಹೆಂಗಸರಿಗೆ ನಿದ್ರಾಸ್ಥಿತಿಯೇ ಹಿತಕಾರಿಯಾಗಿರುವ ಅನುಭವವನ್ನು ಕವಯಿತ್ರಿ ವ್ಯಂಗ್ಯದಲ್ಲಿ ಹಿಡಿದಿಡುವ ಪರಿ ಅನನ್ಯ. ಇತರರಿಗೆ ಬೇಕಾಗುವ 'ಬೆಳಕು' ಹೆಂಗಸರಿಗೆ ಸುಖ ತರದ ಸಂಗತಿಯಾಗಲು ಇರುವ ಕಾರಣಗಳನ್ನು ಮತ್ತೆ ಪಟ್ಟಿ ಮಾಡಬೇಕಾಗಿಲ್ಲ. ಬೆಳಗಿನ ವರ್ಣನೆಯ ಜೊತೆಗೇ, ಹೆಣ್ಣಿನ ಪಾಲಿಗೆ ಅದೆಷ್ಟು ನಿರೀಕ್ಷಿತ ಎನ್ನುವುದನ್ನು ಈ ಕವಯಿತ್ರಿ ಬಹಳ ಸೂಚ್ಯವಾಗಿ ಹೇಳುತ್ತಾರೆ. ಪ್ರಕೃತಿಯ ನಿಗೂಢತೆ, ಕೌತುಕಗಳನ್ನು ಎಷ್ಟೆಲ್ಲಾ ಬಗೆಯಲ್ಲಿ ತಿಳಿಯಲು ಯತ್ನಿಸಿದರೂ ಅದೊಂದು ತೀರದ ಪಯಣ. ಇದನ್ನು ಬೆಂಬತ್ತಿ ಹೋದ ಯಾರಿಗೂ ಪೂರ್ಣ ಉತ್ತರ ದೊರೆತಿಲ್ಲ. ಹಾಗೆಯೇ ಉತ್ತರ ದೊರೆತ ದಿನ ಬಹುಶಃ ಜೀವಸಂಕುಲದ ಕೊನೆಯ ದಿನವಾಗಬಹುದೇನೊ! ಹಾಗೆಂದು ಮತ್ತೆ ಮತ್ತೆ ಅದರತ್ತ ಆಕರ್ಷಿತವಾಗುವುದರಿಂದ ಮಹಿಳಾಕಾವ್ಯ ಕೂಡ ತಪ್ಪಿಸಿಕೊಂಡಿಲ್ಲ. ಇದೇ ಕವಯಿತ್ರಿಯ ಪ್ರಕೃತಿಯ ಕುರಿತಾದ ಹಂಬಲ ಹೀಗೆ ವ್ಯಕ್ತವಾಗುತ್ತದೆ:

ಹೊರಳುತ್ತಿರುವ ಭೂಮಿಯನ್ನೂ
ಉರುಳುತ್ತಿರುವ ಸಾಗರವನ್ನೂ
ಮಾತನಾಡಿಸಬೇಕು.
ಉರಿಯುತ್ತಿರುವ ಬೆಂಕಿಯನ್ನೂ | ಮೊರೆಯುತ್ತಿರುವ ಗಾಳಿಯನ್ನೂ
ಮಾತನಾಡಿಸಬೇಕು
......................................
ದೇವರೆ....... ಇವರದ್ದು ಯಾವ ಭಾಷೆ?!
ಎಂದಾದರೂ ಕೈಗೂಡುವುದೇ ಆಶೆ?

(ಮಾತನಾಡಿಸಬೇಕು - ಆಕಾಶಮಲ್ಲಿಗೆ)

ಹೀಗೆ ಪ್ರಕೃತಿವ್ಯಾಪಾರಗಳಲ್ಲಿರುವ ಅವಾಜ್ಮಯವನ್ನು ಅರ್ಥೈಸಿಕೊಳ್ಳುವ ತವಕ ಈ ಕವಿಗೆ. ಇಂತಹ ನವಿರಾದ ಭಾವನೆಗಳಿಗೆ ನವೋದಯದ ಕವಿಗಳು ಕಂಡುಕೊಂಡ ಉತ್ತರ ಪ್ರಕೃತಿಯಲ್ಲಿ ಪರಮಾತ್ಮನನ್ನು ಕಾಣುವುದು. ಕುವೆಂಪು ಅವರು 'ಜಡವೆಂಬುದು ಬರಿ ಸುಳ್ಳು ಎಂದು

ಸಚರಾಚರ ಸಂಗತಿಗಳೆಲ್ಲದರಲ್ಲೂ ಚೈತನ್ಯವನ್ನು ಗುರುತಿಸುತ್ತಾರೆ. ಆದರೆ ಈ ಕವಯಿತ್ರಿ ಸಹಜ ಕೌತುಕದೊಂದಿಗೆ ಅದನ್ನು ಓದುಗರ ತೀರ್ಮಾನಕ್ಕೆ ಬಿಟ್ಟು ಬಿಡುತ್ತಾರೆ. ಗೀತಾ ಹೆಗಡೆ ಎಂಬ ಕವಯಿತ್ರಿ 'ಬೆಳಗು' ಎಂಬ ಸಂಗತಿಯನ್ನು ಚಾರಿತ್ರಿಕ ರೂಪಕಗಳೊಂದಿಗೆ ಇಡುತ್ತಾ ಬೇಂದ್ರೆ ಹೇಳುವ 'ಇದು ಬರಿ ಬೆಳಗಲ್ಲೋ ಅಣ್ಣಾ...' ಶಾಂತಿರಸವೆ ಪ್ರೀತಿಯಿಂದ ಮೈದೋರಿದ ಜೀವನ ಮೌಲ್ಯವನ್ನು ಇನ್ನೊಂದು ಬಗೆಯಲ್ಲಿ ಕಟ್ಟಿಕೊಡುತ್ತಾರೆ.

**ಬೆಳ್ಳಂಬೆಳಗು**
**ಅದು ಗೊಮ್ಮಟನ ಒಳ-ಹೊರಗು**
**ಗೋರಖನ ಅರಿವಿನಾಳ**
**ಅಲ್ಲಮನ ಅಹಮಿಕೆಯ । ಪಗಡೆದಾಳ**
**.............................**
**ಬಿಡಿಸಲ್ಲಿ ರಂಗವಲ್ಲಿ**
**ಎದೆಯೊಳಗೆ ಉಸಿರೊಂದಿದ್ದರೆ ಅಲ್ಲಿ**
**ಅಲ್ಲೇ ಅರಳುವ ಬೆಳಗು.......ಬೆಳಗು!**
**ಅದು ಬೆಳಗೆ? । ಅಥವಾ ನಮ್ಮಯ ಒಳಗೆ**

**(ಬೆಳ್ಳಂಬೆಳಗು - ಅಕ್ಷರ ಚೈತನ್ಯ)**

ಹೀಗೆ ಬಾಹ್ಯದ ಬೆಳಗು ಕಾರಣ ಮಾತ್ರ, ಆದರೆ ಒಳಗಿನ ಬೆಳಗು ಅರಿವಿನಿಂದ ಸಾಧಿಸಿಕೊಳ್ಳಬೇಕಾದುದು ಎಂಬುದಿಲ್ಲಿ ವಿದಿತ.

ಮಹಿಳಾಕಾವ್ಯ ಕೇವಲ ಕೌತುಕಗಳಲ್ಲೇ ಮೈಮರೆಯುವುದಿಲ್ಲ. ಸಮಕಾಲೀನ ಜಗತ್ತಿನ ಆಗುಹೋಗುಗಳಿಗೆ ತನ್ನದೇ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾ ಬಂದಿದೆ. ಮಾನವ ಜೀವನ, ಮನುಕುಲಕ್ಕೆ ಹಾನಿಕರವಾದ ಪ್ರತಿ ನಡೆಯ ಮೇಲೂ ಸಂವೇದನಾಶೀಲವಾಗಿಯೇ ಇದೆ. ಅಂತಹ ಹಾನಿಕರವಾದ ಸಂಗತಿಗಳಲ್ಲಿ ಮನುಷ್ಯನ ಹಪಹಪಿಕೆ ಕೂಡಾ ಒಂದು. ಇದರ ಮೂಲ ಇರುವುದು ಆರ್ಥಿಕವಾಗಿ ಕ್ಷಿಪ್ರಗತಿಯಲ್ಲಿ ಮೇಲೇರಬೇಕೆಂಬ ಅತಿಯಾಸೆ. ಇದು ಪ್ರಕೃತಿಯನ್ನು ತನ್ನ ಪಾಡಿಗೆ ತಾನಿರಲು ಬಿಡದೆ ಇನ್ನಿಲ್ಲದ ರೀತಿಯಲ್ಲಿ ಹಸ್ತಕ್ಷೇಪ ಮಾಡಿ ಆಕ್ರಮಣ ನಡೆಸಿದೆ. ಮನುಷ್ಯ ಕುಲದ ಈ ದುರಾಸೆಗೆ ಸ್ಪಂದಿಸುವಾಗ ಒಬ್ಬ ಕವಯಿತ್ರಿಯ ಪ್ರತಿಕ್ರಿಯೆ ಹೀಗಿರುತ್ತದೆ.

**ಹೊಳೆದದ್ದು ತಾರೆ । ಉಳಿದದ್ದು ಆಕಾಶ**
**ನಡೆದದ್ದು ದಾರಿ । ಉಳಿದದ್ದೆ ಕಾಡು**
**....................................**
**ರಕ್ತದ ಕೋಡಿ ಹರಿದರೂ ಕಣ್ಣೀರ ಕೋಡಿ ಹರಿಯಲಿಲ್ಲ**
**ಇಡೀ ಭೂಮಿಯ ನುಂಗಿ ನೀರು ಕುಡಿಯಲು**
**ಹೊರಟಿರುವ ನಮಗೆ ಇನ್ನೊಂದು ಭೂಮಿಯ ತವಕ**

**('ಉಳಿದದ್ದು ಆಕಾಶ' - ಉಳಿದದ್ದು ಆಕಾಶ - ಎಸ್.ವಿ. ಪ್ರಭಾವತಿ)**

ವಾಚ್ಯವೆನ್ನಿಸಿದರೂ ಮಾನವನ ದುರಾಸೆಗೆ ಪ್ರಕೃತಿ ಬಲಿಯಾಗುತ್ತಿರುವ ಚಿತ್ರಣ ನೀಡುವ ಸಂವೇದನೆಯ ಮೂಲಕ ಕವನ ಗಮನ ಸೆಳೆಯುತ್ತದೆ. ಈ ಹಪಹಪಿಕೆಯನ್ನು ಸಮರ್ಥನೆ ಮಾಡಿಕೊಳ್ಳಲು ನಮಗೆ ನಮ್ಮದೇ ಕಾರಣಗಳಿವೆ ಅಥವಾ ಅಂತಹ ಕಾರಣಗಳನ್ನು ಸೃಷ್ಟಿ ಮಾಡುವುದರಲ್ಲಿ ನಾವು ನಿಸ್ಸೀಮರೆಂಬುದನ್ನು ಮಾಲತಿ ಪಟ್ಟಣಶೆಟ್ಟಿಯವರು ವಿಡಂಬಿಸುವುದು ಹೀಗೆ :

**ಮನೆಯ ನೆಪಕೆ ಮರವ ತರಿದೆ,**
**ನೆರಳ ನೆಪಕೆ ಹೂವ ಹರಿದೆ,**
**ಹಣ್ಣ ನೆಪಕೆ ಕಲ್ಲು ತೂರಿದೆ**

**(ಕ್ಷಮಿಸುತ್ತೀಯಾ ಕಾಡೆ? - ನನ್ನ ಸೂರ್ಯ)**

ಹೀಗೆ ಪ್ರತಿಯೊಂದು ಕಾರ್ಯಕ್ಕೂ ಒಂದೊಂದು ಕಾರಣ ಸೃಷ್ಟಿಸಿಕೊಂಡು ತನ್ನ ಅಳಿವನ್ನು ತಾನೇ ತಂದುಕೊಳ್ಳುತ್ತಿರುವ ಮನುಕುಲದ ನಡೆಗೆ ಈ ಕವಿಗೆ ವಿಷಾದಭಾವವುಂಟಾಗಿದೆ. ಇನ್ನು ಧನದಾಹದ ಮೇಲಾಟದಲ್ಲಿ ಸ್ಪರ್ಧೆಗಿಳಿದಂತಿರುವ ಜಾಗತಿಕ ನಡೆಗಳಲ್ಲಿ ಪ್ರಬಲರು ದುರ್ಬಲರ ಮೇಲೆ ನಡೆಸುವ ದೌರ್ಜನ್ಯಕ್ಕೂ ಕೂಡ ಮಹಿಳಾಕಾವ್ಯದ ಸ್ಪಂದನೆಯಿದೆ. ಈ ನಡುವೆ ಸಹಜ-ಸುಂದರವಾದ ಕ್ಷಣಗಳೆಲ್ಲವನ್ನೂ ವ್ಯಾಪಾರಿ ಜಗತ್ತು ಆವರಿಸಿರುವ ಪರಿಯನ್ನು ತಾರಿಣಿ ಶುಭದಾಯಿನಿಯವರು ವ್ಯಂಗ್ಯಗೊಳಿಸುವುದು ಹೀಗೆ :

**ಕನಸು ಮಾರಾಟಕ್ಕಿದೆ:**
**ಗ್ರೀಟಿಂಗ್ ಕಾರ್ಡ್‌ಗಳಲ್ಲಿ**
**ಸೀರೆಯಂಗಡಿಗಳಲ್ಲಿ**
**ಸಿನಿಮಾ ಹಾಡುಗಳಲ್ಲಿ**

**(ಕನಸು ಮಾರಾಟಕ್ಕಿದೆ - ತೋಡಿರಾಗ)**

ಹೀಗೆ ಕವನ ಜೀವನ ಸಂತೋಷದ ನೈಜ ಸಂಗತಿಗಳನ್ನೆಲ್ಲ ವ್ಯಾಪಾರೀಕರಣಗೊಳಿಸಿರುವ ಪಟ್ಟಿಯನ್ನು ನೀಡುತ್ತಾರೆ. ಇದನ್ನು ಇನ್ನಷ್ಟು ಧ್ವನಿಪೂರ್ಣಗೊಳಿಸಿದ್ದು ರೂಪ ಹಾಸನ ಅವರು.

**ಅವರು ಜಗಿದುಗಿದ ತಾಜ್ಯ ಈ ಬೀಜ!**

...............

**ಅನ್ಯಕಳೆಯ ಆರ್ಭಟದಲಿ**
**ನಮ್ಮದೇ ನಮಗೆ ವರ್ಜ್ಯ!**

ಹೊಸತನ, ಹೊಸಚಿಂತನೆಗಳು ಮನುಷ್ಯನನ್ನು ಪ್ರಭಾವಿಸದೇ ಇರುವುದಿಲ್ಲ. ಆದರೆ ಆ ಪ್ರಭಾವ ತನ್ನತನವನ್ನೇ ಕಳೆದುಕೊಳ್ಳುವಂತೆ ಮಾಡುವ ಈ ಮೋಡಿ ಮಾತ್ರ ಅಪಾಯಕಾರಿ ಎನ್ನುವ ಎಚ್ಚರಿಕೆಯ ಪ್ರಜ್ಞೆ ಈ ಕವಿಗಳ ಆಶಯವಾಗಿದೆ.

ಇದುವರೆಗೆ ಚರ್ಚಿಸಿದ ಸಂಗತಿಗಳೆಲ್ಲವೂ ಮಹಿಳಾಕಾವ್ಯ ಸಮಾಜದ ವಿಶಾಲ ವ್ಯಾಪ್ತಿಯ ಅಖಂಡತೆಗೆ ನೀಡಿದ ಸ್ಪಂದನೆಗಳಾಗಿದ್ದರೆ ಇನ್ನು ತನ್ನ ಸ್ವಂತಕ್ಕಾಗಿ ಹೆಣ್ಣು ಸ್ವೀಕರಿಸಿದ್ದೆಷ್ಟು, ಅನುಸರಿಸಿದ್ದೆಷ್ಟು ಎಂಬುದು ಕೂಡಾ ಮಹಿಳಾಕಾವ್ಯದಿಂದ ನಿರೀಕ್ಷಿಸುವ ಉತ್ತರವೂ ಆಗಿದೆ. ಈ ನಿಟ್ಟಿನಲ್ಲಿ ಯಾವೆಲ್ಲ ಪಾರಂಪರಿಕ, ಕಾಲಿಕ ಆಶಯಗಳನ್ನು ಮಹಿಳಾಕಾವ್ಯ ಒಪ್ಪಿಕೊಂಡಿದೆ, ಅಪ್ಪಿಕೊಂಡಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಮುಂದುವರಿಸಲಾಗಿದೆ. ಹೆಣ್ತನದ ಅಂಗೀಕಾರ, ತಾಯ್ತನದ ತುಡಿತ, ಕಾದು ಮಾಗುವ ವ್ಯವಧಾನ, ಮನೆ-ಮನಸ್ಸುಗಳನ್ನು ಮುನ್ನಡೆಸುವ ಸೂತ್ರಧಾರಿತನ ಇನ್ನೂ ಮುಂತಾದವು ಪರಂಪರೆ ನಿರೀಕ್ಷಿಸುವ ಹಾಗೆಯೇ ಮಹಿಳೆಯೂ ಭಾಗಶಃ ಒಪ್ಪಿಕೊಂಡಿರುವ ಆಶಯಗಳಾಗಿ ಗೋಚರಿಸುತ್ತವೆ. ತನ್ನನ್ನು ಎರಡನೇ ದರ್ಜೆಯಲ್ಲಿರಿಸಿದ ಪರಂಪರೆಯ ಬಗ್ಗೆ ತಿರಸ್ಕೃತ ಭಾವನೆ ಇದ್ದರೂ, ಅದರಿಂದ ಸಂಪೂರ್ಣವಾಗಿ ಹೊರಬರಲಾರದ ಅನಿವಾರ್ಯತೆಯಿಂದಲೋ ಅಥವಾ ಮೂಲಭೂತವಾದ ತನ್ನ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲಾಗದ ಬದ್ಧತೆಯಿಂದಲೋ ಎಂದಿನಂತೆಯೇ ಕೆಲವು ಆಶಯಗಳ ಮುಂದುವರಿಕೆಗೆ ಮಹಿಳಾಕಾವ್ಯ ಪೂರಕವಾಗಿ ಸ್ಪಂದಿಸಿದೆ.

> **ತಟ್ಟಿದ ರೊಟ್ಟಿಯ**
> **ಕೆಂಡಕ್ಕೆಸೆದರೆ । ಕೆಂಡದಲ್ಲಿ ಜೀವ ಉಬ್ಬುತ್ತದೆ**
> **ಒಳಕ್ಕೆ ಬನ್ನಿ । ಎಲೆ ತೊಳೆದು ಮಣೆ ಇಟ್ಟಿದ್ದೇನೆ**
> **ಏಪ್ಪಾದರೂ ನಾನು ಒಬ್ಬ ಹೆಣ್ಣು**
>
> **('ಹೆಣ್ಣು - ಝುಳಕ್ಕೆ ಮುಖ ಬೆಳಗುತ್ತದೆ - ಸಂಧ್ಯಾದೇವಿ)**

ಇಲ್ಲಿ ಎಷ್ಟೆಲ್ಲ ಬವಣೆಗಳನ್ನು ಎದುರಿಸಿದ ನಂತರವೂ ಹೆಣ್ಣು ಉಳಿಸಿಕೊಳ್ಳುವ ಈ ಸಮಾಧಾನ ಕೇವಲ ಆಕೆಯ ಅಸಹಾಯಕತೆ ಮಾತ್ರವಾಗಿರದೆ, ತಿರಸ್ಕಾರ, ಪ್ರತೀಕಾರಗಳೇ ಎಲ್ಲ ಸಮಸ್ಯೆಗಳಿಗೆ ಉತ್ತರವಲ್ಲ ಎಂಬ ಔದಾರ್ಯದೊಂದಿಗೆ ಪದೇ ಪದೇ ಕ್ಷಮಿಸುವ ಹೆಣ್ಣಿನ ಆದರ್ಶ ಜೀವಂತವಾಗಿದೆಯೇನೋ ಎಂದೆನಿಸುತ್ತದೆ. ಹಾಗಾದರೆ ಈ ಔದಾರ್ಯ ಹೆಣ್ಣಿನಿಂದ ನಿರೀಕ್ಷಿತವಾಗುವ ಕಾರಣವೂ ಆಕೆ ಸೃಷ್ಟಿ-ಜಗತ್ತಿಗೆ ಜನನಿ ಎಂಬ ಆದರ್ಶವೇ ಇರಬಹುದು. ಇದನ್ನು ಪೂರ್ಣ ಪ್ರಮಾಣದಲ್ಲಿ ಅಲ್ಲಗಳೆಯುವುದೂ ಕೂಡಾ ಆಕೆಗೆ ಆಗುತ್ತಿಲ್ಲ. ತಾನೇ ಸೃಷ್ಟಿಯ ಮೂಲ ಎಂಬ ಪರಿವೆ ಇದ್ದಾಗಲೂ, ಇದರ ನಿರ್ವಹಣೆ ತನ್ನ ಜವಾಬ್ದಾರಿ ಕೂಡ ಹೌದು ಎಂಬ ಅಲಿಖಿತ ಒಪ್ಪಂದವೊಂದಕ್ಕೆ ಸ್ತ್ರೀ ಕುಲ ಬದ್ಧವಾಗಿಯೇ ಇರುತ್ತದೆ, ಇರಬೇಕು.

> **ನಾನು । 'ಹೂಂ' । ಗುಟ್ಟದೆ**
> **ನನ್ನ ನೆಲದಲ್ಲಿ । ನಿನ್ನ ಬೀಜ**
> **ಬಿತ್ತಿ ಬೆಳೆಯಲು । ಸಾಧ್ಯವೇ ಇಲ್ಲ**

ಬಿತ್ತಿದ್ದನ್ನು । ಬೆಳೆಯುವ ಭಾರ
ನನ್ನದಾಗದಿದ್ದರೆ । ನಾನು ತಾಯಿಯಲ್ಲ

(ಜವಾಬ್ದಾರಿ - ಚುಕ್ಕಿ - ಜ್ಯೋತಿ ಗುರುಪ್ರಸಾದ್)

ಈ ತಾಯ್ತನದ ಮೌಲ್ಯ ಕೇವಲ ಸೃಷ್ಟಿಕಾರ್ಯವನ್ನು ಮುಂದುವರಿಸುವ ಸಾಮಾಜಿಕ ಜವಾಬ್ದಾರಿ ಮಾತ್ರವಾಗಿರದೆ ವೈಯಕ್ತಿಕವಾಗಿ ಹೆಣ್ಣು ಅನುಭವಿಸುವ ಜೈವಿಕ ಪುಳಕವೂ ಆಗಿದೆ ಎಂಬುದನ್ನು ಅನೇಕ ಕವಿಗಳು ಸಮರ್ಥಿಸಿಕೊಳ್ಳುತ್ತಾರೆ. ಅನಿವಾರ್ಯವಾದ ಈ ಹೊರೆ ಹಂಬಲವಾಗಿ ಮಾರ್ಪಟ್ಟಾಗ ಆಕೆಯ ತುಡಿತ ಹೇಗಿರುತ್ತದೆ ಎಂಬುದನ್ನು ಮೀನಾ ಸದಾಶಿವ ಅವರ ಕವನದಲ್ಲಿ ಕಾಣಬಹುದು.

ಒಂದಾನೊಂದು ಕಾಲದಲ್ಲಿ ಕತ್ತಲ ಸೀರೆಯುಟ್ಟು
ಕನಸುಗಳ ಕಟ್ಟಿಗೆಗೆ ಬೆಂಕಿಹಚ್ಚಿ
ನಿರಾಶೆಯ ಗಡಿಗೆಯಲ್ಲಿ
ಕೊತ ಕೊತ ಕುದಿವ ಭಾವನೆಗಳ ಬೇಯಿಸುತ್ತ
ಕುಳಿತಿದ್ದಳವಳು
............................
ಅಷ್ಟರಲ್ಲಿ । ಬಾನಿನಲ್ಲಿ ಮಾಡಿದ ಬಾಲಸೂರ್ಯ
ತಂಪಾದ ಕಿರಣಬೀರಿ
ಕತ್ತಲೆಯ ಭೂತ ಕೊಂದಿದ್ದ
ಕೆಂಡಗಳ ಮೇಲೆ ತಣ್ಣೀರು ಸುರಿದಿದ್ದ
ನಾಳೆಗಳಿಗೆ ಬಣ್ಣ ಬಳಿದಿದ್ದ

(ಬಾಲಸೂರ್ಯ - ಕೋಗಿಲೆಗೆ ಕಲಿಸಲಾರೆ)

ಮಗುವಿನ ಆಗಮನ ಇಷ್ಟೊಂದು ಚೇತೋಹಾರಿ ಆಗಿರಬೇಕಾದರೆ ಆ ಮುಂಚಿನ ಕರಾಳ ಸ್ಥಿತಿಯ ಹಿಂದೆ ಮತ್ತೆ ನಮ್ಮ ಪಾರಂಪರಿಕ ಸಮಾಜದ ನಡವಳಿಕೆಗಳನ್ನೇ ಹೊಣೆಯಾಗಿಸಬೇಕಾಗುತ್ತದೆ. ಇದಕ್ಕೆ ಪರ್ಯಾಯವಾದ ಮಾರ್ಗ ದೊರಕದಿರುವ ಕಾರಣವೇ ಇಂತಹ ಪುಳಕದ ಮೂಲ ಕಾರಣವಿದ್ದಿರಬಹುದಾದರೂ ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳುವ ಗೋಜಿಗೆ ಹೋಗದ, ಇರುವ ಸ್ಥಿತಿಯನ್ನೇ ಒಪ್ಪಿತವೆಂದು ಅಪ್ಪಿಕೊಂಡು ಇಂತಹ ಮನಸ್ಥಿತಿಯನ್ನು ಹೊಂದಿರಬಹುದು ಅಥವಾ ಬೇರೆಲ್ಲ ರೀತಿಯ ಅನುಕೂಲತೆಗಳಿದ್ದಾಗ್ಯೂ ಕೇವಲ ಜೈವಿಕ, ಭಾವುಕ ಹಂಬಲವಾಗಿಯೂ ಇದ್ದಿರಬಹುದು. ಈ ಹಂಬಲವನ್ನು ತೀವ್ರವಾಗಿ ಅನುಭವಿಸುವ ನಿದರ್ಶನಗಳೂ ಕೂಡ ಮಹಿಳಾಕಾವ್ಯದಲ್ಲಿಯೇ ದೊರೆಯುತ್ತವೆ.

ಮಗು
ನಿನ್ನ ನನ್ನ ಜಗತ್ತಿನಲ್ಲೊಂದು ಬೆರಗಿದೆ.
ಸಮಸ್ತ ಸೃಷ್ಟಿ ಸಂಬಂಧಗಳು ಬೇರಿದೆ.

ಬದುಕಿನ ತತ್ವವಿದೆ, ಸತ್ವವಿದೆ
ಸೃಷ್ಟಿಯನ್ನು ಪೊರೆವ ಮಾತೃತ್ವವಿದೆ,
ನಿನ್ನಿಂದ ನನಗಾಗಿ
ನನ್ನಿಂದ ನಿನಗಾಗಿಯೇ ಈ ಜಗತ್ತಿದೆ.

(ನನ್ನ ಸೂರ್ಯ - ನನ್ನ ಸೂರ್ಯ - ಮಾಲತಿ ಪಟ್ಟಣಶೆಟ್ಟಿ)

ಇಲ್ಲಿ ತಾಯಿ ಮಗುವಿನ ಸಂಬಂಧ ಅಲೌಕಿಕ ಪಾತಳಿಗೇರುವುದನ್ನು ಕಾಣಬಹುದು. ತಾಯ್ತನದ ಎಲ್ಲ ಹಸಿಹಸಿ ಕ್ಷಣಗಳನ್ನು ಅನುಭವಿಸುವ ಸಾಂಪ್ರದಾಯಿಕ ಮನಸ್ಥಿತಿಯೊಂದು ಇಷ್ಟೊಂದು ತೀಕ್ಷ್ಣವಾಗಿ ಪ್ರತಿಕ್ರಿಯಿಸಬಲ್ಲದು. ತಾಯಿ-ಮಗುವಿನ ಬಂಧಕ್ಕೆ ಪದಗಳಲ್ಲಿ ವರ್ಣಿಸಲಾಗದ ಮಿತಿ ಇರಬಹುದಾದರೂ ಅದಕ್ಕಿಂತ ಮಿಗಿಲಾದ ಪರ್ಯಾಯವೊಂದು ಲಭ್ಯವಿಲ್ಲದಿರುವ ಸಂದರ್ಭದಲ್ಲಿ ಈ ಭಾವನೆ ತಾರಕಕ್ಕೇರುವುದು ಎಂಬುದನ್ನು ಊಹಿಸಬಹುದು. ಜೊತೆಗೆ ಮಗುವಿನ ಲಾಲನೆ-ಪಾಲನೆಗಳ ಬಗ್ಗೆ ಇರುವ ಪಿತೃಪ್ರಧಾನವ್ಯವಸ್ಥೆಯ ಕ್ರಮಗಳೂ ಕೂಡ ಇದನ್ನು ಮತ್ತಷ್ಟು ಉದ್ದೀಪಿಸುತ್ತವೆ.

ಊರೆಂಬೋ ಊರು ಮಲಗಿ
ಒಂದೊಂದು ಸುಸಿಲು ನಿದ್ದೆ ಜಾರಿಸಿದರೂ
ಮಗುವಿದ್ದ ಮನೆ ಹಾಗೆ ಮಲಗುವುದಿಲ್ಲ

..............................

ಎಲ್ಲ ಕಿವಿಗಳೂ ಅತ್ತತ್ತ । ತೊಟ್ಟಿಲು ಜೀಕಿತೇ?
ಕಾಲಬಳೆ ಸದ್ದಾಯಿತೇ? । ಮನೆದೇವರು ಎದ್ದಾಯಿತೇ?
ಮಗುವಿದ್ದ ಮನೆಗೆ । ಗುಡಿಯಗತ್ತು । ಕೇಕೆಯ ಗೋಪುರ
ನಿತ್ಯ ತೇರು ಬೆಂಡು ಬತ್ತಾಸು
ಗರ್ಭದಲಿ ಅನವರತ ತಪಸ್ಸು



(ಮಗುವಿದ್ದ ಮನೆ-ನೂರು ಗೋರಿಯ ದೀಪ)

ಮಗುವಿನ ಆಗಮನ ಕೇವಲ ತಾಯಿಯ ನಿರೀಕ್ಷೆ, ಹಂಬಲ ಮಾತ್ರವಾಗದೆ ಇಡೀ ಕೌಟುಂಬಿಕ ವ್ಯವಸ್ಥೆಯೇ ಇದಕ್ಕೆ ಸಿದ್ಧವಾಗಿರುತ್ತದೆ. ಅದಕ್ಕಿರುವ ಕಾರಣ ಮತ್ತೆ ಹಲವಾರು. ಗಂಡುಮಗುವಾಗಿದ್ದರೆ ಮನೆದೇವರು! ಮನೆ ಬೆಳಗುವ ದೀಪ. ಇಂತಹ ಹಲವಾರು ಪಾರಂಪರಿಕ ನಂಬಿಕೆಗಳೆಲ್ಲವಕ್ಕೂ ಒತ್ತಾಸೆಯಾಗಿ ತಾಯ್ತನ ಸಂಭ್ರಮದ ಗಳಿಗೆಯಾಗುತ್ತದೆ. ಆದರೂ ತಾಯ್ತನ ನೀಡುವ ಅಮಿತಾನಂದವನ್ನು ಎಷ್ಟು ಬಗೆಯಲ್ಲಿ ವರ್ಣಿಸಿದರೂ ತೃಪ್ತಿಯಿಲ್ಲ. ಬಹುಪಾಲು ಕವಯಿತ್ರಿಯರು ಒಂದಲ್ಲ ಒಂದು ಕ್ಷಣದಲ್ಲಿ ಆ ಸವಿಗೆ ಸ್ಪಂದಿಸಿದ್ದಾರೆ. ಇದು ಜ್ಯೋತಿ ಗುರುಪ್ರಸಾದ್ ಅವರ ಪ್ರತಿಕ್ರಿಯೆ :

ಜಗದ ಯಾವ ಐಸಿರಿ ತಾನೇ
ಕಂದ ನಿನ್ನ ಹೂ ಮುತ್ತಿಗೆ ಸಮ ಹೇಳು

ನವಮಾಸಗಳು ನಿನ್ನ ಹೊತ್ತಿದ್ದು, ಹೆತ್ತಿದ್ದು
ಎಲ್ಲವೂ ನನಗೀಗ ನೆನೆದಷ್ಟೂ ಎದೆಯೊಳಗೆ
ಸರಸರನೆ ಹಾಲು ತುಂಬುವ ಗಳಿಗೆ

('ಮಮತೆ' - ಮಾಯಾಪೆಟ್ಟಿಗೆ)

ಈ ಅಮೂರ್ತವಾದ ಭಾವನೆ, ಅಲೌಕಿಕವಾದ ಶ್ರೇಷ್ಠತೆಗಳು ತಾಯ್ತನಕ್ಕೆ ಎರವಾದರೆ ಅದೊಂದು ವ್ಯಾವಹಾರಿಕ ಸಂಗತಿಯಾಗಿ ಬಿಡುತ್ತದೆ. ಇದರಿಂದ ಸಮಾಜದ ಸ್ವಾಸ್ಥ್ಯದ ಮೇಲೆ ವ್ಯತಿರಿಕ್ತವಾದ ಪರಿಣಾಮ ಉಂಟಾಗಬಹುದೇನೋ ಎಂಬ ತಾಯ್ತನದ ಕಾಳಜಿ ಈ ಎಲ್ಲದರ ಹಿಂದೆ ಅಡಗಿದೆ ಎಂಬುದು ಕೂಡಾ ಅಷ್ಟೇ ಗಮನಾರ್ಹ. ತಾಯ್ತನದ ಸಂತಸ ಮತ್ತೆ ಮತ್ತೆ ಮರುಕಳಿಸುವ ಪ್ರಸಂಗಗಳನ್ನೂ ತಾಯಿ ಸೃಷ್ಟಿಸಿಕೊಳ್ಳುತ್ತಾಳೆ. ರಶ್ಮಿ ಹೆಗಡೆಯವರ ಕವನ ಅದನ್ನು ಈ ರೀತಿ ನಿರೂಪಿಸುತ್ತದೆ.

ತುಂಬ ಹೆಂಗಳೆಯರು ಬಂದರು । ನನ್ನ - ನನ್ಮಗನ ನೋಡಲಿಕ್ಕೆ
ಅಂತೆಲ್ಲ ಬೀಗುತ್ತಿದ್ದೆ । ಸುಳ್ಳಾಯ್ತು ಎಲ್ಲ
ಅವರೆಲ್ಲ ಬಂದಿದ್ದು । ತಂತಮ್ಮ ತಾಯ್ತನದ
ಹಸೀಕ್ಷಣಗಳನ್ನ ಇನ್ನೊಮ್ಮೆ । ಆವಾಹಿಸಿಕೊಳ್ಳಲು

('ಅಮ್ಮನಾದ ಮೂರು ಕ್ಷಣ' - ಲೆಕ್ಕಕ್ಕೆ ಸಿಗದವರು)

ಹೀಗೆ ಪ್ರತಿ ತಾಯ್ತನವು ತಾಯಂದಿರಿಗೆ ದಿವ್ಯ ಸ್ಮರಣೆಯಾಗಿರುವುದರ ಹಿಂದೆ ಪಾರಂಪರಿಕವಾದ, ಸಾಮಾಜಿಕವಾದ, ಜೈವಿಕವಾದ ಅನೇಕ ಕಾರಣಗಳಿವೆ. ಇದೇ ಹಿನ್ನೆಲೆಯಲ್ಲಿ ಕೆಲವು ಪೌರಾಣಿಕ ಪಾತ್ರಗಳು ಮೌಲ್ಯಗಳೂ ಸಹ ಮಹಿಳಾ ಕಾವ್ಯದಿಂದ ಸ್ವೀಕೃತವಾಗಿರುವುದನ್ನು ಕಾಣಬಹುದು.

ನೀನು ಸೀತೆಯಲ್ಲ ಮಂಡೋದರಿಯೂ ಅಲ್ಲ
ಅದಕ್ಕೇ ನನ್ನ ಕನ್ನಡಿಯಾಗಿರುವೆ
ಅಪ್ಪನ ಅರಮನೆ - ವನವಾಸದ ಅತ್ತೆ ಮನೆ
ಎರಡೂ ಸುಖವೆನ್ನುವ ಸೂಕ್ಷ್ಮವಾದೆ
....................................
ನೀ ಬರೀ ಆಕಾಶದಲ್ಲಿ ಮಾತ್ರ ಕಾಣುವ, ಮುಗಿಯುವ ಬರೀ
ನಕ್ಷತ್ರವಲ್ಲ ...............

(ದ್ರೌಪದಿಗೆ - ಚುಕ್ಕಿ)

ಪೌರಾಣಿಕ ನಂಬಿಕೆಯ ಪ್ರಕಾರ ಪಂಚಮಹಾಸತಿಯರಲ್ಲಿ ದ್ರೌಪದಿ ಕೂಡ ಒಂದು ಪಾತ್ರ. ಈ ಪಾತ್ರ ಕವಯಿತ್ರಿಗೆ ಸ್ವೀಕಾರಾರ್ಹ ಪ್ರತೀಕವಾಗಿರುವ ಕಾರಣಗಳನ್ನು ಕವನ ಮಂಡಿಸುತ್ತದೆ. ಅತಿಯಾದ ಆದರ್ಶ ಹೆಣ್ಣಿನ ತನ್ನತನವನ್ನು ದೂರ ಮಾಡಿ, ತ್ಯಾಗ, ಪಾತಿವ್ರತ್ಯ ಮುಂತಾದ ಮೌಲ್ಯ ಹೇರಿಕೆಯಿಂದ ತನಗೆ ಬೇಕಾಗಿದ್ದನ್ನೆಲ್ಲ ಸೂರೆ ಮಾಡಿಕೊಂಡು ದೈವೀಕರಿಸಿ ಸತಿ

ಪಟ್ಟಕೇರಿಸುತ್ತದೆ. ಆದರೆ ಆ ಹುಸಿ ಆದರ್ಶ ಈ ಕವಯಿತ್ರಿಗೆ ಸ್ವೀಕಾರಾರ್ಹವಾಗಿಲ್ಲ. ಅದಕ್ಕೆ ಆಕೆ ನೀಡುವ ಕಾರಣ ಎಷ್ಟೆಲ್ಲ ಸಮಸ್ಯೆಗಳ ಎದುರಾದರೂ ತನ್ನ ಅವಮಾನಕ್ಕೆ ಪ್ರತೀಕಾರ ತೋರಿದ ದ್ರೌಪದಿಯ ದಿಟ್ಟತನ. ಇದೇ ರೀತಿ ಸ್ವೀಕೃತವಾದ ಇನ್ನೊಂದು ಪ್ರತೀಕ ಶಾಂತಲೆ.

**ಇತಿಹಾಸವೆಂಬುದು ಇಸವಿಗಳ ಪಂಚಾಂಗ**
**ರಾಜರಾಣಿಯರ ಹೆಸರುಗಳ ದೊಡ್ಡ ಖಾನೇಷುಮಾರಿ**
**..................................**
**ಹೇಳಲಾಗದ ನೂರು ಸಂವೇದನೆಗಳ ಆಮೆಯಂತೆ**
**ತನ್ನ ಮಡಿಲೊಳಗಿಟ್ಟು ಮುದುಪಿದಳು ರಾಜಮರ್ಯಾದೆಗೆ**
**('ಅಮರಶಾಂತಲೆಗೊಂದು ಸುನೀತ'– ಕಾಡುವ ನೆನಪುಗಳು - ಎಚ್.ಎಸ್. ರಾಜ್ಯಶ್ರೀ)**

ಚಾರಿತ್ರಿಕವಾದ ಈ ಪ್ರತೀಕದ ಹಿನ್ನೆಲೆಯಲ್ಲಿ ತೀವ್ರವಾದ ವಿಷಾದವಿದೆ. ರಾಜ್ಯವನ್ನು ಆವರಿಸಿರುವ ಕೋಟೆಯೊಳಗೆ ಈ ರಾಜಕುಮಾರಿ ಭೌತಿಕವಾಗಿ ಮಾತ್ರ ಬಂಧಿತಳಾಗಿಲ್ಲ. ತನ್ನ ಮನಸ್ಸಿನಲ್ಲಿ ಕಟ್ಟಿಕೊಂಡ ಅಥವಾ ಪಟ್ಟದರಾಣಿಯ ವೈಭೋಗದ ಕೋಟೆ ತನ್ನ ತಾನು ನೋಡಿಕೊಳ್ಳಲು ಅವಕಾಶ ನೀಡದಿದ್ದರೂ, ಬದುಕಿದ್ದಾಗ ದೊರೆಯದ ಶಾಂತಿಯನ್ನು ಸಾವಿನಲ್ಲಿ ಕಾಣುವ ಆಕೆಯ ಆದರ್ಶವನ್ನು ಈ ಕವಯಿತ್ರಿ ಮೆಚ್ಚಿಕೊಳ್ಳುತ್ತಾರೆ. ಧಾರ್ಮಿಕ ಹಿನ್ನೆಲೆಯಲ್ಲಿ ಆಕೆಯದ್ದು ಶ್ರೇಷ್ಠ ತೀರ್ಮಾನವಾಗಿದ್ದರೂ ಮಾನವೀಯ ನೆಲೆಯಲ್ಲಿ ಅದು ಸ್ವೀಕಾರಾರ್ಹವೆನಿಸುವುದಿಲ್ಲ.

'ಕಾಯುವಿಕೆ' ಕೂಡ ಹೆಣ್ಣಿನಿಂದ ನಿರೀಕ್ಷಿಸುವ ಒಂದು ಆದರ್ಶ ಗುಣ. ಇದು ಅಳೆದು ತೂಗಿ ನೋಡುವ ಕೌಶಲವನ್ನು ಆಕೆಗೆ ಕಲಿಸುತ್ತದೆ. ಇಂತಹ ಕಾಯುವಿಕೆ ಹೇಗಿರಬೇಕೆಂಬುದನ್ನು ಒಂದು ದೃಷ್ಟಾಂತದ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ರೂಪ ಹಾಸನ ಮಾಡುತ್ತಾರೆ.

**"ಮಗಳೇ ಬೆಣ್ಣೆ ಮುದ್ದೆಯ ಮೂರರಷ್ಟು**
**ದೊಡ್ಡ ಪಾತ್ರೆಯಲಿ ಕಾಯಲಿಡಬೇಕು**
**ಬೆಂಕಿ ಕೊಟ್ಟರೆ ಬೆಣ್ಣೆ ಉಕ್ಕುತ್ತದೆ**
**ತನ್ಮಯತೆಯಲಿ ಕಾಯಬೇಕು.**
**ಬೆಣ್ಣೆ ಹದ ಬೆಂದರಷ್ಟೇ । ಪಕ್ವಗೊಂಡ ತುಪ್ಪ**
**ಹೆಚ್ಚು ಕಾದರೆ ಸೀಕಲು । ಕಡಿಮೆ ಬೆಂದರೆ ಹಸುಕು**
**..............................**
**ಸಿದ್ಧಿಸಿದಂತೆಲ್ಲಾ, ಬೆಣ್ಣೆ ಉಕ್ಕುವುದಿಲ್ಲ**
**ಮಾಗುವ ಸದ್ದಿಗೆ ಧ್ಯಾನಿಸಿ**
**ಸ್ಥಿರಗೊಳ್ಳುತ್ತದೆ ಮನ ಕರಟುವುದಿಲ್ಲ**
**ಅಮ್ಮನಾಗುವುದೆಂದರೆ....ಹೀಗೆ**
**(ಅಮ್ಮನಾಗುವುದೆಂದರೆ.. ಕಡಲಿಗೆಷ್ಟೊಂದು ಬಾಗಿಲು, ಪುಟ ೨೮)**

'ಅಮ್ಮ' ಎಂಬುದು ಎಲ್ಲಾ ಜೀವಿಗಳಿಗೂ ನೆಮ್ಮದಿಯ ತಾಣ. ಆಸರೆಯ ಆಶಾ ಗೋಪುರ. ಇಂತಹ ಅಮ್ಮನಾಗುವ ಗುಣ ಕೇವಲ ಮಕ್ಕಳನ್ನು ಹೆತ್ತ ಮಾತ್ರಕ್ಕೆ ಸಿದ್ಧಿಸುವುದಲ್ಲ ಜೀವನದ ಅನುಭವಗಳಲ್ಲಿ ಪಕ್ಕಾಗಿ ದಕ್ಕಿಸಿಕೊಳ್ಳಬೇಕಾದುದು. ಅದು ತನ್ಮಯತೆ, ತಾಳ್ಮೆ, ಸಮಾಧಾನಗಳನ್ನು ನಿರೀಕ್ಷಿಸುತ್ತದೆ. ಬೆಣ್ಣೆಯೊಂದು ತುಪ್ಪವಾಗುವ ಕ್ರಿಯೆ ಎಷ್ಟೊಂದು ವ್ಯವಸ್ಥಿತವಾಗಿ ಜರುಗಬೇಕೋ ಹಾಗೆಯೇ ಅಮ್ಮನ ಮೌಲ್ಯ ಸಿದ್ಧಿಸುವಾಗ ಎದುರಾಗುವ ಜೀವನಾನುಭವಗಳನ್ನು ಸಮಾಧಾನ ಚಿತ್ತದಿಂದ ಎದುರುಗೊಳ್ಳಬೇಕು.

**೪.೨. ನಿರಾಕರಣೆಯ ನೆಲೆ**

ಆಧುನಿಕ ಮಹಿಳಾಕಾವ್ಯ ವಿವಿಧ ಸಾಧ್ಯತೆಗಳೊಡನೆ ಬೆಳೆಯುತ್ತಿರುವ ವೇಳೆಗಾಗಲೇ ಪ್ರಧಾನಧಾರೆ ಕಾವ್ಯಲೋಕದಲ್ಲಿ ಅನೇಕ ಮಾರ್ಪಾಟುಗಳು ಸಂಭವಿಸತೊಡಗಿದ್ದವು. ಇದಕ್ಕೆ ನವ್ಯದ ಉಚ್ಛ್ರಾಯ ಸ್ಥಿತಿ, ಸ್ತ್ರೀವಾದದ ಜಾಗತಿಕ ವಿಸ್ತರಣೆ, ಬದಲಾಗುತ್ತಿದ್ದ ರಾಜಕೀಯ, ಆರ್ಥಿಕ ವಿಚಾರಧಾರೆಗಳು ಮುಂತಾದವನ್ನು ಕಾರಣವಾಗಿ ಕೊಡಬಹುದು. ಪ್ರಾರಂಭದಲ್ಲಿಯೇ ವಿಶಿಷ್ಟ ಬಗೆಯ ಸಂವೇದನೆಗಳನ್ನು ಹೊರಹಾಕಲು ಇದರಿಂದ ಸಾಧ್ಯವಾಯಿತು. ನವೋದಯ ಕಾಲಘಟ್ಟದ ಆದರ್ಶಗಳು ನವ್ಯರ ಎದುರು ನಗೆಪಾಟಲಾಗಿ, ವ್ಯಕ್ತಿಪ್ರಜ್ಞೆಯತ್ತ ಒಲವು ಹೆಚ್ಚಾಗಿರುವುದನ್ನು ಕನ್ನಡದ ಸಮಕಾಲೀನ ಕಥೆ, ಕಾವ್ಯ, ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಈ ವ್ಯಕ್ತಿಪ್ರಜ್ಞೆಗೆ ಮಹಿಳಾಕಾವ್ಯ ತೀವ್ರವಾಗಿ ಸ್ಪಂದಿಸಿತು. ಪಾರಂಪರಿಕವಾದ ಆಶಯಗಳು, ಆದರ್ಶಗಳು ಹೆಣ್ಣಿಗೊಂದು ಪ್ರತ್ಯೇಕ ಅಸ್ತಿತ್ವ, ಧ್ವನಿ ಇದೆ ಎಂಬುದನ್ನು ಗುರುತಿಸಲಾರದಷ್ಟು ಗಾಢವಾಗಿ ಪರಿಣಮಿಸಿದ್ದವು. ಮಹಿಳೆ ತನಗೆ ದೊರೆತ ಶಿಕ್ಷಣ, ಉದ್ಯೋಗ, ಕೌಟುಂಬಿಕ ಸ್ವಾತಂತ್ರ್ಯಗಳಿಂದ ಯಾವೆಲ್ಲ ತನ್ನನ್ನು ಮುಕ್ತಗೊಳಿಸಿಕೊಳ್ಳಲು ಅಡ್ಡಿ ಪಡಿಸುತ್ತವೆ, ಅವುಗಳನ್ನು ನಿರಾಕರಿಸುವ, ತಿರಸ್ಕರಿಸುವ, ಮುರಿದುಹಾಕುವ ಪ್ರಯತ್ನದಲ್ಲಿ ತೊಡಗಿಕೊಂಡಳು. ಹೀಗೆ ನಿರಾಕರಣೆಗೆ, ತಿರಸ್ಕಾರಕ್ಕೆ, ಭಂಜನೆಗೆ ಒಳಗಾದ ಆಶಯಗಳು, ಪ್ರತೀಕಗಳನ್ನು ಸ್ಥೂಲವಾಗಿ ಸೂಕ್ತ ನಿದರ್ಶನಗಳೊಂದಿಗೆ ಅಧ್ಯಯನ ಮಾಡಲು ಈ ಉಪಶೀರ್ಷಿಕೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಹೀಗೆ ನಿರಾಕರಣೆಗೆ ಒಳಗಾದ ಅಂಶಗಳಲ್ಲಿ 'ವರ್ಣನೆ'ಯನ್ನು ಮೊದಲು ಮಾಡಿಕೊಂಡು ಯುದ್ಧ, ಅದರಿಂದಾಗುವ ಹಿಂಸೆ, ವ್ಯಕ್ತಿತ್ವವನ್ನು ಮರೆಮಾಚಿರುವ ಆದರ್ಶೀಕರಣ ಎಲ್ಲವೂ ಬರುತ್ತವೆ. ಸವಿತಾ ನಾಗಭೂಷಣ ಅವರು ತಾನೇನು ಮಾಡುವುದಿಲ್ಲ ಎಂಬುದನ್ನು ಹೇಳುವುದು ಹೀಗೆ :

> **ಹಿಂಡು ಹಿಂಡಾಗಿ ಅಲೆಯುವ/ಮೋಡಗಳಲ್ಲೊಂದು ತುಣುಕೆಂದೊ...**
> **ಆಕಾಶದ ಕ್ಯಾನ್‌ವಾಸ್‌ನಲ್ಲಿ/ಬಳಿದ ಬಣ್ಣಗಳಲ್ಲೊಂದು ಎಳೆಯೆಂದೊ**
> **ಒರಾಟಗಿ ಬೀಸುವ/ಗಾಳಿಯಲ್ಲೊಂದು ಗೆರೆಯೆಂದೊ....**
> **ಈಗವನನ್ನು ವರ್ಣಿಸುವುದಿಲ್ಲ.**
> ..................................................

ನಾನೀಗ ಕವಯಿತ್ರಿ ಅಲ್ಲ
ನನ್ನಲ್ಲಿ ಕಲ್ಪನೆಗಳಿಲ್ಲ
ನನ್ನಲ್ಲಿ ಕನಸುಗಳಿಲ್ಲ
ನನ್ನಲ್ಲಿ ಕವಿತೆಗಳಿಲ್ಲ
ಈ ಬಣ್ಣ-ಬೆಡಗು ಯಾವುದೂ
ಬದುಕ ಬೆಳಗಿಸುವುದಿಲ್ಲ

('ಬಿಡಿ ನನ್ನ ಪಾಡಿಗೆ ನನ್ನನ್ನು' - ಆಕಾಶಮಲ್ಲಿಗೆ – ಪುಟ ೪)

ತನಗೆ ಬೇಕಾಗಿದ್ದೆಲ್ಲವೂ ದೊರೆತಾಗ ಮನಸ್ಸು, ಸುಖಲೋಲುಪತೆಯಲ್ಲಿರಬಹುದೇನೋ! ಆದರೆ ಕೇವಲ ಭಾವನೆಗಳು, ವರ್ಣನೆಗಳು ನೀಡುವ ಸಮಾಧಾನ ವಾಸ್ತವಕ್ಕೆ ಹತ್ತಿರವಾದದ್ದಲ್ಲ. ಹೀಗೆ ಅವಾಸ್ತವದಲ್ಲಿ ಕಳೆದುಹೋಗಲಿಕ್ಕೆ ಈ ಕವಯಿತ್ರಿ ಮನಸ್ಸಿಲ್ಲ. ವರ್ಣನೆಗಾಗಿಯೇ ರಚಿತವಾದ ಮಹಾಕಾವ್ಯಗಳಿವೆ ಅಥವಾ ಮಹಾಕಾವ್ಯಗಳ ತುಂಬ ಬಹುಪಾಲು ವರ್ಣನೆಗಳು ತುಂಬಿರುತ್ತವೆ. ಅವು ವ್ಯಕ್ತಿಯ, ವ್ಯಕ್ತಿತ್ವದ ನೈಜತೆಯನ್ನು ಮರೆಮಾಚುತ್ತವೆ. ಕವಿಯಾದವರು ಇಂತಹ ಕಲ್ಪನೆ, ವರ್ಣನೆ, ಕನಸುಗಳನ್ನು ಹೆಣೆದಾಗ ಮಾತ್ರ ಅವರ ಕೆಲಸ ಮುಗಿದು ಹೋಗುವುದಿಲ್ಲ. ನೈಜ ವಾಸ್ತವವನ್ನೂ ಹಿಡಿಯಲು ಅವರಿಂದ ಆಗಬೇಕು. ಇದನ್ನೇ ಕವನ ಒತ್ತಾಯಿಸುತ್ತದೆ. ಇದು ಸರಳತೆಯಲ್ಲಿ ತನ್ನನ್ನು ತಾನು ಕಂಡುಕೊಳ್ಳಲು ಇಚ್ಛೆಪಡುವ ಮನಸ್ಸು. ಇದನ್ನು ಇನ್ನಷ್ಟು ತೀವ್ರಗೊಳಿಸಿದ್ದುನ್ನು ಪ್ರತಿಭಾ ನಂದಕುಮಾರ್ ಕವನದಲ್ಲಿ ಕಾಣಬಹುದು.

ಹಸಿರಿನಾಮಲೆ ಹಸಿರುಕಣಿವೆ
ಹಸಿರು ಗದ್ದೆಯೂ ಬಯಲು
ಗೊತ್ತು ಬಿಡಿ ಅದರಿಂದೇನು
ನನಗೆ ಕೆಂಪಿನ ಹುಚ್ಚು
........................................
ಹುಬ್ಬಿನ ನಡುವೆ ಚಾಮುಂಡೇಶ್ವರಿಯ ಕುಂಕುಮ
ರಕ್ತ ಬೀಜಾಕ್ಷರಿಯ ಪಟ್ಟೆ ಸೀರೆಯ ರೇಶ್ಮೆ
ಸಾಣೆ ಬಳೆಯ ಮಿಂಚು ಮೂಗುನತ್ತು
ತಟ್ಟಿದರೆ ಟಣ್ಣೆನ್ನುವ ಸುಟ್ಟ ಮಡಕೆ
ಮೊದಲ ಚುಂಬನದ ಸಾಕ್ಷಿ ಗುಲ್ ಮೊಹರ್
ಪೂಜೆಗೆ ಗೋಡೆ ಹತ್ತಿ ಕಿತ್ತ ದಾಸವಾಳ
ಅಬ್ಬರಿಸುತ್ತ ಹಾದು ಹೋದ ಅಗ್ನಿಶಾಮಕದ
ಕೆಂಪಲ್ಲ................
ಲೋಕರೂಢಿಯ ಸುಣ್ಣ ಬಳಿದ ಕೋಣೆಯ
ಒಳಪದರದ ಹಂಬಲದ ಕೆಂಪು

(ಕೆಂಪು - ಕವಡೆಯಾಟ - ಪ್ರತಿಭಾ ನಂದಕುಮಾರ್ – ಪುಟ ೧೧)

ಹಸಿರನ್ನು ಸಮೃದ್ಧಿಯ, ಸಂತಸದ, ಪ್ರಕೃತಿಯ ಸಂಕೇತವಾಗಿ ಬಳಸಲಾಗುತ್ತದೆ. ಭಾರತೀಯ ವೈದಿಕ ಪರಂಪರೆಯ ಅನುಸರಣೆಯಲ್ಲಿ ಹೆಣ್ಣು ಮಕ್ಕಳ ಮದುವೆ, ಬಸಿರು-ಬಾಣಂತಿ ಇನ್ನು ಮುಂತಾದ ಶುಭಸಂದರ್ಭಗಳಲ್ಲಿ ಹಸಿರುಬಳೆ, ಬಟ್ಟೆ ತೊಡಿಸುವುದು ವಾಡಿಕೆ. ಇನ್ನು ನವೋದಯ ಕಾಲದ ಪ್ರಕೃತಿ ಪ್ರೀತಿಯ ಕಾವ್ಯರಚನೆಗಳಲ್ಲಿ ಹಸಿರು ಪದೇ ಪದೇ ಬಳಕೆಯಾಗುವ ಪ್ರತಿಮೆ. ಕುವೆಂಪು ಗೀತೆಯನ್ನು ನೆನಪಿಸುವ ಮೊದಲ ಪದ್ಯಭಾಗದಲ್ಲಿಯೇ ಈ ಕವಯಿತ್ರಿ ಈ ಹಸಿರನ್ನು ನಿರಾಕರಿಸುತ್ತಿದ್ದಾಳೆ. ಆಕೆಗೆ ಬೇಕಾಗಿರುವುದು ಕೆಂಪು. ಶಕ್ತಿರೂಪಿಣಿಯಾಗಿ ಹೆಣ್ಣನ್ನು ಬಣ್ಣಿಸಿ, ಆಕೆಯ ಕ್ರೋಧವನ್ನು ಬಿಂಬಿಸುವ ಕೆಂಪು ಈ ಕವಯಿತ್ರಿಗೆ ಬೇಕಾಗಿಲ್ಲ. ಕಾದ ಮಡಕೆ, ನವಿರಾದ ಗುಲ್ ಮೊಹರ್, ದಾಸವಾಳ, ಅಗ್ನಿಶಾಮಕದ ಚಿಹ್ನೆಯ ಕೆಂಪುಗಳೂ ಸಹ ಆಕೆಗೆ ಬೇಕಾಗಿಲ್ಲ. ಆಕೆಗೆ ಬೇಕಾಗಿರುವುದು ಮನಸ್ಸಿನ ಒಳಗಿನ ಹಸಿಯಾದ ಭಾವಗಳು.

ಇಲ್ಲೂ ಕೂಡ ವಾಸ್ತವದ ಹಂಬಲವೇ ಈ ಕವಯಿತ್ರಿಯನ್ನು ತೀವ್ರವಾಗಿ ಕಾಡುತ್ತಿರುವುದು. ಈ ಮೂಲಕ ಏನೆಲ್ಲವೂ ಇದೆ ಎಂಬ ಭ್ರಮಾಲೋಕವನ್ನು ಸೃಷ್ಟಿಸಿ, ನಿಜವಾಗಿಯೂ ಅದೇನೂ ಆಗಿರದ ಟೊಳ್ಳು ನಂಬಿಕೆಗಳನ್ನು ಸಾರಾಸಗಟಾಗಿ ತಳ್ಳಿ ಹಾಕಲಾಗುತ್ತದೆ. ತನಗೆ ಏನು ಬೇಕು ಎನ್ನುವಷ್ಟು ಖಚಿತತೆ ಹೆಣ್ಣಿಗೆ ಬಂದಿವೆ ಎನ್ನುವುದೇ ಆಕೆಯ ಆಲೋಚನೆಗಳನ್ನು ಮೋಸಗೊಳಿಸಲು ಸಾಧ್ಯವಿಲ್ಲ ಎಂಬ ಎಚ್ಚರಿಕೆಯನ್ನು ರವಾನಿಸುತ್ತಿದೆ. ಹುಸಿ ಆದರ್ಶಗಳನ್ನು ವ್ಯಂಗಕ್ಕೀಡು ಮಾಡಲಾಗಿದೆ. ಹೀಗೆ ಕಾವ್ಯದಲ್ಲಿ ತನ್ನ ಆಯ್ಕೆ ಖಚಿತಪಡಿಸಿಕೊಂಡ ಮಾತ್ರಕ್ಕೆ ಸಾಮಾಜಿಕ ಆಗುಹೋಗುಗಳನ್ನು ಕಡೆಗಣಿಸುವುದಿಲ್ಲ. ಸಮಕಾಲೀನವಾದ ಪ್ರತಿಯೊಂದಕ್ಕೂ ತನ್ನದೇ ಚೌಕಟ್ಟಿನಲ್ಲಿ ಪ್ರತಿಸ್ಪಂದಿಸುವುದನ್ನು ಸಹ ಕನ್ನಡ ಮಹಿಳಾಕಾವ್ಯದಲ್ಲಿ ಗುರುತಿಸಬಹುದು.

'ನಾಡು-ನುಡಿಗಳ' ಪ್ರೇಮ ಮನುಷ್ಯ ಕುಲವನ್ನು ಪ್ರಗತಿಯತ್ತ ಕೊಂಡೊಯ್ಯುವ ಬದಲು ವಿಗತಿಯತ್ತ ಕೊಢೊಯ್ಯುತ್ತಿರುವುದನ್ನೂ ಸಹ ನಿರಾಕರಿಸಲಾಗಿದೆ.

**ಜಾತಿಯ ಗಡಿ, ನೀತಿಯ ಗಡಿ**
**ಭಾಷೆಯ ಗಡಿ, ಬಣ್ಣದ ಗಡಿ**
**ಧರ್ಮದ ಗಡಿ, ದೇಶದ ಗಡಿ**
**ರಕ್ತವನ್ನೆಲ್ಲ ಗಡಿಯಾರದೊಳಗೆ**
**ಹರಿಯ ಬಿಟ್ಟು ಕತ್ತಲು**
**ಬೆಳಕಿಗೆ ಕಣ್ಣು ಮುಚ್ಚಾಲೆ**

**(ಗಂಧವತೀ ಪೃಥ್ವಿ - ಹಕ್ಕಿ ಹರಿವನೀರು - ಕವಿತಾ ರೈ, ಪುಟ ೨೮)**

ಯಾವ ಜಾತಿ, ನೀತಿ, ಭಾಷೆ, ಬಣ್ಣ, ಧರ್ಮ, ದೇಶದ ಗಡಿಗಳನ್ನು ಮೀರಿ ಇಡೀ ಜನಾಂಗವೇ ಒಂದು ಎಂಬ ಭಾವನೆಯೊಂದಿಗೆ ಬದುಕುವುದು ಸಾಧ್ಯವಿದೆ; ಹಾಗೆ ಬದುಕಬೇಕು ಎನ್ನುವುದು ಪ್ರಪಂಚದಾದ್ಯಂತ ಅನೇಕ ಮಹನೀಯರ ಆಸೆ, ಅಭಿಪ್ರಾಯ. ಈ ಉದಾರ

ಚಿಂತನೆಯನ್ನು ಸಂಪೂರ್ಣವಾಗಿ ಧಿಕ್ಕರಿಸಿ ತಮ್ಮದೇ ಪ್ರತಿಷ್ಠೆಯಲ್ಲಿ ಮುಗ್ಧರ, ಅಮಾಯಕರ ಬದುಕನ್ನು ಸೂರೆಗೊಳ್ಳುತ್ತಿರುವ ರೀತಿಗೆ ಈ ಕವಯಿತ್ರಿಯದು ತಿರಸ್ಕಾರದ ನೋಟ. ಇಲ್ಲಿ ಗಡಿಯಾರ ಕಾಲದ ಪ್ರತೀಕ. ಸುಂದರಗೊಳಿಸಬೇಕಾಗಿದ್ದ ಜೀವನವನ್ನು ರಕ್ತ ಸಿಕ್ತಗೊಳಿಸಿಕೊಂಡಿರುವುದರ ಹಿಂದೆ ಇರುವುದು ಕೆಲವರ ಸ್ವಾರ್ಥ, ಮೂರ್ಖತನ, ಹಲವರ ಅಸಹಾಯಕತೆ. ಕವನ ವಾಚ್ಯವೆನ್ನಿಸಿದರೂ ಸಂವೇದನೆಯ ಕಾರಣದಿಂದ ಗಮನ ಸೆಳೆಯುತ್ತದೆ. ಹಿಂಸೆಯ ಕ್ರೂರತೆಯನ್ನು ಪ್ರತಿಭಾ ಅವರು ಒಂದು ನೈಜ ಘಟನೆಯೊಂದಿಗೆ ವಿವರಿಸುವುದು ಹೀಗೆ :

**ಕೊನೇ ಸಲ ಅವಳು ಬೇಡುತ್ತಾಳೆ ಮಂಡಿಯೂರಿ**
**ಲಂಕೆಗೆ ಹಾರಿದ ಪ್ರಾಣದೇವರೇ**
**ಶಿಲುಬೆ ನಿಭಾಯಿಸಿದ ಕರ್ತನೇ**
**ನಲವತ್ತು ದಿನಗಳ ನಿರಾಹಾರ ಜೈಸಿದ ಈಸಾನೇ**
**ಈಗಲ್ಲಿ ದಾಟಿಸು**
**ಬಂದವರು ಬದುಕಗೊಡಲಿಲ್ಲ**

**(ರಕ್ತಪಾತದ ಕವನಗಳು - ಅವರು ಪುರಾವೆಗಳನ್ನು ಕೇಳುತ್ತಾರೆ, ಪುಟ ೩೮)**

ಕವನದ ಪ್ರಾರಂಭದಲ್ಲಿಯೇ ಕವಿತೆಯ ಹಿನ್ನೆಲೆಯನ್ನು ಹೀಗೆ ವಿವರಿಸಲಾಗಿದೆ. ಹಿಂದೂ ಹುಡುಗನೊಬ್ಬ ಮುಸ್ಲಿಂ ಹುಡುಗಿಯನ್ನು ಮದುವೆಯಾಗಿ ಎಲ್ಲೆಲ್ಲೋ ತಲೆ ತಪ್ಪಿಸಿಕೊಂಡು ಬದುಕಿದ್ದಾಗ ಅವರ ಮನೆಯವರು ಅವರನ್ನು ಹುಡುಕಿ ಅವರ ಮಗುವಿನ ಎದುರೇ ಇಬ್ಬರನ್ನೂ ಕೊಂದು ಹಾಕಿದರು. ಇದು ನಿತ್ಯದ ಕಥೆ. 'ಧರ್ಮ' ಎಂಬ ಸಾಂಸ್ಥಿಕ ನೆಲೆಯ ಹಿನ್ನೆಲೆಯಲ್ಲಿ ನೈಜವಾದ ಜೀವನಪ್ರೀತಿ ಅರ್ಥ ಕಳೆದುಕೊಳ್ಳುವುದನ್ನೂ, ಯಾವ ಧರ್ಮವನ್ನು ಮನುಕುಲದ ಉದ್ಧಾರಕ್ಕಾಗಿ, ಮಾನವರ ನಿಯಂತ್ರಣಕ್ಕಾಗಿ ಸೃಷ್ಟಿಸಿಕೊಳ್ಳಲಾಯಿತೋ ಅಂತಹ ಧರ್ಮ ಅವರನ್ನೇ ತನ್ನ ಕಪಿಮುಷ್ಟಿಯೊಳಗೆ ಇರಿಸಿಕೊಂಡಿರುವ ವಿಪರ್ಯಾಸವನ್ನೂ ಕವನ ತೆರೆದಿಡುತ್ತಿದೆ. ಈ ವಿಷಯದಲ್ಲಿ ಎಲ್ಲಾ ಧರ್ಮಗಳೂ ಒಂದೇ ಎಂಬುದನ್ನೂ ಸಹ ಕವನ ಸೂಚಿಸುತ್ತಿದೆ. ಇಂತಹ ಅಸಹಿಷ್ಣುತೆಗೆ ಪಕ್ಕಾಗುವ, ಜೀವವಿರೋಧಿಯಾದ ಧರ್ಮದ ಅವಶ್ಯಕತೆಯಾದರೂ ಏನು ಎಂಬ ಜಿಜ್ಞಾಸೆಯನ್ನೂ ಕೂಡ ಇದರ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ. ಹಾಗಾದರೆ ಇದು ಧರ್ಮದ ಆಂತರ್ಯದಲ್ಲಿರುವ ಕ್ರೂರತೆಯೇ ಎಂದು ಪ್ರಶ್ನಿಸಿಕೊಂಡರೆ ಅಲ್ಲೂ ಕೂಡ ಧರ್ಮವೇ ಕೆಲವರ ಸ್ವಾರ್ಥ ಹಿತಾಸಕ್ತಿಗೆ ಬಲಿಯಾದ ಕಹಿಸತ್ಯ ಗೋಚರಿಸುತ್ತದೆ. ಅಪಮೌಲ್ಯಗಳನ್ನು ಬಿತ್ತುವುದು ಕೂಡ ಕೆಲವರಿಗೆ ಬದುಕಿನ ಮಾರ್ಗ. ಅನುಸರಿಸುವವರಿಗಾದರೂ ವಿವೇಚನೆ ಬೇಡವೆ ಎಂದುಕೊಂಡರೆ ಈ ಅಜ್ಞಾನವನ್ನೇ ಜ್ಞಾನವೆಂದು, ಸರಿಯೆಂದು ಬಿಂಬಿಸಲಾಗುತ್ತಿದೆ. ಇದರಿಂದ ಹೊರಬರಲಾದಷ್ಟು ಬಿಗಿಯಾದ ಬಂಧಗಳಿಂದ ಅವರನ್ನು ಹಿಡಿದಿಡಲಾಗಿದೆ. ಹೀಗೆ ಒಂದು ಕವನ ಅನೇಕ ವಿಚಾರಗಳ ಸರಣಿಯೇ ಆಗಿ ಬೆಳೆಯುತ್ತದೆ.

ಧರ್ಮಕ್ಕಾಗಿ, ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದವರನ್ನು ಹುತಾತ್ಮರನ್ನಾಗಿಸುವ, ಸ್ಮಾರಕಗಳನ್ನಾಗಿಸುವ ರೀತಿಗೂ ಮಹಿಳಾಕಾವ್ಯದ ತಿರಸ್ಕಾರವಿದೆ. ಹೆಣ್ಣು, ಹೊನ್ನು, ಮಣ್ಣುಗಳಿಗಾಗಿ ಯುದ್ಧ ನಡೆಯುತ್ತವೆ ಎಂಬ ಪಾರಂಪರಿಕ ನಂಬಿಕೆಯನ್ನೂ ಸಹ ವ್ಯಂಗ್ಯವಾಗಿ ನೋಡಲಾಗಿದೆ. 'ಯುದ್ಧ' ಎಂದರೇನೆ ಹಿಂಸೆ, ಶೋಷಣೆ, ದೌರ್ಜನ್ಯ. ಈ ದೌರ್ಜನ್ಯ ಹೆಣ್ಣಿನ ಮೇಲೆಯೇ ಹೆಚ್ಚು. ಪೌರಾಣಿಕವಾಗಿ, ಚಾರಿತ್ರಿಕವಾಗಿ, ವರ್ತಮಾನದಲ್ಲಿ ಪರಿಶೀಲಿಸಿದಾಗಲೂ ಹೆಣ್ಣನ್ನು ಕನಿಷ್ಠವಾಗಿ ನಡೆಸಿಕೊಂಡಿರುವುದನ್ನು ನಿದರ್ಶನ ಸಮೇತ ಸುಕನ್ಯಾ ಮಾರುತಿಯವರು ಹೀಗೆ ವಿವರಿಸುತ್ತಾರೆ :

**ಹೆಲೆನ್‌ಳ ಟ್ರಾಯ್ | ಸೀತೆಗಾಗಿ ರಾಮಾಯಣ**
**ದ್ರೌಪದಿಗಾಗಿ ಭಾರತ | ಹೆಸರಿಗೆ ಮಾತ್ರ ಪುರಾಣಗಳು;**
**ಹೈರಾಣಾದದ್ದು ಬೇರೆಯೇ | ಕಾರಣಕ್ಕೆ**

**ಯಾವ ಹೆಣ್ಣು ಗಂಡನ್ನು | ಬಯಸಿ ಯುದ್ಧ ಸಾರಿದ್ದಿಲ್ಲ.**
**ಅಲ್ಲೊಬ್ಬ ಇಲ್ಲೊಬ್ಬ | ಅಂಬೆ ರಂಬೆಯರ ಕತೆಯನ್ನೇ**
**ಹಿಗ್ಗಾ ಮುಗ್ಗಾ ಜಗ್ಗುತ್ತಿದ್ದಾರೆ.**

**ಗೆದ್ದು ತಂದ ಕದ್ದು ತಂದ | ಹೆಣ್ಣಿನ ಗತಿ?**
**ಅವರಿಗಾಗಿ ಕೇರಿಗಳು | ನಿರ್ಮಾಣವಾಗುತ್ತವೆ,**
**ಕೆಂಪು ದೀಪಗಳು | ಹೊತ್ತಿಕೊಳ್ಳುತ್ತವೆ**

..........................

**ಸಿಕ್ಕಿ ಸಿಕ್ಕವರು ಉಂಡು | ತೇಗುತ್ತಾರೆ**
**ಈ ಹೆಣ್ಣುಗಳೆಲ್ಲ ಮಣ್ಣಾಗುತ್ತಾರೆ**

**(ಸ್ಥಿತಿ - ಗತಿ - ನಾನೆಂಬ ಮಾಯೆ, ಪುಟ ೧೫೦)**

ಸುಂದರವಾಗಿರುವುದು, ಶ್ರೇಷ್ಠವಾಗಿರುವುದೆಲ್ಲ ತನ್ನ ಅಧೀನದಲ್ಲಿರಬೇಕು ಎಂಬುದು ಪುರುಷಪ್ರಧಾನ ಸಮಾಜದ ನಿರೀಕ್ಷೆ. ಇದು ಕೇವಲ ನಿರೀಕ್ಷೆ ಮಾತ್ರವಾಗದೆ ಮಹತ್ವಾಕಾಂಕ್ಷೆಯಾಗಿ, ದುರಾಸೆಯಾಗಿ ಮಾರ್ಪಟ್ಟಾಗ ಆಕ್ರಮಣಶೀಲವಾಗುತ್ತದೆ. ಈ ಆಕ್ರಮಣಶೀಲತೆಗೆ ಪದೇ ಪದೇ ಬಲಿಯಾದದ್ದು ಮಹಿಳೆ ಮತ್ತು ಮಣ್ಣು. ಯುದ್ಧಕ್ಕೆ ತಾನೊಂದು ಕಾರಣವಾಗಿಯೋ, ಯುದ್ಧದಲ್ಲಿ ಭಾಗಿಯಾದವನ ತಾಯಿ, ಹೆಂಡತಿ, ಮಗಳಾಗಿಯೋ, ಯುದ್ಧದಲ್ಲಿ ಗೆದ್ದ ರಾಜನ ಸಂಪತ್ತಾಗಿಯೋ ಒಂದಲ್ಲ ಒಂದು ಬಗೆಯಲ್ಲಿ ತನ್ನದಲ್ಲದ ತಪ್ಪಿಗೆ ವಿನಾಕಾರಣ ಬಲಿಯಾಗುವುದು ಹೆಣ್ಣು. ಈ ವೈರುಧ್ಯವನ್ನೇ ಕವನ ಎಳೆ ಎಳೆಯಾಗಿ ಬಿಡಿಸಿಡುತ್ತದೆ. ಗೆದ್ದವರಿಗೆ ವಿಜಯೋತ್ಸವವಾದರೆ ವಶವಾದವರಿಗೆ ನರಕಯಾತನೆ. ಹೀಗೆ ತಮ್ಮ ಸ್ವಾರ್ಥಕ್ಕೆ ಮುಗ್ಧರನ್ನು ಬಲಿ ಮಾಡುವ, ಅದನ್ನೇ ಶ್ರೇಷ್ಠತೆಯೆಂದು ಬಿಂಬಿಸಿಕೊಳ್ಳುವ ಈ ನಾಚಿಕೆಗೇಡಿನ ಸಂಗತಿಯತ್ತ ಕವಿಯದು ತೀಕ್ಷ್ಣವಾದ ತಿರಸ್ಕಾರ. ಇದು ಕೇವಲ ಪುರಾಣವಾಗಿಯೋ, ಚರಿತ್ರೆಯಾಗಿಯೋ ಇದ್ದಿದ್ದರೆ ಉದಾಸೀನ

ಮಾಡಬಹುದಿತ್ತೇನೋ ವರ್ತಮಾನದಲ್ಲಿಯೂ ಭಿನ್ನ ಭಿನ್ನ ರೂಪಗಳಲ್ಲಿ ಕಾಣಿಸಿಕೊಳ್ಳುವ ಹಿಂಸೆ ಇದರ ಬಗೆಗಿನ ಜಿಗುಪ್ಸೆಯನ್ನು ಇನ್ನಷ್ಟು ತೀವ್ರಗೊಳಿಸುತ್ತದೆ. ಪರಾಕ್ರಮಗಳನ್ನು ದಾಖಲಿಸುವ ಚರಿತ್ರೆಯು ಅದರ ಹಿಂದಿನ, ನಂತರದ ಯಾವ ತಲ್ಲಣಗಳನ್ನೂ ಸೆರೆ ಹಿಡಿಯಲಾರದು. ಆದರೆ ಸಾಹಿತ್ಯ ಆ ಕಾರ್ಯವನ್ನು ಮಾಡುತ್ತದೆ. ವಿಷ್ಣುವರ್ಧನನ ಪರಾಕ್ರಮಗಳ ಪಟ್ಟಿ ಮಾಡುವಾಗ, ಆತನ ಪಟ್ಟದ ರಾಣಿ ಶಾಂತಲೆಯ ಮನಸ್ಥಿತಿ ಏನು ಎನ್ನುವುದನ್ನು ಡಾ. ವಿನಯಾ ಅವರು ವಿವರಿಸುವುದು ಹೀಗೆ:

**ಬಿಟ್ಟಿದೇವ ಬಿಜಂಯಗೈದಾಗಲೆಲ್ಲ | ನನ್ನ ಅಂಗೈ ನಡುಕ**
**ದಿಟ್ಟಿ ಬಟ್ಟಲಲಿ ಹೊಳೆವ ಹೊಸ 'ಮೂಗುತಿ'**
**ಶರದ್ ರಾತ್ರಿಯ ಏಕಾಂತಕ್ಕೆ | ಹೊತ್ತ ನೀಲಾಂಜನ**
**ಅಂತಃಪರದೆಗೆ ಬಡಿ ಬಡಿದು**
**ಬಿಕ್ಕಾದ ಪಿಸುಗು ಮಾತು | ಮರು ಮುಂಜಾವು**
**ಚಂದಲೆಯ ಮುಡಿ ಸವರುವ**
**'ಸವತಿ ಗಂಧವಾರಣೆ'**

**(ಸ್ವಗತ - ಬಾಯಾರಿಕೆ, ಪುಟ ೩೧)**

ಹೀಗೆ ಯುದ್ಧದಲ್ಲಿ ಸೋತರೆ ವಿಧವೆಯಾಗುವ ಭಯ, ಗೆದ್ದರೆ ಸವತಿಯನ್ನು ಆಧರಿಸುವ ಅನಿವಾರ್ಯತೆ. ಹೀಗೆ ಎಲ್ಲ ಬಗೆಯಲ್ಲಿಯೂ ನೋವು. ಅವನು ಸ್ವತ್ತೆಂದು ಬಗೆದ ಹೆಣ್ಣುಗಳಿಗೆ ಈ ನಡುವೆ ತ್ಯಾಗದಿಂದ ಮಹಾತ್ಮರಾಗಲು ಹೊರಟ ಮಹಾನ್ ಪುರುಷರ ಪತ್ನಿಯರ ಪಾಡು ಇನ್ನೊಂದು ಬಗೆಯ ಅಸಹನೀಯ. ಇಂತಹ ಆದರ್ಶಗಳಿಗೆ ಪಕ್ಕಾದ ಪಾತ್ರಗಳು ರಾಮ, ಲಕ್ಷ್ಮಣ, ಯಶೋಧರ, ಗೌತಮ, ಬುದ್ಧ, ಬಸವ, ಗಾಂಧಿ.... ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಈ ಆದರ್ಶ ಪುರುಷರನ್ನನುಸರಿಸಿ ಬಂದ ಪತ್ನಿಯರ ನೋವು-ಸಂಕಟಗಳಿಗೆ ನಮ್ಮ ಪುರಾಣ, ಚರಿತ್ರೆಗಳು ಮಹಾಸತಿಯರ ಮುಖವಾಡ ನೀಡುತ್ತವೆ. ಇದನ್ನೂ ಕೂಡ ಮಹಿಳಾಕಾವ್ಯ ನಿರಾಕರಿಸುತ್ತದೆ.

**"ಹಿರಿಯಕ್ಕನ ಹಕ್ಕ ಕೇಳಿಲ್ಲ**
**ಸ್ವಯಂವರದ ಸಂಭ್ರಮಕ್ಕಲ್ಲ**
**ಪಟ್ಟದ ಆಸೆಯಿರಲಿಲ್ಲ**
**ಬಿಳಿಬಿಳಿ ಹಂಸದಂತೆ ಪುಟಿಯುವ**
**ಈ ಹೆಣ್ತನಕ್ಕೂ ಕೊಳ್ಳಿಯಿಟ್ಟವರ್‍ಯಾರು?"**
**ಮೂಳೆ ಮಾಂಸದ ದೇಹಕ್ಕಿಂತ**
**ರತ್ನ ಖಚಿತ ಸಿಂಹಾಸನ | ಎಷ್ಟೊಂದು ಗಟ್ಟಿ!**

**ಹೀಗೆ ಕುಳಿತರೆ ಹೇಗೆ? ಇಕ್ಷ್ವಾಕುವಂಶದ ಸೊಸೆ!**
**ತಳಿಗೆ ಬಟ್ಟಲ ಹಿಡಿದು ತಲೆಬಾಗಬೇಕು"**

**(ಉರಿವ ಇಳೆ ಊರ್ಮಿಳೆ - ಬಾಯಾರಿಕೆ – ಪುಟ ೧೮)**

ಜೀವಿ ಸಹಜವಾದ ಬಯಕೆಗಳನ್ನು ಬದಿಗೊತ್ತಿ ಅಭೌತಿಕವಾದ ವಸ್ತುಗಳಿಗೆ, ಸ್ಥಾನಮಾನಗಳಿಗಾಗಿ ನಡೆಸುವ ಮೇಲಾಟವನ್ನು ಊರ್ಮಿಳೆಯ ಪ್ರತೀಕದ ಮೂಲಕ ನಿರಾಕರಿಸಲಾಗಿದೆ. ಮನೆತನದ ಮರ್ಯಾದೆ, ಪತ್ನಿಯ ಆದರ್ಶ, ಪರಂಪರೆಗೆ ತಲೆಬಾಗುವುದು ಮುಂತಾದ ಮೌಲ್ಯಗಳು ಬೇರೆಬೇರೆ ಕಾಲದಲ್ಲಿ ಬೇರೆಬೇರೆ ರೂಪದಲ್ಲಿ ಕಾಣಿಸುತ್ತವೆ. ನಮ್ಮ ಬಹುಪಾಲು ಕವಯಿತ್ರಿಯರು ಇವುಗಳಿಗೆ ಪ್ರತಿಕ್ರಿಯಿಸುವಾಗ ಆರಿಸಿಕೊಂಡಿರುವುದು ಪೌರಾಣಿಕ, ಚಾರಿತ್ರಿಕ ಪಾತ್ರಗಳ ಮೂಲಕ ಮಾತನಾಡುವುದು. ತುಂಬ ಸಂದರ್ಭದಲ್ಲಿ ಇದು ಸ್ವಗತದ ಧಾಟಿಯಲ್ಲಿದ್ದು ಕೆಲವೊಮ್ಮೆ ಸಂವಾದಕ್ಕಿಳಿಯುತ್ತದೆ.

**ನನಗೆ ಗೊತ್ತು | ಮತ್ತೆ ಗೌತಮನ ಸರ್ಪ**
**ಹೆಡೆಯೆತ್ತಲಾರದು,**
**ನನ್ನೊಳಗೆ ಏನನ್ನೂ ಬಿತ್ತಲಾರದು**
**ರಾಮ ಸ್ಪರ್ಶಕ್ಕೆ | ಶಿಲೆ, ಸ್ಫೋಟವಾಗಿದೆ ಅಷ್ಟೇ**
**ಹೆಣ್ಣಾಗಲಿಲ್ಲ**

**(ಅಹ್ಯಲೆ - ನಾನೆಂಬಮಾಯೆ – ಪುಟ ೮೭)**

ಬಹಳ ವರ್ಷಗಳ ದಾಂಪತ್ಯದ ನಂತರವೂ ತನ್ನ ಜೊತೆಯಾದವಳ ಮನಸ್ಥಿತಿಯನ್ನು ಅರ್ಥ ಮಾಡಿಕೊಳ್ಳದ ಗೌತಮ ಏಕಾಏಕಿ ಶಾಪ ಕೊಡುವಂತಹ ಕ್ರೌರ್ಯಕ್ಕಿಳಿಯುವುದು; ಅಹಲ್ಯೆ ಕಲ್ಲಾಗುವುದು; ರಾಮನ ಸ್ಪರ್ಶದಿಂದ ಆ ಕಲ್ಲು ಮುಕ್ತಿ ಪಡೆಯುವುದು; ಗೌತಮ, ರಾಮರು ಶ್ರೇಷ್ಠರಾಗಿ ಅಹಲ್ಯೆ ಪಾಪಿಯಾಗಿ ಆ ಪಾಪಿಯ ಉದ್ಧಾರಕ್ಕೆ ಗೌತಮನ ಕರುಣೆ; ರಾಮನ ಔದಾರ್ಯ ಈ ಎಲ್ಲ ನಾಟಕೀಯ ಸನ್ನಿವೇಶಗಳು ಈ ಕವಯಿತ್ರಿಗೆ ಹಾಸ್ಯಾಸ್ಪದವಾಗಿ ಕಾಣಿಸಿದೆ. ಮಾತ್ರವಲ್ಲದೆ ಅದ್ಯಾವುದೂ ಹೆಣ್ಣಿನ ಮನಸ್ಸಿನ ಮೇಲೆ ಆದ ಗಾಯವನ್ನು ಹೋಗಲಾಡಿಸುವಂತಹುದಲ್ಲ. ಪರಂಪರೆಯ ಇಂತಹ ಆದರ್ಶಗಳ ಹಿಂದೆ ಮಾನವೀಯತೆಯ ಅಭಾವವೂ ಹೆಣ್ಣನ್ನು ಅಧೀರಳನ್ನಾಗಿಸುವ ಹುನ್ನಾರವೂ ಅಡಗಿದೆ ಎಂಬುದು ಊಹಿಸಬಹುದಾದ ಸತ್ಯವಾಗಿದೆ. ಹಾಗಾದರೆ ಇವೆಲ್ಲವೂ ತಾನಾಗಬೇಕೇಕೆ? ತನ್ನ ಭಾವ, ಜೀವಗಳನ್ನು ಕಡೆಗಣಿಸುವ ಇಂತಹ ಮೌಲ್ಯಗಳಿಗೆ ಯಾವುದೆಲ್ಲ ತಾನೆಂದು ಬಣ್ಣಿಸಲಾಗಿದೆಯೋ, ಅದೆಲ್ಲ ತಾನಲ್ಲ ಎನ್ನುವ ಮೂಲಕ ಪ್ರತಿಕ್ರಿಯಿಸಬೇಕಾಗಿದೆ.

ಅದಕ್ಕೆ ಆಕೆಯ ಪ್ರತಿಕ್ರಿಯೆ –

**ಯುಗಯುಗಗಳಿಂದ | ಪೌರುಷದ ಪುರುಷ**
**ಪ್ರಧಾನಪಟ್ಟವೇರಿದವ**

**ನಿನ್ನ ಅಂಧ ಪ್ರಪಂಚದಲ್ಲಿ**
**ಕಣ್ಣಿಗೆ ಪಟ್ಟಿ ಕಟ್ಟಿ ಕೊಳ್ಳುವ ಆ**
**ಗಾಂಧಾರಿ ನಾನೇನಲ್ಲ.**

**('ತರುವೆ ಯುಗದ ಬೆಳಕು' - ಹೂದಂಡಿ - ಮಾಲತಿ ಪಟ್ಟಣಶೆಟ್ಟಿ – ಪುಟ ೧೧೭)**

ಒಂದು ಹೆಣ್ಣಿಗೆ ಪತ್ನಿತನವಷ್ಟೇ ತಾಯಿತನವೂ ಪ್ರಾಮುಖ್ಯತೆವುಳ್ಳದ್ದು. ಎಲ್ಲಕ್ಕಿಂತ ಮುಖ್ಯವಾದದ್ದು ಆಕೆಯದೇ ಆದ ವ್ಯಕ್ತಿತ್ವ. ಕುರುಡನೊಂದಿಗೆ ವಿವಾಹವಾಗಿದ್ದೇ ಗಾಂಧಾರಿಯ ದೊಡ್ಡತನ. ಜೊತೆಗೆ ನೂರು ಮಕ್ಕಳ ಪಾಲನೆ-ಪೋಷಣೆಯ ಜವಾಬ್ದಾರಿಯಿಂದ, ಆಟ-ನೋಟಗಳ ಸಂತೋಷದಿಂದ ದೂರ ಮಾಡಿ ಕಣ್ಣಿಗೆ ಬಟ್ಟೆ ಕಟ್ಟಿ ಕೂರಿಸುವ ವ್ಯವಸ್ಥೆಗೆ ಇವರದ್ದು ದಿಟ್ಟ ಉತ್ತರ. ತಾನು ಏನಾಗಬೇಕೆಂಬ ಆಸೆ ನಿನಗಿದೆಯೋ, ಖಂಡಿತ ನಾನು ಅದಾಗುವುದಿಲ್ಲ. ನಾನೇನಾಗಬೇಕೆಂದುಕೊಂಡಿದ್ದೇನೆಯೋ ಹಾಗೆಯೇ ಆಗುತ್ತೇನೆ ಎಂಬ ಗಟ್ಟಿ ನಿರ್ಧಾರ ಈ ಭಾವದ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ಇನ್ನೂ ಅನೇಕ ಮಹಿಳಾಕವಿಗಳು ಇಂತಹುದೇ ಪ್ರತಿಕ್ರಿಯೆ ನೀಡಿರುವುದನ್ನು ಗುರುತಿಸಬಹುದು. ಪ್ರತಿಭಾ ನಂದಕುಮಾರ್ ಇನ್ನಷ್ಟು ವ್ಯಂಗ್ಯಗೊಳಿಸಿ ಹೇಳುವುದು ಹೀಗೆ :

**ಹೆದರಿಸುತ್ತಾರೆ ಅವರ ಕತೆಗಳನ್ನು ಹೇಳಿ**
**ಬೆದರಿಸುತ್ತಾರೆ ನೂರೆಂಟು ಶಾಪಗಳ ಅಪಾಯ ತೋರಿ**
**ಕಲ್ಲಾಗುವ ಕಷ್ಟಗಳ ಬೆಟ್ಟದಡಿ ಹುಲ್ಲಾಗುವ**

.................................

**ಎಷ್ಟೊಂದು ವಿಧದ ನರಕ ಪಾತಕಿಗೆ**
**ಪರಪುರಷನ ಬಯಸಿದ್ದಕ್ಕೆ**
**ಪತಿವ್ರತೆಗೇ ಸದಾ ಕಾಮುಕರ ಕಾಟ**
**ಶಪಿಸಿ ಸುಸ್ತಾದರು ದೇವರುಗಳು । ಕಲ್ಲಾಗಲಿಲ್ಲ ಕರಗಲಿಲ್ಲ**
**ಇನ್ನು ಸಾವಿನ ಮಾತು । ಈಗೇಕೆ । ಬರಲಿ ಬಂದಾಗ ನೋಡೋಣ**

**(ಪತಿವ್ರತೆ ಅಲ್ಲ - ಅವರು ಪುರಾಣಗಳನ್ನು ಕೇಳುತ್ತಾರೆ – ಪುಟ ೧)**

ತನ್ನೆಲ್ಲ ಆಸೆ-ಆಕಾಂಕ್ಷೆಗಳನ್ನು ಹತ್ತಿಕ್ಕಿ, ಪುರುಷಪ್ರಧಾನ ವ್ಯವಸ್ಥೆಯ ಎಲ್ಲ ಹುನ್ನಾರಗಳಿಗೂ ಆಹಾರವಾಗುತ್ತ ಇರಬೇಕೆನ್ನುವುದು ಹೆಣ್ಣಿನಿಂದ ವ್ಯವಸ್ಥೆಯ ನಿರೀಕ್ಷೆ. ಇದನ್ನು ಗಟ್ಟಿಗೊಳಿಸಲು ಅದು ಅನುಸರಿಸಿರುವ ತಂತ್ರ ಪಾಪ-ಪುಣ್ಯ, ಶಾಪ-ಮೋಕ್ಷಗಳ ಪರಿಕಲ್ಪನೆಗಳನ್ನು ಬಿತ್ತುವುದು. ಆದರ್ಶ ನಾರಿಯರೆಲ್ಲ ಅಜರಾಮರರಾದ ಕಥಾನಕ ಸೃಷ್ಟಿ. ಪರಪುರುಷನ ಬಯಸಿದವಳಿಗೆ ನರಕವೇನೋ ಸರಿ. ಆದರೆ ಪತಿವ್ರತೆಯರಿಗೆ ಮಾತ್ರ ಸದಾ ಕಾಟ ಕೊಡುವ ಕಾಮುಕರಿಗೆ ಯಾವ ಆದರ್ಶಗಳೂ ಇಲ್ಲವೇ? ಅವರಿಗೆ ಶಾಪ, ನರಕಗಳ್ಯಾವುದೂ ಇರದಿರುವುದು ಆಭಾಸವಲ್ಲವೇ? ಇಂತಹ ಕಲ್ಪಿತ ಕಥಾನಕಗಳಿಗೆಲ್ಲ ಈ ಕವಯಿತ್ರಿಯ ಉತ್ತರ ಪತಿವ್ರತೆ ಅಲ್ಲ ಅಥವಾ

ಆಗಬೇಕಾಗಿಲ್ಲ. ಹಾಗೆಂದು ಅದು ಅನಾಚಾರಕ್ಕೆ ದಾರಿ ಮಾಡಿಕೊಡಬೇಕೆಂಬ ನಿರೀಕ್ಷೆಯೂ ಇಲ್ಲ. ತನ್ನ ಭಾವನೆಗಳಿಗೆ ಆದ್ಯತೆ ಇರಲಿ ಎಂಬ ಬಯಕೆ ಮಾತ್ರ ಎದ್ದು ಕಾಣುತ್ತದೆ. ಸವಿತಾ ನಾಗಭೂಷಣ ಇದಕ್ಕೆ ದನಿಗೂಡಿಸುವುದು ಹೀಗೆ:

**ನಿನ್ನ ಪ್ರೀತಿಯನ್ನಷ್ಟೇ ಉಟ್ಟು**
**ಹೊರಟು ನಿಂತಿದ್ದೇನೆ**
**ಇಗೋ ಹೊರಟೆ**
**ಎಲ್ಲವ ದಾಟಿ ಹೋಗಿಯೇ ಬಿಡುತ್ತೇನೆ**

**(ಸತಿ ಹೋಗುವುದಿಲ್ಲ - ಆಕಾಶ ಮಲ್ಲಿಗೆ - ಪುಟ ೬೬)**

'ಪ್ರೀತಿ'ಯೊಂದನ್ನು ಬಿಟ್ಟು ಇನ್ನೆಲ್ಲ ಇದೆ ಎಂದರೆ ಅದರಿಂದಷ್ಟೆ ಬದುಕಲಾಗದು. ಏನಿಲ್ಲದಿದ್ದರೂ ಪ್ರೀತಿಯೊಂದಿದ್ದರೆ ಎಲ್ಲವನ್ನೂ ಗಳಿಸುವ ಸ್ಫೂರ್ತಿ, ಮರೆಸುವ ಶಕ್ತಿ. ಹಾಗಾದರೆ ಹೆಣ್ಣುಗಳ ನಿರೀಕ್ಷೆಯೆಂದರೆ ಸಹಜೀವಿಯ ಅಥವಾ ಒಡನಾಡಿಗಳ ಪ್ರೀತಿ. ಇನ್ನು ವ್ಯವಸ್ಥೆ ಏಕಾಏಕಿಯಾಗಿ ಮೌಲ್ಯಗಳನ್ನು ಹೆಣ್ಣಿನ ಮೇಲೆ ಹೇರಿ ಬಿಡುತ್ತದೆಯೇ? ಈ ಕಾರ್ಯ ಬಹಳ ಸೂಕ್ಷ್ಮವಾಗಿ ಜರುಗುವಂತಹದು. ನಿಯಂತ್ರಣ ಸಾಧನಗಳಾಗಿ ಬಳಕೆಯಾಗುತ್ತಿರುವುದಾದರೂ ಏನು? ಅದಕ್ಕೆ ಉತ್ತರವನ್ನೂ ಮಹಿಳಾಕಾವ್ಯವೇ ನೀಡುತ್ತದೆ. ಹೀಗೆ ವ್ಯವಸ್ಥೆಯನ್ನು ಚಾಚೂ ತಪ್ಪದೆ ಮುಂದುವರಿಸಲು ಸಹಕರಿಸುವುದು. ಹೆಣ್ಣಿನದೇ ಹತ್ತಿರದ ಸಂಬಂಧಗಳ ಮೂಲಕ ಅಜ್ಜಿಯಾಗಿ, ತಾಯಿಯಾಗಿ, ತಂದೆಯಾಗಿ ಹೀಗೆ ಮೌಲ್ಯಗಳ ವರ್ಗಾವಣೆ ಬಹಳ ನಯವಾಗಿ ನಡೆದುಬಿಡುತ್ತದೆ. ಈ ವರ್ಗಾವಣಾ ಮಾಧ್ಯಮಗಳಿಗೂ ಆಕೆಯ ಎಚ್ಚರಿಕೆ ನುಡಿ ನಿರಾಕರಣೆಯಿಂದಲೇ ಕೂಡಿರುತ್ತದೆ.

**"ಅಮ್ಮಾ ಸಾಕು ಮಾಡೆ ನಿನ್ನ ಪುರಾಣ....**
**ಏನೇ ಹೇಳು ತೊಡೆ ಸಂಧಿಯಲ್ಲಿ ಬದುಕ ಹುದುಗಿಸಿ**
**ಬದುಕಲಾರೆ, ನಾನು ಅಜ್ಜಿ ಸುತ್ತಿದ | ವರ್ತುಲದಲ್ಲೇ**
**ಸುತ್ತಲಾರೆ | ಕುತ್ತಿಗೆಗೊಂದು ಬಿಗಿದು ಹಿಡಿಯಬೇಡ ಅಮ್ಮಾ"**

**(ತಡೆ ಅಮ್ಮನಗುಡ್ಡ - ಚ. ಸರ್ವಮಂಗಳ - ಪುಟ ೧೩)**

ವಿವಾಹ, ಕುಟುಂಬ ಮುಂತಾದ ಸಾಮಾಜಿಕ ಸಂಸ್ಥೆಗಳು ಮೌನವಾಗಿಯೇ ಈ ಕಾರ್ಯ ಮುಗಿಸುತ್ತವೆ. ಇಲ್ಲಿ ಒತ್ತಾಯದ ಮದುವೆಯನ್ನೇ ಕವನದ ನಿರೂಪಕಿ ತಿರಸ್ಕರಿಸುತ್ತಿದ್ದಾಳೆ. ಇಂತಹ ತಿರಸ್ಕಾರಕ್ಕೆ ಬಲವಾದ ಕಾರಣಗಳು ಇರಲೇಬೇಕಲ್ಲ? ಇದೇ ಕವಯಿತ್ರಿಯ ಇನ್ನೊಂದು ಕವನದಲ್ಲಿ ಇದಕ್ಕೆ ಉತ್ತರ ದೊರೆಯುತ್ತದೆ.

**ತೊಡೆ ಮೇಲೊಬ್ಬಳು ತಲೆ ಮೇಲೊಬ್ಬಳು**
**ಮೆರೆಸಿ ತನ್ನನ್ನು ತಾನೇ ಅರ್ಧನಾರೀಶ್ವರನೆಂದು**
**ಬೀಗಿದವನ ಪಾಡು ನನಗೆ ಬೇಡ.**

**ಒಬ್ಬಳ ಕಣ್ಮುಚ್ಚಿ ಮತ್ತೊಬ್ಬಳಿಗೆ ಮುತ್ತಿಟ್ಟು**
**ಮಗದೊಬ್ಬಳತ್ತ ಕಣ್ಣು ಮಿಟುಕಿಸಿದ ಪೋರ,**
**ಅವನ ನೆನಪೂ ನನಗೆ ಬೇಡ**

**...........................................................**

**ರಕ್ತಮಾಂಸದ ಪಿಂಡವಾಗಿ ಹುಟ್ಟಿ ಬೆಳೆದು**
**ಅದಕ್ಕೆ ಬೆಲೆ ಕೊಡಬೇಡ, ಎನ್ನುವ ಇವರಾರೂ**
**ನನಗೆ ಬೇಡವೇ ಬೇಡವಯ್ಯ**

ಹೀಗೆ ಶಿವ, ಕೃಷ್ಣ, ವಿಷ್ಣು, ಬಾಹುಬಲಿ, ಬುದ್ಧ.... ಎಲ್ಲ ಪಾತ್ರಗಳ ಶ್ರೇಷ್ಠತೆಯನ್ನೂ ಈಕೆ ನಿರಾಕರಿಸುತ್ತಾಳೆ. ಹಾಗಾದರೆ ಆಕೆಯ ಬಯಕೆಯಾದರೂ ಏನು?

**ಅಯ್ಯಾ ನನಗೆ ಬೇಕು**
**ಕ್ಷಣ ತಿಕ್ಕಾಟದಲ್ಲಿ ಹೇಸಿಗೆ ನಡುವೆ**
**ಹುಟ್ಟಿ ಅಲ್ಲಿಯೇ ಇನ್ನೂ ಗಿರಗಿಟ್ಲೆ**
**ಆಡುತ್ತಿರುವ ನನ್ನ ನಾನೇ ಅರಿವುದಯ್ಯಾ**

**(ನಾನು ನಾನೇ – ಅಮ್ಮನಗುಡ್ಡ - ಪುಟ ೧)**

ವಾಸ್ತವದ ಬದುಕು, ಅದರ ಆಗುಹೋಗುಗಳಲ್ಲಿ ಆಸಕ್ತಿಯೇ ಈ ನಿರಾಕರಣೆಯ ಹಿಂದಿರುವ ಕಾರಣ. ಇಷ್ಟೆಲ್ಲಾ ದಿಟ್ಟತನದಿಂದ ನಿರಾಕರಿಸುವ ನಿರೂಪಕಿ ಬದುಕಿನಿಂದ ವಿಮುಖಳಾಗುತ್ತಿದ್ದಾಳೆಯೇ? ಅಂದುಕೊಂಡರೆ ಅದು ತಪ್ಪು ಕಲ್ಪನೆಯಾಗುತ್ತದೆ. ನಯವಾದ ನಿರಾಕರಣೆಯೊಂದಿಗೆ ಪ್ರಾರಂಭವಾಗಿ, ತಿರಸ್ಕಾರವಾಗಿ ಮಾರ್ಪಟ್ಟು ಮುಂದೆ ಪ್ರತೀಕಾರವಾಗುವ ಬಗೆಯನ್ನೂ ಇದೇ ಕವಯಿತ್ರಿಯ ಇನ್ನೊಂದು ಕವನ ನಿರೂಪಿಸುತ್ತದೆ.

**"...ಅಯ್ಯಾ ನನಗೊಂದು ಆಸೆ:**
**ಹಾಗೇ ಹೀಗೆ ಹೆಣ್ಣ ಬುಗರೆಯಾಡಿಸುವ**
**ಇವುಗಳ ಕುಂಡಿಗೆ ಜಾಡಿಸಿ ಒದೆಯಬೇಕು | ಒಮ್ಮೆಯಾದರೂ"**

**('ಭಂಡರು' - ಅಮ್ಮನಗುಡ್ಡ - ಪುಟ ೧೭)**

ಈ ತಿರಸ್ಕಾರ ತಾರಕಕ್ಕೇರಿದಾಗ ನೇರವಾಗಿ ಪುರುಷನನ್ನೇ ಸಂಬೋಧಿಸಿ ಪ್ರತಿಕ್ರಿಯಿಸಿದ ಉದಾಹರಣೆಗಳೂ ದೊರಕುತ್ತವೆ.

**"ಇದೊಂದು ಮಿಶ್ರತಳಿಯ | ವಿಚಿತ್ರ ಪ್ರಾಣಿ**
**ಗುಮ್ಮನಗುಸುಕಾಗಿದ್ದು | ಗಳಿಗೆ ಬಂದಾಗ**
**ಹೆಡೆ ಬಿಚ್ಚಿ, ಬುಸುಗುಡುತ್ತದೆ**
**ಬಾಯ ಚಪಲಕ್ಕೆ ಬೊಗಳುತ್ತದೆ"**

**(ಗಂಡು - ಏನು ಹೇಳಲಿ ಗೆಳೆಯ? - ವಿಜಯಾ ಸುಬ್ಬರಾಜ್)**

ತನ್ನತನವನ್ನು ಗುರುತಿಸದೆ ಪದೇ ಪದೇ ಗಾಳವನ್ನಾಗಿ ಬಳಸಿಕೊಂಡು ಉದ್ಧಾರಕರ ಮುಖವಾಡ ಧರಿಸುವವರ, ಹೆಣ್ಣನ್ನು ಅಹಂಕಾರದಿಂದ ತುಚ್ಛೀಕರಣಕ್ಕೊಳಪಡಿಸಿದವರ ವಿರುದ್ಧ ಇಂತಹ ಆಕ್ರೋಶ ಸಹಜವೆನ್ನಿಸಿದರೂ, ಗಂಡು ಹೆಣ್ಣು ಇಬ್ಬರೂ ಒಂದೇ ದೋಣಿಯಲ್ಲಿ ಸಾಗಬೇಕಾದ ಪಯಣಿಗರು. ಇವರಿಬ್ಬರಲ್ಲಿ ಸಾಮರಸ್ಯವಿದ್ದಾಗ ಮಾತ್ರ ಬದುಕು ಹಿತವಾಗಿ ಸಾಗುತ್ತದೆ. ಇದೇ ಕಾರಣದಿಂದ ಬದಲಾದ ಕಾಲಘಟ್ಟದಲ್ಲಿ ಮೌಲ್ಯ, ಆದರ್ಶಗಳ ಸ್ವರೂಪ ಕೂಡ ಬದಲಾಗುತ್ತದೆ. ಅದನ್ನೂ ಕೂಡ ಮಹಿಳಾಕಾವ್ಯದಲ್ಲಿಯೇ ಗುರುತಿಸಬಹುದು.

ತೀರಾ ಖಾಸಗಿಯಾದ ಚೀಲದ ರೂಪಕವನ್ನಿಟ್ಟುಕೊಂಡು ವೈದೇಹಿಯವರು 'ನೋಡಬಾರದು ಚೀಲದೊಳಗನು' ಎಂದು ನಿಷೇಧ ಹೇರುತ್ತಾರೆ. ಇದು ಹೆಣ್ಣಿನ ಖಾಸಗಿಲೋಕವನ್ನು ಯಾವುದೇ ಕಾರಣಕ್ಕೂ ಇತರರು ಪ್ರವೇಶಿಸಬಾರದೆಂಬ ನಿಷೇಧ. ನೋಡಿದರೂ ಆ ಒಳಲೋಕವನ್ನು ಅರ್ಥೈಸಿಕೊಳ್ಳಲು ಅವರು ಅಸಮರ್ಥರು. ಮೇಲಾಗಿ ಅವರು ಅರ್ಥೈಸುವ ಅಗತ್ಯವೂ ಕವಯಿತ್ರಿಗೆ ಕಂಡುಬರುತ್ತಿಲ್ಲ. ಹೀಗೆ ಅಂತರಂಗ ಪ್ರವೇಶ ಮಾಡುವ ಸಾಮರ್ಥ್ಯ, ಅಧಿಕಾರ, ಅವಕಾಶಗಳೆಲ್ಲವನ್ನೂ ಪುರುಷಲೋಕ ಕಳೆದುಕೊಂಡಿದೆ. ಅದಕ್ಕೆ ಮತ್ತೆ ಮತ್ತೆ ಪುರಾವೆ ನೀಡುವ ಅಗತ್ಯತೆ ಕೂಡ ನಿರೂಪಕಿಗೆ ಕಾಣಿಸುತ್ತಿಲ್ಲ.

### ೪.೩. ರೂಪಾಂತರದ ನೆಲೆ

ಅನುಕರಣೆ, ಅನುಸರಣೆಗೆ ಯೋಗ್ಯವಾದುದನ್ನೆಲ್ಲ ಸ್ವೀಕರಿಸಬಹುದು. ಜೀವವಿರೋಧಿ ಯಾದುದನ್ನೆಲ್ಲ ನಿರಾಕರಿಸಲೂಬಹುದು. ಸ್ವೀಕರಿಸಲೂ ಆಗದ ನಿರಾಕರಿಸಲೂ ಆಗದ ಮೌಲ್ಯಗಳನ್ನೆಲ್ಲ ಹೇಗೆ ನೋಡುವುದು. ಮನುಷ್ಯರು ನಿರ್ಮಿಸಿಕೊಂಡ ಪ್ರತಿಯೊಂದು ವ್ಯವಸ್ಥೆ, ಮೌಲ್ಯ, ಚಿಂತನೆಗಳು ಕೂಡ ಕಾಲ, ದೇಶಗಳ ಪ್ರಭಾವಕ್ಕೆ ಒಳಗಾಗುತ್ತಲೇ ಇರುತ್ತವೆ. ಎಲ್ಲವನ್ನೂ ಮೂಲ ರೂಪದಲ್ಲಿ ಸ್ವೀಕರಿಸಲಾಗದಿದ್ದರೂ ಬದಲಾದ ಕಾಲಘಟ್ಟದಲ್ಲಿ ಅನುಕೂಲಕಾರಿಯಾಗಿ ಮಾರ್ಪಡಿಸಿಕೊಂಡು, ಕೆಡುಕನ್ನು ತ್ಯಜಿಸಿ, ಒಳಿತನ್ನು ಹೆಚ್ಚಿಸಿಕೊಳ್ಳುವ ಕಲೆ ಕೂಡ ಕರಗತವಾಗಬೇಕಿದೆ. ಈ ನಿಟ್ಟಿನಲ್ಲಿ ಮಹಿಳಾಕಾವ್ಯದ ಸ್ಪಂದನೆ ಏನು ಎಂಬುದನ್ನು ಈ ಉಪಶೀರ್ಷಿಕೆಯ ಅಡಿಯಲ್ಲಿ ಪ್ರಸ್ತುತ ಪಡಿಸಲಾಗಿದೆ.

> **ನಿಟ್ಟುಸಿರ ಎಣಿಸಿದ್ದೇವೆ । ಪರಸ್ಪರ ನೋವುಗಳ**
> **ಕೊಟ್ಟು ಪಡೆದಿದ್ದೇವೆ**
> **ಸುಮ್ಮನೆ ಮುಗ್ಧತೆ । ನಟಿಸುತ್ತೇವೆ ಹೀಗೆ...**
> **ಬದುಕು ಚಿಕ್ಕದು । ಕಾಲ ದೊಡ್ಡದು**
> **ನಾವು ಸುಮ್ಮನೆ ಹೀಗೇ...**
>
> **('ಸುಮ್ಮನೆ ಹೀಗೇ' - ಬಾಗಿಲಾಚೆಯ ಮೌನ - ಪುಟ ೫೧)**

ಜೀವನದಲ್ಲಿ ಏಳುಬೀಳುಗಳನ್ನೆಲ್ಲ ಉಂಡ ಮೇಲೆ, ಹೋರಾಟ ಹಾರಾಟಗಳೆಲ್ಲ ಮುಗಿದ ಮೇಲೆ ಇಂತಹುದೇ ಮೌನ, ವಿಷಾದ ಮನಸ್ಸನ್ನು ಆವರಿಸುತ್ತದೆಯೇ? ಇದು ಸೋತ ಭಾವನೆಯೋ?

ಅಥವಾ ನಿರ್ಲಿಪ್ತ ಮನಸ್ಥಿತಿಯೋ! ಬಹುಶಃ ಕೂಗಾಟ - ಮೇಲಾಟಗಳಲ್ಲಿ ಕಾಣದ ಸುಖ ಪರಸ್ಪರರನ್ನು ಅರ್ಥೈಸಿಕೊಳ್ಳುವಿಕೆಯಲ್ಲಿದೆ ಎಂಬ ಸತ್ಯ ಮನವರಿಕೆಯಾದ ನಂತರದ ಹೊಸದಾರಿಯಿರಬೇಕು. ಇಂತಹುದೇ ಹೊಂದಾಣಿಕೆ, ಹೊಸ ಚಿಂತನೆ, ವೈರುಧ್ಯವನ್ನು ಸಾಧಿಸುತ್ತಿರುವ ಎರಡು ದೇಶಗಳ, ಎರಡು ಧರ್ಮಗಳ ನಡುವೆ ಉಂಟಾದರೆ,

**ಜಯಾಪಜಯಗಳನು ಕೂಡಿಸಿ, ಗುಣಿಸಿ**
**ಕಳೆದು, ಭಾಗಿಸಿ ತಾಳೆ ಹಾಕುವಂತಿಲ್ಲ**

**ಮಸೀದಿಗಳಲ್ಲಿ ಚರ್ಚುಗಳಲ್ಲಿ**
**ಗುಡಿಗಳಲ್ಲಿ ಭಜನೆ**
**ಪ್ರಾರ್ಥನೆ ಬೇಡಿಕೆ | ಸಲ್ಲಿಸುವಂತಿಲ್ಲ**
**ಅಂದ ಮೇಲೆ ಯುದ್ಧವೆಲ್ಲಿ?**
**ಅಂತರಂಗದಲ್ಲಿ!**

**(ಯುದ್ಧ - ಭಾವಸಿಂಚನ - ಪುಟ ೩೦೩)**

ಎಲ್ಲ ಬಗೆಯ ಅಶಾಂತಿ, ಕಲಹಗಳ ಮೂಲವೂ ಮನಸ್ಸಿನಲ್ಲಿಯೇ ಇದೆ. ಅಂತರಂಗವೊಂದು ಶಾಂತವಾಗಿದ್ದಲ್ಲಿ ಬಹಿರಂಗದ ಕಲಹಗಳಿಗೆ ಅವಕಾಶವಾದರೂ ಎಲ್ಲಿದೆ. ಸೂರ್ಯ, ಭೂಮಿ, ನೀರು, ಗಾಳಿ ಹೀಗೆ ಪ್ರಕೃತಿಯ ಸಚರಾಚರ ವಸ್ತುಗಳೂ ಕೂಡ ಇದೇ ಸತ್ವವನ್ನು ಸಾರುತ್ತಿವೆ. ಅವುಗಳಲ್ಲಿಲ್ಲದ ವಿರಸ ಮನುಷ್ಯ ಜಗತ್ತಿನಲ್ಲಿ ಮಾತ್ರ ಸಂಚರಿಸುತ್ತಿರುವ, ತನ್ಮೂಲಕ ಅನುಸರಿಸುವ ವ್ಯವಧಾನ ನಮಗೆ ಇಲ್ಲವಾಗಿದೆ ಎನ್ನುವ ಖೇದ ಈ ಕವನದ ನಿರೂಪಕಿಯದು. ಅದಕ್ಕೆ ಆಕೆ ನೀಡುವ ಸಾಂತ್ವನ :

**ಇರುತ್ತೆ ಎಲ್ಲಾ**
**ಇಲ್ಲಿ ಇರುವಂತೆಯೆ**
**ಹೊತ್ತು ತಿರುಗುವಳು**
**ಇಳೆ ಎಲ್ಲ ಇದ್ದಂತೆಯೆ**
**.....................**
**ಏಳು ಮನವೆ ಏಳು**
**ನೆಲವ ಬಿಟ್ಟೇಳು.**

**(ಭಾವಗೀತೆಗಳು - ಭಾವ ಸಿಂಚನ - ಪುಟ ೩೦೬)**

ಹೀಗೆ ಪ್ರಾಕೃತಿಕ ವ್ಯಾಪಾರಗಳನ್ನು ತನ್ಮೂಲಕ ಬದುಕಿನ ವ್ಯಾಪಾರವನ್ನು ಅರ್ಥೈಸಿಕೊಳ್ಳುವ ಅಗತ್ಯತೆ ಕೂಡ ಮನಸ್ಸಿಗಿದೆ. ಹೀಗೆ ಎಲ್ಲಕ್ಕಿಂತ ಮೊದಲು ಮನಸ್ಸು ಸಿದ್ಧಗೊಳ್ಳಬೇಕಿದೆ. ಅದಕ್ಕೆ ಈ ಕವಯಿತ್ರಿಯ ಹಕ್ಕೊತ್ತಾಯ. 'ಹಿಂಸೆ'ಯ ಅವಧಿಯಾದರೂ ಎಲ್ಲಿಯವರೆಗೆ ಎಂಬುದಕ್ಕೆ :

**ಅವರು ಕಾಲುಗಳು ಸೋಲುವ ತನಕ ಬೆಂಬತ್ತಿ ಹೋದರು**
**ಕೈಗಳು ಸೋಲುವ ತನಕ ಗುಂಡು ಹಾರಿಸಿದರು**

ಕಣ್ಣುಗಳು ಸೋಲುವ ತನಕ ಕಿಡಿಗಳ ಕಾರಿದರು
ನಾಲಗೆ ಸೋಲುವ ತನಕ
ನಿಂದೆಯ ಸುರಿಮಳೆಗೈದರು.
ಹೃದಯ ತುಂಬಿ ಬಂದ ದಿನ
ಮಮ್ಮಲ ಮರುಗಿದರು
ಗೆದ್ದರು....

(ಗುಜರಾತ್‌ಗೆ ಕವಿಸ್ಪಂದನ - ದರುಶನ - ಸವಿತಾ ನಾಗಭೂಷಣ - ಪುಟ ೪೮)

ಈ ಕವಯಿತ್ರಿಯ ಆಶಯ ವಾಸ್ತವದ ನೆಲೆಯಲ್ಲಿ ಸಾಧ್ಯವಾಗಬಹುದೇ ಎಂಬ ಸಂಶಯ ಸುಳಿಯದೇ ಹೋಗುವುದಿಲ್ಲ. ಆದರೆ ಹಿಂಸೆಗೆ ಹಿಂಸೆಯೇ ಉತ್ತರವಾದರೆ ಅದರ ಅಂತ್ಯ ಮನುಕುಲದ ಅಂತ್ಯದೊಂದಿಗೆ ಪರಿಸಮಾಪ್ತಿಗೊಳ್ಳುತ್ತದೆ. ಆದರೆ ಮನುಕುಲದ ಇತಿಹಾಸದಲ್ಲಿ ಹಿಂಸೆಯಷ್ಟೇ ಶಾಂತಿಗೂ ಸ್ಥಾನವಿದೆ. ಬುದ್ಧ, ಬಸವ, ಗಾಂಧಿ, ಮಂಡೇಲಾ-ಲಿಂಕನ್.... ಎಲ್ಲರ ಆಶಯವೂ ಶಾಂತಿಯೇ ಅಲ್ಲವೇ. ಶಾಂತಿಗೆ ಸಿಕ್ಕ ವಿಜಯ ಸಮರಕ್ಕೆ ದೊರೆತದ್ದುಂಟೇ ಎಂಬ ವಿಶಾಲ ದೃಷ್ಟಿಕೋನದಿಂದ ನೋಡಿದಾಗ ಈ ಕವಯಿತ್ರಿಯ ಕಾಣ್ಕೆ ನಿಜವಾಗಬಹುದೆಂದು ಊಹಿಸಬಹುದು. ಕವಿಯಾಗಿ ತನ್ನ ಲೇಖನಿಯಿಂದ ಇನ್ನೇನು ಮಾಡಲು ಸಾಧ್ಯ! ಕನಸು ಕಾಣುವುದು, ಕಾಣ್ಕೆ ನೀಡುವುದು. ತನ್ನ ಅಸಹಾಯಕತೆಯನ್ನು ಈ ಕವಯಿತ್ರಿ ನಿರೂಪಿಸುವುದು ಹೀಗೆ :

ಅವರು ತ್ರಿಶೂಲಗಳನ್ನು ಹಿಡಿದಿದ್ದಾರೆ
ಇವರು ತಲವಾರಗಳನ್ನು ಹಿಡಿದಿದ್ದಾರೆ
..............................
'ಅಲ್ಲಾ' ಎಂದರೆ ನೇರ ಸ್ವರ್ಗಕ್ಕೆ ಅಟ್ಟುತ್ತಾರೆ
'ರಾಮ' ಎಂದರೆ ಇಲ್ಲೇ ನರಕದಲ್ಲಿ ಉಳಿಸುತ್ತಾರೆ!

(ಅದೇ ಕವನ – ಪುಟ ೪೯)

ಇಂತಹ ಅಪಾಯ ಎದುರಿಗಿದ್ದರೂ ನಿರೂಪಕಿ ನಿರಾಶಾವಾದಿಯಲ್ಲ. ಕನಸು ಕಾಣುವುದನ್ನೇನೂ ನಿಲ್ಲಿಸುವುದಿಲ್ಲ.

ದರ್ಗಾದಲ್ಲಿ ಅತ್ತರು ಘಮಘಮಿಸುತ್ತಿದೆ
ದೇಗುಲದಲ್ಲಿ ಗಂಧ ಪರಿಮಳಿಸುತ್ತಿದೆ
.........................
ದೇವರೇ............
ಹಗೆತನದ ಹುಟ್ಟಡಗಲಿ
ಗೆಳೆತನವು ನಿತ್ಯ ಒದಗಿ ಬರಲಿ

(ಅದೇ ಕವನ - ಪುಟ ೪೯)

ಇದು ಕವಯಿತ್ರಿಯ ಆಶಯ ಮಾತ್ರವಾಗದೆ ಪ್ರತಿ ಮನಸ್ಸಿನ ಆಶಯವೂ ಆದಾಗ ಕವಯಿತ್ರಿಯ ಕನಸು ಸಾಕಾರಗೊಳ್ಳಬಹುದು. ಕೋಮುದಳ್ಳುರಿಯಂತಹ ಜ್ವಾಲೆಯನ್ನಡಗಿಸಲು

ಯಾವುದೇ ಕಾಯಿದೆ ಕಟ್ಟಳೆಗಳಿಂದಲೂ ಸಾಧ್ಯವಿಲ್ಲ. ಸಹನೆ, ಸಹಬಾಳ್ವೆಗಳು ಮಾತ್ರ ಇದನ್ನು ನಿವಾರಿಸಲು ಶಕ್ತವಾದವು ಎಂಬ ಮೌಲ್ಯವನ್ನು ಈ ಕವಯಿತ್ರಿ ಎತ್ತಿ ಹಿಡಿಯುತ್ತಿದ್ದಾರೆ. ಸಾವಿರಾರು ವರ್ಷಗಳಿಂದ ಹೊಂದಾಣಿಕೆಯೊಂದಿಗೆ ಬದುಕುತ್ತಿದ್ದ ಭಾರತೀಯ ಪರಂಪರೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿ ಬಿತ್ತಿದ ಒಡೆದು ಆಳುವ ವಿಷಬೀಜ ಭಾರತದ ಅಖಂಡತೆಯನ್ನು ಛಿದ್ರಗೊಳಿಸಿದ್ದು; ತನ್ಮೂಲಕ ಈ ದೇಶ ಕೋಮುದಳ್ಳುರಿಯಲ್ಲಿ ಪರಿತಪಿಸಿದ್ದು; ಗಾಂಧಿಯನ್ನು ಬಲಿ ತೆಗೆದುಕೊಂಡದ್ದು ಈ ಎಲ್ಲ ಚಾರಿತ್ರಿಕ ಕಹಿಸತ್ಯಗಳೊಂದಿಗೆ ಧಾರ್ಮಿಕ ಮೂಲಭೂತವಾದಿಗಳು ಸ್ವಾರ್ಥರಾಜಕಾರಣಿಗಳು ಒಂದಲ್ಲ ಒಂದು ಬಗೆಯಲ್ಲಿ ಅದನ್ನು ಜೀವಂತವಾಗಿರಿಸಿ ತಮ್ಮ ಸ್ವಾರ್ಥ ಸಾಧನೆ ಮಾಡಿಕೊಳ್ಳುತ್ತಿದ್ದಾರೆ. ಆದರೆ ಜನಸಾಮಾನ್ಯರಿಗೆ ಇದ್ಯಾವುದು ಅವಶ್ಯಕವಲ್ಲ. ಹಾಗೆಂದು ನಿರ್ಲಿಪ್ತವಾಗಿ ಇರಲು ಪಟ್ಟಭದ್ರ ಹಿತಾಸಕ್ತಿಗಳು ಬಿಡುವುದಿಲ್ಲ. ಕವಯಿತ್ರಿ ಮನದ ಆಶಯ ಮಾತ್ರ -

**ಹಿಂದೂ ಹುಡುಗ ಮುಸ್ಲಿಂ ಹುಡುಗಿಯನ್ನು**
**ಮದುವೆಯಾದರೆ ಏನಾಗುತ್ತೆ?**
**ಏನೂ ಆಗೊಲ್ಲ**
**ಮುದ್ದಾದ ಎರಡು ಮಕ್ಕಳಾಗುತ್ತೆ!**

.................................................

**ಹಿಂದೂಸ್ತಾನ - ಪಾಕಿಸ್ತಾನ ಒಂದಾದರೆ ಏನಾಗುತ್ತೆ?**
**ಏನೂ ಆಗೊಲ್ಲ**
**ಒಂದು ಹಳೆಯ ರೋಗ ವಾಸಿಯಾಗತ್ತೆ?**

**(ಏನಾಗುತ್ತೆ - ದರುಶನ - ಪುಟ ೧೭)**

ಈ ರೋಗ ವಾಸಿಯಾಗುವುದು ಅನೇಕ ರೋಗಗ್ರಸ್ತ ಮನಸ್ಸುಗಳಿಗೆ ಬೇಡವಾದ ಸಂಗತಿ.

ಇದರ ಹಿಂದೆ ಕೇವಲ ಸ್ಥಳೀಯ ಶಕ್ತಿಗಳು ಮಾತ್ರವಿಲ್ಲ. ಜಾಗತಿಕವಾದ ಆರ್ಥಿಕ, ರಾಜಕೀಯ ಹುನ್ನಾರಗಳೂ ಕೂಡ ಇವೆ. ಜಾಗತೀಕರಣದ ಸ್ಪರ್ಧೆಯಲ್ಲಿ ಮುಂದುವರಿಯುತ್ತಿರುವ ದೇಶದ ಮೇಲೆ ನಿಯಂತ್ರಣ ಸಾಧಿಸಲು, ಅದರ ಮುನ್ನಡೆಗೆ ಅಡ್ಡ ಹಾಕಿ ಬೇರೆ ಬೇರೆ ಅಂತರ್ದೇಶೀಯ ಹಿತಾಸಕ್ತಿಗಳು ಪ್ರಯತ್ನಿಸುತ್ತಿರುತ್ತವೆ. ಹಾಗಾದರೆ ಇವುಗಳಿಗೆಲ್ಲ ನೀಡಬಹುದಾದ ಉತ್ತರವೊಂದೆ. ಉದಾಸೀನ ಮತ್ತು ಸಹಬಾಳ್ವೆ ಇದರ ಸಾಧ್ಯಾಸಾಧ್ಯತೆಗಳೇನೇ ಇದ್ದರೂ ಇಂತಹ ಮೌಲ್ಯವೊಂದರ ಸ್ಥಾಪನೆಗೆ ಆದರ್ಶವಾದದ ಮೊರೆ ಹೋಗಲೇಬೇಕಾಗಿದೆ. ಈ ಸತ್ಯವನ್ನು ಸವಿತಾ ನಾಗಭೂಷಣ ನಿರೂಪಿಸುವುದು ಹೀಗೆ:

**ನನಗೆ ಇಬ್ಬರು ಮಕ್ಕಳು । ಒಬ್ಬ ಈಶ್ವರ ಒಬ್ಬ ಅಲ್ಲಾ**
**ಎಲ್ಲಿರುವೆ ಕಂದಾ? । ಇಲ್ಲಮ್ಮಾ ಕಾಬಾದಲ್ಲಿ ಕಲ್ಲಾಗಿ...**
**ಕಲ್ಲಾಗಿ?!**

**ಕಲ್ಲಾಗಿಯೇ ಇರದಿರು ಕಂದಾ**
**ಸದಾ ಓಗೊಡು ಕರುಳ ಕರೆಗೆ;**
**................................**
**ಎಲ್ಲಿರುವೆಯೋ ಕಂದಾ?**
**ಇಲ್ಲಿ ಕೈಲಾಸದಲಿ ಮಂಜಾಗಿ......**
**ಮಂಜಾಗಿ?!**
**ಕರಗುತ್ತಲೇ ಇರದಿರು ಕಂದಾ**
**ಸದಾ ಓಗೊಡದಿರು ಕೃತ್ರಿಮ ಮೊರೆಗೆ**
**...........................**
**ನನಗೆ ಇಬ್ಬರೂ ಮಕ್ಕಳು**
**ಈಶ್ವರ ಅಲ್ಲಾ ಮೇರಾ ಲಾಲ್**
**(ಈಶ್ವರ ಅಲ್ಲಾ ಮೇರೆ ಲಾಲ್ - ದರುಶನ - ಪುಟ ೧೯)**

ಕೋಮುವಾದಿಗಳಿಗಂತೂ ಏನೂ ಹೇಳದ ಅಸಹಾಯಕತೆ. ಉಳಿದಿರುವುದು ಅವರ ದೈವಗಳನ್ನೇ ಮಾತನಾಡಿಸುವುದು ಅಥವಾ ಉದ್ದೇಶಿಸಿ ಮಾತನಾಡುವುದು. ಈ ಪರೋಕ್ಷ ತಂತ್ರದ ಮೂಲಕ ಕವಯಿತ್ರಿ ಹೇಳ ಹೊರಟಿರುವ ಕಿವಿ ಮಾತು ವಾಚ್ಯವಾಗಿರದೆ ಧ್ವನಿಪೂರ್ಣವಾಗಿದೆ. ಕಲ್ಲು ಕರಗುವ, ಮಂಜು ಘನಿಸುವ ಅವಶ್ಯಕತೆ ಇದೆ. ಹೀಗೆ ಪರಸ್ಪರ ಒಳ್ಳೆಯತನಗಳು ವಿನಿಮಯವಾಗಬೇಕು. ಋಣಾತ್ಮಕ ಅಂಶಗಳು ದೂರವಾಗಬೇಕು. ಅವಾಸ್ತವವೆನ್ನಿಸಿದರೂ ಕವಿಯಿಂದ ಇಷ್ಟಾದರೂ ಸಾಧ್ಯವಿದೆ ಎನ್ನುವುದೇ ಸಮಾಧಾನಪಡಬೇಕಾದ ಸಂಗತಿ. ಇದನ್ನು ಇನ್ನಷ್ಟು ಸರಳವಾಗಿ ವಿಭಾ ಹೇಳುತ್ತಾರೆ:

**ಈಗ ನಮಗೆ ಗಡಿಗಳ ಮಿತಿಯಿಲ್ಲ**
**ಭಾಷೆ ಧರ್ಮಗಳ ತೊಡರಿಲ್ಲ**
**ಲಿಂಗಭಾವಗಳ ಭೇದವಿಲ್ಲ**
**ಇಡೀ ಜಗವ ಹೊತ್ತು ನಿಂತಿದ್ದೇವೆ**
**ಮತ್ತು ಮನಗಂಡಿದ್ದೇವೆ**
**(ಬೊಗಸೆಯಲ್ಲಿ ಭೂಮಿ - ಜೀವ ಮಿಡಿತದ ಸದ್ದು - ಪುಟ ೨೫)**

ಇದೂ ಕೂಡ ಆದರ್ಶಸ್ಥಿತಿಯ ಪರಿಕಲ್ಪನೆ ಮಾತ್ರವೆನ್ನಿಸುತ್ತದೆ. ವಾಸ್ತವದಲ್ಲಿ ಇದೆಲ್ಲ ಸಾಧ್ಯವಾಗುವ ಸಂಗತಿ ಅನುಮಾನವೆನ್ನಿಸಿದರೂ ಮನುಷ್ಯರು ಭೌತಿಕ ಪ್ರಪಂಚದಲ್ಲಿ ಬದುಕುತ್ತಿದ್ದರೂ ಅವರನ್ನು ಆಳುತ್ತಿರುವುದು, ಮುನ್ನಡೆಸುತ್ತಿರುವುದು ಭಾವನಾಪ್ರಪಂಚವೇ. ಈ ಹಿನ್ನೆಲೆಯಲ್ಲಿ ಇಂತಹ ಆದರ್ಶಗಳನ್ನು ಒಪ್ಪಿಕೊಳ್ಳಬೇಕಾಗಿದೆ.

ಇನ್ನು ಪರಂಪರೆಯನ್ನು, ಅದರ ಮುಂದುವರಿಕೆಗೆ ಕಾರಣವಾದ ಮಾಧ್ಯಮವನ್ನು ಎಷ್ಟು ತಿರಸ್ಕರಿಸಿದರೂ ಕೂಡ ಮತ್ತೆ ಮತ್ತೆ ಅದರ ಸೆಳೆತದಿಂದ ತಪ್ಪಿಸಿಕೊಳ್ಳಲು ಆಗದೇ ಶರಣಾಗುವ ಅನಿವಾರ್ಯತೆ ಕೂಡ ಮಹಿಳಾ ಕವಿಗಳ ಗಮನ ಸೆಳೆದಿದೆ. ಇದಕ್ಕೆ ಸರ್ವಮಂಗಳರ ಪ್ರತಿಕ್ರಿಯೆ:

**ಅಜ್ಜಿ ಸತ್ತಳು**
**ಸತ್ತವಳೊಂದಿಗೆ ಬದುಕುವುದು ಹೇಗೆ?**
**ಮನೆಯಲ್ಲಿದ್ದ ಹಳೆ ಪಳೆ ಕೊಳೆತದ್ದನ್ನೆಲ್ಲ**
**ಹರಿದ ಚಾಪೆಯಲ್ಲಿ ಸುತ್ತಿ ಹೆಣ ಹೊತ್ತು**
**ನಡೆದೆ.**

..........................................

**ಹತ್ತಿರ ಬಂದು ಗಹಗಹಿಸಿದಳು**
**'ನಾನು ಸತ್ತೇನೇ' ಬೆದರಿ ಎದ್ದೆ.**

..............................................

**'ದಮ್ಮಯ್ಯ ಇನ್ನು ಕಾಡಬೇಡವೇ' ಎಂದು**
**ಅಜ್ಜಿ ಫೋಟೋ ನಡುಮನೆಯಲ್ಲಿ ನೇತು**
**ಹಾಕಿದೆ.**

**(ಸೋಲು - ಅಮ್ಮನಗುಡ್ಡ - ಪುಟ ೧೦)**

ಇಲ್ಲಿ ಅಜ್ಜಿ ಬಾಹ್ಯ ಒತ್ತಡವನ್ನೇನೂ ತರುತ್ತಿಲ್ಲ. ನಿರೂಪಕಿಯೇ ಸ್ವತಃ ಪರಂಪರೆಯ ಪ್ರಭಾವದಿಂದ ಹೊರಬರಲಾರದಷ್ಟು ತನ್ನನ್ನು ತೊಡಗಿಸಿಕೊಡಿದ್ದಾಳೆ. 'ಮಳೆ ನಿಂತರೂ ಮರದ ಹನಿ ನಿಲ್ಲಲಿಲ್ಲ" ಎಂಬ ಗಾದೆಯಂತೆ ತೊರೆಯಬೇಕೆಂದುಕೊಂಡದ್ದನ್ನು ಅಂದುಕೊಂಡಷ್ಟು ಸುಲಭವಾಗಿ ತೊರೆಯಲಾಗುವುದಿಲ್ಲ ಎಂಬ ಸತ್ಯ ಇಲ್ಲಿ ವೇದ್ಯವಾಗುತ್ತಿದೆ. ಜೀವಿ ಸಹಜವಾದ ಹಸಿವು-ಮೈಥುನಗಳ ಸೆಳೆತ ಮೀರುವುದು ಕೂಡಾ ವಾಸ್ತವಕ್ಕೆ ದೂರವಾದುದು ಎಂಬುದನ್ನು ಅಮೃತಮತಿಯ ಮೂಲಕ ಹೇಳಿಸುತ್ತಿದ್ದಾರೆ ಎಚ್.ಎಲ್. ಪುಷ್ಪ.

**ಮೈಯ ವಾಸನೆಗೆ ಜನ್ಮಾಂತರಗಳಿಲ್ಲ**
**ಹಸಿವಿನೆದುರು ಏನಿಲ್ಲ, ಏನೆಲ್ಲ ಭೀತಿ**
**ಕತ್ತಿಯು ಕೂಡ ಅಳುಕುತ್ತದೆ**
**ಕಂಪಿಸುತ್ತದೆ ಧರ್ಮದ ಸೂಕ್ಷ್ಮ ಜಂಜಾಟದಲ್ಲಿ**

**(ಅಮೃತಮತಿಯ ಸ್ವಗತ - ಪುಟ ೩)**

ಇಲ್ಲಿ ವಾಸ್ತವವನ್ನು ತೆರೆದಿಡುತ್ತಿರುವುದು 'ಅಮೃತಮತಿ'ಯೆಂಬ ಪೌರಾಣಿಕವಾಗಿ ತುಚ್ಛೀಕರಣಕ್ಕೊಳಗಾದ ಪಾತ್ರದಿಂದ. ಹೀಗೆ ಸಮಾಜದಿಂದ ತಿರಸ್ಕೃತವಾಗುವ ಮೌಲ್ಯಗಳೂ ಕೂಡ ಅಂತರ್ಗತವಾದ ಇನ್ನೇನೋ ಕಾರಣಗಳನ್ನು ಹೊಂದಿರುತ್ತವೆ ಎಂಬ ಸತ್ಯವನ್ನು ಅರಗಿಸಿಕೊಳ್ಳಲೇಬೇಕಾದ ಅಗತ್ಯವಿದೆ.

ಇದೇ 'ಅಮೃತಮತಿ'ಯ ಮೂಲಕ ಜ.ನಾ. ತೇಜಶ್ರೀ ಮಾತನಾಡುವುದು ಹೀಗೆ:

**ತೇಲಿ ಬರುವ ಸಾವಿನ ಹಾಡಿಗೆ**
**ಎದುರಾಗಿ ನಾನು ಬದುಕಿದೆ**

**ಅಮೃತಮತಿಯೇ ಆಗಿ ಒಂದು ಕ್ಷಣ**
**ಇನ್ನು ಭಯವಿಲ್ಲ ಇದು ಇನ್ನು**
**ತೆರೆದ ತೆಕ್ಕೆಯ ಬದುಕು**

**(ಅಮೃತಮತಿ - ಉಸ್ರುಬಂಡೆ)**

ಯಾವ ಸಾಂಸಾರಿಕ ಪಾವಿತ್ರ್ಯತೆಯನ್ನು ಪರಂಪರೆ ಬೋಧಿಸುತ್ತಿದೆಯೋ ಅದನ್ನು ಮುರಿಯುವ ಕಾರ್ಯವನ್ನು ಹೆಣ್ಣು-ಗಂಡುಗಳಿಬ್ಬರೂ ಮಾಡುತ್ತಾ ಬಂದಿದ್ದಾರೆ. ಹೀಗೆ ತಿರಸ್ಕಾರಕ್ಕೊಳಗಾದ ಆದರ್ಶವನ್ನು ಎತ್ತಿ ಹಿಡಿಯುವ ಅಗತ್ಯವಾದರೂ ಮಹಿಳಾಕಾವ್ಯಕ್ಕೇನಿದೆ ಎಂಬ ಪ್ರಶ್ನೆ ಸಹಜವಾಗಿಯೇ ಉಂಟಾಗುತ್ತದೆ. ಆದರೆ ಇದು ಪರಂಪರೆಯ ಆದರ್ಶಗಳಿಗೆ ಅವಮಾನ ಮಾಡುವ ಇರಾದೆಯನ್ನೇನೂ ಹೊಂದಿರಲಿಕ್ಕಿಲ್ಲ. ಬದಲಿಗೆ ಆದರ್ಶದ ಮರೆಯಲ್ಲಿ ಹಿಂದೆ ಸರಿಸಿದ ಮಾನಸಿಕ, ಜೈವಿಕ ಕಾರಣಗಳನ್ನು ಮನವರಿಕೆ ಮಾಡಬೇಕಿದೆ. ಮತ್ತೆ ಮತ್ತೆ ವಾಸ್ತವದತ್ತ ಮುಖ ಮಾಡಲು ಕರೆ ನೀಡಬೇಕಾಗಿದೆ. ಇದಕ್ಕೆ ಅವರು ಆಯ್ದುಕೊಂಡ ಆಯ್ಕೆ ಪೌರಾಣಿಕ ಪಾತ್ರಗಳ ಮೂಲಕ ಮಾತನಾಡುವುದು. ಇದರಿಂದ ನಿದರ್ಶನ ಸಮೇತ ಮನವರಿಕೆ ಮಾಡಿದಂತಾಗುವುದು ಎಂಬ ಕಾಳಜಿಯೇ ಇರಬಹುದು. ನಮ್ಮ ಪೌರಾಣಿಕ ಕಥಾನಕಗಳು ಕೆಲವು ಪಾತ್ರಗಳನ್ನು ಅತಿಯಾಗಿ ರಂಜಿಸಿ, ಕೆಲವು ಪಾತ್ರಗಳನ್ನು ಅತಿಯಾಗಿ ಪೂಜಿಸುತ್ತವೆ. ಅಂತಹ ಎಲ್ಲ ಪಾತ್ರಗಳಿಂದಲೂ ವಾಸ್ತವವನ್ನು ಹೊರಡಿಸುವ ಪ್ರಯತ್ನ ಕೂಡ ಮಹಿಳಾ ಕಾವ್ಯದಲ್ಲಿ ನಡೆದಿದೆ. ಅದಕ್ಕೆ ಶೂರ್ಪನಖಿಗೆ ಮೀನಾ ಸದಾಶಿವ ಅವರ ಕಿವಿಮಾತು :

**ನೋಡಿ ಬಲೆ ಬೀಸು | ಆದಷ್ಟು ಗುಟ್ಟಿನಲಿ**
**ಬುದ್ಧಿ ಕಳೆದುಕೊಂಡೆಯೋ ಸಿಟ್ಟಿನಲ್ಲಿ**
**ನಿನಗೇ ಮಾನಹಾನಿ**

..............................

**ಹೆಣ್ಣಿಗೆ ಮರ್ಯಾದೆಯೇ ಭೂಷಣ**
**ಅಂತ ಮಾಡು ಭಾಷಣ**

**(ಸಖಿ - ಶೂರ್ಪನಖಿಗೆ - ಕೋಗಿಲೆಗೆ ಕಲಿಸಲಾರೆ)**

ಮುಕ್ತವಾದ ನಿವೇದನೆ ಅಪಾಯಕಾರಿ ಎನ್ನುವುದಾದರೆ, ಉಪಾಯದಿಂದ ಅದನ್ನು ಸಾಧಿಸಿಕೊಳ್ಳುವ ವ್ಯವಹಾರ ಚತುರತೆಯಾದರೂ ಇರಬೇಕು. ನೇರ ನಡೆಯನ್ನು ಗೌರವಿಸದವರು ನಯವಂಚನೆಯನ್ನು ಒಪ್ಪಿಕೊಳ್ಳುತ್ತಾರೆ ಎಂಬ ವ್ಯಂಗ್ಯ ಕೂಡ ಇಲ್ಲಿ ಅಡಕವಾಗಿದೆ. ಇನ್ನು ಸೀತೆ, ಶಕುಂತಲೆಯರಿಗೂ ಇಂತಹುದೇ ಕಿವಿಮಾತು ಹೇಳುವ ತಂತ್ರವನ್ನು ಬಳಸಲಾಗಿದೆ. ಚೇತನಾ ತೀರ್ಥಹಳ್ಳಿಯವರು ಎಚ್ಚರಿಸುವುದು ಹೀಗೆ :

**ವಂಚಿಸಿಯಾದರೂ ಹೊಂದುವಷ್ಟು ಅಪರೂಪದವಳು ನೀನು,**
**ಹೆಮ್ಮೆಯಿರಲಿ, | ಆದರೂ... ನೆನಪಿರಲಿ;**
**ಶಾಪವಿದೆ ಶಕುಂತಲೆಯರಿಗೆ,**

**ಪ್ರೇಮಿಸಬಾರದು ಹಾಗೆಲ್ಲ | ದಾರಿಹೋಕರನ್ನ.**

**ದಾಹ ಅಂದಾಗ**

**ಬರೀ ನೀರುಣಿಸಿ ಕಳಿಸಬೇಕು,**

**ಮೊಲೆಯನ್ನಲ್ಲ!**

**(ವಂಚಿತೆಯ ಹಾಡು - ಶಬರಿಯ ಅವಸರ - ಪುಟ ೧೫)**

ಹೀಗೆ ಮುಗ್ಧತೆಯಲ್ಲಿ ಕಳೆದುಹೋಗಿ ನಮ್ಮ ಬದುಕಿಗೆ ಯಾವ ತೊಂದರೆಯನ್ನೂ ತಂದುಕೊಳ್ಳಬಾರದೆಂಬ ಎಚ್ಚರದ ಮನಸ್ಥಿತಿ ಹೆಣ್ಣಿಗೆ ಅವಶ್ಯಕವೂ ಇದೆ. ಇದೇ ಕವಯಿತ್ರಿಯ ಇನ್ನೊಂದು ಕವನದಲ್ಲಿ ಆಧುನಿಕ ಚಿಂತನೆಯ ಹೆಣ್ಣೊಬ್ಬಳು ಮಾತನಾಡುವುದು ಹೀಗೆ...

**ಹುಲಿಯ ತಪ್ಪಲ್ಲ ಬೇಟೆಗೆ ಹೊಂಚಿದ್ದು,**

**ಹುಲ್ಲಾಗಿದ್ದು ನಿನ್ನ ತಪ್ಪು,**

**............................**

**ಅಂವ ಕಳ್ಳಬಾವಿಗಿಳಿದಿದ್ದು**

**ಯಾರ ತಪ್ಪು?**

**ಪತಿವ್ರತೆಯರ ಗಂಡಂದಿರು**

**ಹೀಗಿರುವುದು ಲೋಕರೂಢಿ;**

**(ಪತಿವ್ರತೆಯರ ಗಂಡಂದಿರು - ಶಬರಿಯ ಅವಸರ - ಪುಟ ೨೬)**

ಶೋಷಣೆ, ನೋವಿನ ಮೂಲವನ್ನು ಬೇರೆಯವರ ಮೇಲೆ ಹೊರಿಸುವುದರ ಬದಲು ಅದರಲ್ಲಿ ತನ್ನ ಪಾಲು ಏನು? ಎಂಬುದನ್ನು ವಿಶ್ಲೇಷಿಸಿಕೊಳ್ಳುವ ಸ್ವ-ಮೌಲ್ಯಮಾಪನ ಕೂಡ ಹೆಣ್ಣಿಗೆ ಅವಶ್ಯಕತೆಯಿದೆ. ಅವಳ ಮುಗ್ಧತೆಯನ್ನು ದುರುಪಯೋಗಪಡಿಸಿಕೊಳ್ಳುವ ಅವಕಾಶ ಸಿಕ್ಕಾಗ ಮಾತ್ರ ಒಂದಲ್ಲಾ ಒಂದು ಬಗೆಯ ಶೋಷಣೆ ನಡೆಯುತ್ತಲೇ ಇರುತ್ತದೆ. ಆದರೆ ವಾಸ್ತವವನ್ನು ಗ್ರಹಿಸುವ ಚಾಣಾಕ್ಷಮತಿಯಾದರೆ ಅದಕ್ಕೆ ಅವಕಾಶವೇ ಇರುವುದಿಲ್ಲವಲ್ಲ. ಇಲ್ಲಿ ತನ್ನನ್ನು ತಾನು ರಕ್ಷಿಸಿಕೊಳ್ಳುವ ಮನೋಸ್ಥೈರ್ಯ ಹೆಣ್ಣಿನಲ್ಲಿ ಇರಬೇಕೆಂಬುದೇ ಕವಿಮನದ ಇಂಗಿತ. ಏಟಿಗೆ ತಿರುಗೇಟು ಪಡೆಯುವ ಭಯವಿದ್ದರೆ ಯಾವ ಅಪಾಯವೂ ಬಳಿ ಸುಳಿಯುವುದಿಲ್ಲ ಎಂಬ ಅನುಭವ ಕೂಡ ಇಲ್ಲಿ ಪ್ರಕಟವಾಗಿದೆ. ಇದು ಮಹಿಳೆ ತನ್ನ ಅಂತಃಶಕ್ತಿಯನ್ನು ಹೆಚ್ಚಿಸಿಕೊಳ್ಳುವ ಪರಿಯೂ ಕೂಡ ಹೌದು. ಪಾರಂಪರಿಕ ಕಥಾನಕಗಳನ್ನು ಇನ್ನಷ್ಟು ವ್ಯಂಗ್ಯಗೊಳಿಸಿ ತನ್ಮೂಲಕ ವ್ಯಕ್ತಿಪ್ರಜ್ಞೆಯನ್ನು ಜಾಗೃತಿಗೊಳಿಸುವುದು ಪ್ರತಿಭಾರ ಕಾವ್ಯದಲ್ಲಿ ಕಾಣುತ್ತದೆ. ಇದಕ್ಕೆ ಅವರು ಬಳಸುವುದು ಆಧುನಿಕವಾದ ಪರಿಕರಗಳು.

**ಮಾಯಾಜಿಂಕೆಯೂ ಇದೆ ಮಾರೀಚನೂ ಇದ್ದಾನೆ**

**ಕಣ್ಣ ಮುಂದಿನ ಕಂಪ್ಯೂಟರ್ ಕೈಯಲ್ಲಿ ಮೌಸ್**

**ಸೀತೆಗಿನ್ನೇನು ಚಿಂತೆ?**

**..........................**

**ಹುಶಾರು, ಇಲ್ಲಿ ಹೋಗಬೇಡಾ, ತೆರೆಯಬೇಡಾ**
**ಇದು ಮೋಸದ ಮಾಂತ್ರಿಕ ಜಾಲ**
**ಹಾಗೆ ಮಾಡಬಾರದು ಮಾತಾಡಬಾರದು ಕೇಳಬಾರದು**
**ಮೀರಬಾರದು ಇದು ಯುದ್ಧ ಕಾರಣ.**
**ಕ್ಲಿಕ್ ಅನ್ನಿಸಿದಳು ಸೀತೆ । ಪಾಪವಿರುವುದು ನಿನಗೆ ನನಗಲ್ಲ**
**ಒಮ್ಮೆ ದಾಟಿದ ಮೇಲೆ ಗೆರೆ ತಡೆಯುವುದಿಲ್ಲ.**
**ಲಕ್ಷ್ಮಣನ ಸುಳಿವೇ ಇಲ್ಲ । ಇನ್ನು ರಾಮನ ಮಾತೇಕೆ?**
**(ಕಾರಣ - ಅವರು ಪುರಾವೆಗಳನ್ನು ಕೇಳುತ್ತಾರೆ - ಪುಟ ೨೯)**

ಇಲ್ಲಿ ವ್ಯಕ್ತಿಪ್ರಜ್ಞೆಯನ್ನು ಜಾಗೃತಿಗೊಳಿಸಿಕೊಳ್ಳಬೇಕಾದ ಅನಿವಾರ್ಯತೆ ಹಿಂದಿಗಿಂತ ಇಂದು ಹೆಚ್ಚಾಗಿದೆ. ಪ್ರತಿ ಜೀವಕ್ಕೂ ತನ್ನದೇ ಚಿಂತನೆ, ಬದುಕಿನ ಕ್ರಮ ಹೊಂದುವ ಅಧಿಕಾರವಿದೆ. ಈ ವೈಯಕ್ತಿಕತೆಯ ಮೇಲೆ ಬೇರೆಯವರ ಹಸ್ತಕ್ಷೇಪ ಸಲ್ಲದು. ಅದಕ್ಕೆ ಅವಕಾಶ ಕೂಡ ಇರಬಾರದು ಎಂಬುದೇ ಕವನ ಇಂಗಿತವಾಗಿದೆ. ಆಯ್ಕೆ ವೈಯಕ್ತಿಕವೇ ಹೊರತು ಬೇರೆಯವರ ಒತ್ತಾಯದಿಂದಲ್ಲ ಎಂಬ ಹೊಸ ಚಿಂತನೆಯನ್ನು ಕೂಡ ಕವನ ಬಿಂಬಿಸುತ್ತಿದೆ. ಕನ್ನಡ ಸಾಹಿತ್ಯದಲ್ಲಿ ಒಂದು ಬಗೆಯ ಭಾವುಕ ಸಂವೇದನೆಗೆ ಕಾರಣವಾಗಿರುವ ಭಾಗ್ಯದ ಬಳೆಗಾರನನ್ನೂ ಕೂಡ ಆಧುನಿಕ ಸನ್ನಿವೇಶದಲ್ಲಿಟ್ಟು ಬದಲಾದ ಮೌಲ್ಯಾವಸ್ಥೆಯ ಚಿತ್ರಣವನ್ನು ಇದೇ ಕವಿ ನೀಡುತ್ತಾರೆ.

**ಆಗಲೇ ಕಳಿಸಿದೆನಲ್ಲಾ ಹೋಗಿ ಬಾ ತವರಿಗೆ ಅಂತ**
**ಇನ್ನೂ ಬರಲಿಲ್ಲವೇ ಭಾಗ್ಯದ ಬಳೆಗಾರ ಅಮ್ಮಾ?**
**ಮತ್ತೆ ಅದೇ ಹಳೆಯ ಕಣಿ ಹೇಳಬೇಡ**
**ಬಾಲಕರಿಲ್ಲದ ಬಾಲೆ ಆಯ್ಕೆ ಹೊರತು ಅನಿವಾರ್ಯವಲ್ಲ**
..............................
**ಹುಷಾರು ಈಗೆಲ್ಲ ನಂಬಬಾರದು ನೋಡು ಇವರೆಲ್ಲ ಹೀಗೇ**
**ನನ್ನ ಕಣ್ಣಲ್ಲಿರದ ಹನಿಯ ಪ್ರಸ್ತಾಪಿಸಿ ನಿನ್ನ ಕಣ್ಣಲ್ಲಿ ಬರಿಸಿ**
**(ಬಳೆಗಳ ಸೇಲ್ಸ್‌ಮನ್ - ಅವರು ಪುರಾವೆಗಳನ್ನು ಕೇಳುತ್ತಾರೆ - ಪುಟ ೧೪)**

ಜಾನಪದ ಕಾವ್ಯದಲ್ಲಿರುವ ತಾಯಿ, ತವರು, ಬಸುರಿ, ಬಾಣಂತನ... ಇಂತಹ ಕೌಟುಂಬಿಕ ಸಂಬಂಧಗಳು ಬದಲಾದ ಕಾಲಘಟ್ಟದಲ್ಲಿ ಪಡೆದಿರುವ ರೂಪವನ್ನು ತೆಳುಹಾಸ್ಯದೊಂದಿಗೆ, ವಿಮರ್ಶಾನೋಟದಿಂದ ನೋಡುತ್ತಾರೆ. ತಾಯ್ತನ ಎನ್ನುವುದು ಆಯ್ಕೆಯೇ ಹೊರತು ಅನಿವಾರ್ಯವಲ್ಲ ಎಂಬ ಸತ್ಯವನ್ನು ಇನ್ನಾದರೂ ಒಪ್ಪಿಕೊಳ್ಳಬೇಕು. ಭಾವನೆಗಳನ್ನು ಭಿತ್ತಿ ಹೆಣ್ಣನ್ನು ಮತ್ತೆ ಮತ್ತೆ ಪುರುಷಪ್ರಧಾನ ವ್ಯವಸ್ಥೆಯ ವರ್ತುಲದಲ್ಲಿ ಸುತ್ತುವಂತೆ ಮಾಡುವ ಇಂತಹ ಹುಸಿ ಆದರ್ಶಗಳನ್ನು ಕೈಬಿಟ್ಟು ಹೊಸ ಚಿಂತನೆ ಬೆಳೆಸಿಕೊಳ್ಳಬೇಕೆಂಬುದು ಇಲ್ಲಿನ ಆಶಯವಾಗಿದೆ.

'ಕಾಯುವಿಕೆ' ಎಂಬ ಮೌಲ್ಯವನ್ನು ಅದರ ಶ್ಲೇಷೆಯೊಂದಿಗೆ ಈ ಕವಿ ವ್ಯಂಗ್ಯದೊಂದಿಗೆ ವಿವರಿಸುವುದು ಹೀಗೆ :

**ಕಾಯುವುದೆಂದರೆ ಹೀಗೇ ಒಲೆಯ ಮೇಲಿಟ್ಟ**
**ಬರಿ ಬಾಂಡಲೆ ಕೆಂಪಗೆ, ಸರ್ರನೆ ಎಣ್ಣೆ ಬಗ್ಗಿಸಿದರೆ**
**ಹೊಗೆಯಾಡಿ ಹಪ್ಪಳ ಸೀದು ಹೋಗುವಂತೆ.**
**ಉತ್ತರಗಳಿಗಾಗಿ ಕಾಯಬೇಕು.**
**ಉಣಿಸಲೂ ತಣಿಸಲೂ**
**ಮೊದಲು**
**ಕಾಯ**
**ಬೇಕು.**

**(ಕಾಯಬೇಕು - ರಸ್ತೆಯಂಚಿನ ಗಾಡಿ - ಪುಟ ೩೭)**

ಇಲ್ಲಿ 'ಕಾಯಬೇಕು' ಎನ್ನುವ ಕ್ರಿಯಾಪದವನ್ನು ಮೂರು ಬಗೆಯ ಅರ್ಥಸಾಧ್ಯತೆಗಳಲ್ಲಿ ಬಳಸಲಾಗಿದೆ. ಬದುಕಿನಲ್ಲಿ ಬರುವ ಎಲ್ಲ ಬಗೆಯ ಅವಕಾಶಗಳನ್ನೂ ಕಾಯುವ ಮೂಲಕ ಬಳಸಿಕೊಳ್ಳುವುದು. ಪ್ರತಿಕ್ರಿಯೆ ನೀಡುವ ಮೊದಲು ಕಾಯುವುದು, ಇಲ್ಲಿ ಕಾಯುವುದು ಎಂದರೆ 'ಬಿಸಿಯಾಗುವುದು. ಇನ್ನೊಂದು 'ಕಾಯ'(ದೇಹ) ಬೇಕು. ಹೀಗೆ ದೇಹ, ಮನಸ್ಸು, ಮೌಲ್ಯ ಮೂರರ ಮಹತ್ವವನ್ನೂ ಅವುಗಳಿಗಿರುವ ಪರಸ್ಪರ ಸಂಬಂಧವನ್ನೂ ಅರಿಯಬೇಕು. ಎಲ್ಲ ಕ್ರಿಯೆಗಳಿಗೂ ಮೊದಲು ಶರೀರ ಚೆನ್ನಾಗಿರಬೇಕು. ಶರೀರದ ಸ್ವಾಸ್ಥ್ಯ ಮನಸ್ಸಿನ ಸ್ವಾಸ್ಥ್ಯವನ್ನು ಅವಲಂಬಿಸಿದೆ. ತಾಳ್ಮೆ ವಹಿಸುವುದಕ್ಕೂ ಒಂದು ಮಿತಿ ಇದೆ. ಅತಿ ತಾಳ್ಮೆ ದೌರ್ಬಲ್ಯವಾಗಿಯೂ ಕಾಣಬಹುದು. ಅಲ್ಲದೆ ಎಲ್ಲ ಸಂಗತಿಗಳಿಗೂ ತಾಳ್ಮೆ ವಹಿಸಬೇಕಾದ ಅವಶ್ಯಕತೆ ಇಲ್ಲ. ಯಾವುದು ತನ್ನ ಅಸ್ತಿತ್ವಕ್ಕೆ ಕುಂದುಂಟುಮಾಡುತ್ತದೆಯೋ ಅದನ್ನೆಲ್ಲ ಸಹಿಸಿಕೊಳ್ಳುವ ಅಗತ್ಯವಿಲ್ಲ. ಅದಕ್ಕೆ ನೀಡುವ ಉತ್ತರ ದಿಟ್ಟತನದ ಪ್ರತಿಕ್ರಿಯೆಯೇ ಆಗಿರಬೇಕು. ಹೀಗೆ ಮೌಲ್ಯವೊಂದರ ಹಿಂದೆ ಏನೆಲ್ಲ ರೂಪಾಂತರಗಳ ಸಾಧ್ಯವಿದೆ ಎನ್ನುವುದನ್ನು ಕವಿತೆ ವಿವರಿಸುತ್ತಿದೆ.

ಮೌಲ್ಯಗಳ ರೂಪಾಂತರಕ್ಕೆ ಅನೇಕ ಸಮಕಾಲೀನ ಕಾರಣಗಳಿವೆ. ಅದರಲ್ಲಿ ಬಹುಮುಖ್ಯವಾದುದು ಜಾಗತೀಕರಣ. ಪ್ರತಿಯೊಂದನ್ನೂ ಹಣದಿಂದ ಅಳೆಯುವ, ಹಣಕ್ಕಾಗಿ ಮಾಡುವ, ಸೀಮಿತಕ್ಕೆ ಮನುಷ್ಯರನ್ನು ತಂದು ನಿಲ್ಲಿಸಿದೆ. ಭಾಷೆ, ಧರ್ಮ, ನ್ಯಾಯ ಎಲ್ಲದರ ಹಿಂದೆಯೂ ಹಣ ತನ್ನ ಪ್ರಭಾವ ಬೀರಿದೆ. ದೇವರನ್ನು ಕೂಡ ವ್ಯಾಪಾರೀಕರಣಕ್ಕೊಳಪಡಿಸಿಕೊಂಡ ಪ್ರಸಂಗವನ್ನು ತಾರಿಣಿ ಶುಭದಾಯಿನಿಯವರು ಹಿಡಿದಿಡುವುದು ಹೀಗೆ :

**ಅರ್ಧ ಜೋಡಿಸಿದ ಬಿಳಿ**
**ನಾಮ, ಕೊಲಾಜ್ ಮಾದರಿ**
**ಕುಂಕುಮ**

**ಮೇಲೊಂದಿಷ್ಟು ಕಾಸು । ಬೀದಿಯಲಿ ಮಲಗಿದ**
**ತಿಮ್ಮಪ್ಪನ ತಲೆಯ । ದಾಟಲಾಗದೆ ಒದ್ದಾಡಿವೆ**
**ಪುಟ್‌ಪಾತ್ ಪಾದಗಳು**
**ಅಡ್ಡಡ್ಡ ಗೀಟಿನ ಕಪ್ಪು ಬಿಳುಪಿನ**
**ಟ್ರಾಫಿಕ್ ಮರೀಚಿಕೆಯಲ್ಲಿ । ತಿಮ್ಮಪ್ಪ**
**ಕಾದು ಕುಳಿತಿದ್ದಾನೆ. । ನಾಲ್ಕು ಕಾಸಿನಾಸೆಯಲಿ**
**(ರಸ್ತೆಯಲ್ಲಿ ಮೈಚಾಚಿ ಮಲಗಿದ ದೇವರು - ತೋಡಿರಾಗ - ಪುಟ ೭)**

ವಸ್ತುಸ್ಥಿತಿಯನ್ನು ಈ ರೀತಿ ವಿವರಿಸುತ್ತಿರುವ ಈ ನಿರೂಪಕಿಗೆ ಇದರ ಹಿಂದಿನ ಸರಿ ತಪ್ಪುಗಳ ಯಾವುದೇ ತಕರಾರಿಲ್ಲ. ಇಲ್ಲಿ ಎರಡು ಬಗೆಯ ರೂಪಾಂತರಗಳನ್ನು ಗುರುತಿಸಿದ್ದು, ಮೊದಲನೆಯದು ಗುಡಿಯೊಳಗೆ ಮಾತ್ರವಿದ್ದು, ಗರ್ಭಗುಡಿಯಿಂದ ಹೊರಗೆ ನಿಂತವರಿಗೂ ದರ್ಶನ ನೀಡಲು ಅಲಭ್ಯನಾಗಿದ್ದ ದೇವರು ಇಂದು ಬೀದಿಯ ಮೇಲೆ ಪಟದ ರೂಪದಲ್ಲಿ ಮಲಗಿದ್ದರೂ ದೇವರ ಹೆಸರಿನಿಂದ ಏನೆಲ್ಲಾ ಲಾಭ ಪಡೆಯುವ ಮಂದಿ ಇದರ ಬಗ್ಗೆ ತಲೆ ಕೆಡಿಸಿಕೊಳ್ಳದೇ ಇರುವುದು. ಇನ್ನೊಂದು ಇಂತಹ ವ್ಯಾಪಾರವನ್ನು ನೆಚ್ಚಿಕೊಂಡು ಜೀವನ ನಡೆಸುತ್ತಿರುವವನ ಅನಿವಾರ್ಯತೆ. ಯಾವ ದೇವರು ಸಮಾಜದ ಕೆಲವು ವರ್ಗದ ಜನರ ವಶದಲ್ಲಿದ್ದು ಇನ್ನು ಕೆಲವು ವರ್ಗದ ಜನರಿಗೆ ಅಲಭ್ಯವಾಗಿದ್ದನೋ ಅಂತಹ ದೇವರ 'ಸ್ಥಾನಮಾನ' ಕುಗ್ಗಿರುವುದು. ದೇವರಿಂದ ದೂರ ನಿಂತಿದ್ದವನು ಇಂದು ಅವನನ್ನೇ ಮಾರಾಟಕ್ಕಿಟ್ಟಿರುವ ವಿಪರ್ಯಾಸ. ಹೀಗೆ ತಣ್ಣನೆಯ ವಿಡಂಬನೆ ಮೌಲ್ಯವೊಂದರ ರೂಪಾಂತರವನ್ನು ಹೀಗೆ ಕಟ್ಟಿಕೊಡುತ್ತಿದೆ. ಪರಂಪರೆಯ ಬಂಧಗಳು ಸಡಿಲಗೊಳ್ಳುತ್ತಿರುವುದನ್ನು, ಅದರಿಂದ ನಿಜವಾದ ಪರ್ಯಾಯವನ್ನು ಎಚ್.ಎಲ್. ಪುಷ್ಪ ಅವರು ಬಯಸುತ್ತಿರುವುದು ಹೀಗೆ:

**ಎಷ್ಟೋ ವರ್ಷದ ಈ ಸೀರೆ । ಜೂಲುಜೂಲಾಗುತ್ತಿದೆ**
**ನಂಬಿಕೆ, ಅಪನಂಬಿಕೆಗಳ । ತಾಕಲಾಟದಲ್ಲಿ ಮತ್ತಷ್ಟು**
**ಪಿಂಜಿ, ಪಿಂಜಿ ಹೋಗುತ್ತಿದೆ.**

........................

**ಓ ದೇವರೇ ನೀನಿರುವುದಾದರೆ**
**ತರ್ಕ ಮೀರಿದ ಆ ಜಗತ್ತಿನೆಡೆಗೆ**
**ನನ್ನನ್ನು ತರಗೆಲೆಯಾಗಿ ಹಾರಿಸು**
**ಸುಳಿವ ಆತ್ಮಕ್ಕೆ ಹಸಿದ ಆತ್ಮವೊಂದನ್ನು**
**ಕೂಡಿಸು, ಮತ್ತೆ ಬೆಳಕು ಮೂಡಿಸು**
**(ಕುಣಿವ ನವಿಲುಗಳು - ಲೋಹದ ಕಣ್ಣು - ಪುಟ ೫೫)**

ಯಾವುದನ್ನೂ, ಯಾರನ್ನೂ ಹೊಣೆ ಮಾಡದ ಮನೋವೈಶಾಲ್ಯದಲ್ಲಿ ಮೂಡಿಬಂದಿರುವ ಈ ಆರ್ತನಾದ ತರ್ಕಗಳನ್ನು ಮೀರುವ ತವಕವಾಗಿದೆ. ತರ್ಕದ ಅಂತ್ಯ ಕೂಡ ಜಿಜ್ಞಾಸೆಯೇ

ಆಗುವುದರಿಂದ ತೀರ್ಮಾನವನ್ನೆಲ್ಲ ಕಾಣದ ಶಕ್ತಿಯೆಡೆಗೆ ಬಿಡುತ್ತಿರುವ ಅಧ್ಯಾತ್ಮದೆಡೆಗೆ ತುಡಿಯುತ್ತಿರುವ ಜೀವವೊಂದರ ಪ್ರಾರ್ಥನೆಯಂತೆ ಭಾಸವಾಗುತ್ತದೆ. ಯಾವೆಲ್ಲ ಪೌರಾಣಿಕ ಪಾತ್ರಗಳ ಸಂಕುಚಿತ ಗುಣಗಳನ್ನು ಮಹಿಳಾಕಾವ್ಯ ಗುರುತಿಸಿದೆಯೋ ಅದೇ ಪಾತ್ರಗಳಲ್ಲಿರುವ ಉತ್ತಮ ಗುಣಗಳನ್ನು ಗುರುತಿಸುವ ತನ್ಮೂಲಕ ಮನಸ್ಸಿಗೆ ಸಮಾಧಾನ ತಂದುಕೊಳ್ಳುವ ಸಂಗತಿ ಕೂಡ ಇದೇ ಕಾವ್ಯದಲ್ಲಿ ಕಂಡುಬರುತ್ತದೆ. ಇದಕ್ಕೆ ಸವಿತಾ ನಾಗಭೂಷಣ ಅವರ ಕವನವನ್ನು ಇಲ್ಲಿ ನಿದರ್ಶನವಾಗಿ ಬಳಸಬಹುದು.

> **ಕಚ್ಚಿ ರುಚಿ ನೋಡಿದ**
> **ಹಣ್ಣಿಗೆ ತುಟಿ ಹಚ್ಚಿದನಲ್ಲ ಆ ರಾಮ**
> **ನನಗೆ ಪ್ರಿಯನಾಗಲಿ**
> **ಒಂದಗುಳು ಅನ್ನವನೆ**
> **ಉಕ್ಕಿಸಿ ಆ ಕೃಷ್ಣ ಹಸಿವಿನ ಸೊಕ್ಕಡಗಿಸಿದನಲ್ಲ**
> **ನನಗೆ ಪ್ರಿಯನಾಗಲಿ**
> **ಸತ್ತು ಒರಗಿದ ಸತಿಯ**
> **ಹೊತ್ತು ತಿರುಗಿದನಲ್ಲ**
> **ಅತ್ತು ಸೊರಗಿದನಲ್ಲ ಆ ಶಿವನು**
> **ನನಗೆ ಪ್ರಿಯನಾಗಲಿ**
>
> **('ರಾಮ - ಕೃಷ್ಣ - ಶಿವ' - ದರುಶನ - ಪುಟ ೬೬)**

ಪುರುಷೋತ್ತಮ ರಾಮ ಸೀತೆಯನ್ನು ಕಾಡಿಗಟ್ಟಿ ಪತ್ನಿಯನ್ನು ಸಂಶಯಿಸಿದ ಕಾರಣಕ್ಕೂ, ಕೃಷ್ಣ ಕಂಡ ಕಂಡ ಹುಡುಗಿಯರ ಸೆರಗು ಹಿಡಿದು ಹೋಗುವುದಕ್ಕಾಗಿ ಲಂಪಟನಾಗಿರುವ ಕಾರಣಕ್ಕೂ, ಶಿವ ಇದ್ದ ಹೆಂಡತಿಯನ್ನು ಮರೆಮಾಚಿ ಇನ್ನೊಬ್ಬಳನ್ನು ಕದ್ದು ಮದುವೆಯಾದನೆಂಬ ಕಾರಣಕ್ಕೂ, ಪುರುಷಪ್ರಧಾನ ವ್ಯವಸ್ಥೆಯ ಹುಸಿ ಆದರ್ಶಗಳ ಸಂಕೇತವಾಗಿ ತಿರಸ್ಕರಿಸಲ್ಪಟ್ಟಿದ್ದಾರೆ. 'ಪುರಾಣ'ಕ್ಕೆ ಯಾವುದೇ ಚಾರಿತ್ರಿಕ ಆಧಾರಗಳಿಲ್ಲ. ಆಯಾಯ ಕಾಲದ ಅನುಕೂಲಕ್ಕಾಗಿ ಆಯಾ ಕಾಲದ ಸಮಾಜ ತನಗೆ ಬೇಕಾದಂತೆ ಪುರಾಣ, ಮಹಾಕಾವ್ಯಗಳನ್ನು ಹುಟ್ಟುಹಾಕಿದೆ. ವರ್ತಮಾನದ ಸನ್ನಿವೇಶದಲ್ಲಿ ವಿಮರ್ಶಿಸಬಹುದೇ ವಿನಾ, ಪುರಾಣವನ್ನು ಬದಲಾಯಿಸಲು ಸಾಧ್ಯವಿಲ್ಲ. ಹೀಗೆ ನಿರಾಕರಣೆಗೊಳಪಡುವ ಪಾತ್ರಗಳಲ್ಲಿಯೂ ಇರುವ ಮಾದರಿ ಗುಣಗಳನ್ನು ಹೆಕ್ಕಿ ತೆಗೆಯುವ, ತನ್ಮೂಲಕ ಪೌರಾಣಿಕ ಪಾತ್ರಗಳನ್ನು ಉನ್ನತೀಕರಿಸುವ ಪ್ರಯತ್ನವಾಗಿ ನಾವಿದನ್ನು ಗುರುತಿಸಬಹುದು. ನವೋದಯ ಕಾಲಘಟ್ಟದಲ್ಲಿ ಕುವೆಂಪು ಕೂಡ ಪೌರಾಣಿಕ ಪಾತ್ರಗಳನ್ನು ಉದಾತ್ತೀಕರಿಸುವ ಪ್ರಯತ್ನ ಮಾಡಿದ್ದನ್ನು ಈ ಸಂದರ್ಭದಲ್ಲಿ ನಾವು ಉಲ್ಲೇಖಿಸಬೇಕಾಗಿದೆ. ಅಧ್ಯಯನದ ವ್ಯಾಪ್ತಿಯಲ್ಲಿ ಇದರ ಸರಿತಪ್ಪುಗಳ ವಿವೇಚನೆಗಿಂತಲೂ ಕವಯಿತ್ರಿಯ ಈ ಬಗೆಯ ತೀರ್ಮಾನಕ್ಕೆ ಕಾರಣವಾದ ಅಂಶಗಳನ್ನು ಊಹಿಸಬಹುದಾಗಿದೆ. ತನಗಾಗಿ ಹಗಲಿರುಳು ಕಾದು

ಕಾದು ಧ್ಯಾನಿಸುತ್ತಿದ್ದ ಶಬರಿ ಕಚ್ಚಿ. ಕಚ್ಚಿ ರುಚಿ ನೋಡಿ ಕೊಡುತ್ತಿದ್ದ ಹಣ್ಣನ್ನು ರಾಮ ತಿನ್ನಲೇಬೇಕೆಂದೇನೂ ಇರಲಿಲ್ಲ. ಆದರೆ ಹಾಗೆ ಕಚ್ಚಿ ನೀಡುತ್ತಿರುವುದರ ಹಿಂದಿನ ಆಕೆಯ ಪ್ರೀತಿ, ಕಾಳಜಿಗಳ ಮುಂದೆ ಅವನು ಮಗುವಾಗುತ್ತಾನೆ. ತಂದೆ ತಾಯಿಗಳನ್ನು ವೃದ್ಧಾಶ್ರಮ ಸೇರಿಸುತ್ತಿರುವ ಸಮಕಾಲೀನ ಸಮಾಜಕ್ಕೆ ಮೇಲು-ಕೀಳುಗಳನ್ನು ತೊರೆಯುವ, ನೈಜ ಪ್ರೇಮವನ್ನು ಮಾತ್ರ ಗುರುತಿಸುವಂತಹ ಈ ಆದರ್ಶ ಮಾದರಿಯಾಗುವ ಆಶಯ ಈ ಕವಯಿತ್ರಿಗಿದ್ದಿರಬೇಕು. ಹಾಗೆಯೇ ಹಸಿವಿನಿಂದ ಸಾವಿರಾರು ಪ್ರಾಣಗಳು ದಿನಂಪ್ರತಿ ದೂರವಾಗುತ್ತಿರುವ ದುರ್ಭಿಕ್ಷದ ಪರಿಸ್ಥಿತಿಯಲ್ಲಿ ಕೃಷ್ಣನಂತಹ ಪವಾಡ ಮಾಡಲು ಸಾಧ್ಯವಿಲ್ಲದಿದ್ದರೂ ಉಳ್ಳವರು ಇಲ್ಲದವರಿಗೆ ಹಂಚುವ ಮೂಲಕ ಎಲ್ಲರೂ ಬದುಕಲು ಅವಕಾಶ ಮಾಡಿಕೊಡಬಹುದು. ಹೀಗೆ ಹಂಚಿ ತಿನ್ನುವ ಆದರ್ಶವೊಂದು ಇಂದಿನ ಅಗತ್ಯವಾಗಿದೆ. ಪತ್ನಿಯನ್ನು ಇನ್ನಿಲ್ಲದಂತೆ ಕಾಡಿಸುವ, ಕೆಲವೊಮ್ಮೆ ಅವಳ ಪ್ರಾಣವನ್ನೇ ಸೆಳೆಯುವ ಪ್ರಸಂಗಗಳು ಕೂಡ ದಿನ ಬೆಳಗಾದರೆ ಸಾವಿರಾರು. ಹೀಗಿರುವಾಗ ಪತ್ನಿಯ ಸಾವಿಗೆ ಪರಿತಪಿಸುವ ಔದಾರ್ಯವನ್ನು ಹೊಂದಿರುವ ಅಥವಾ ಬದುಕಿದ್ದಾಗಲೂ ಅರ್ಧಾಂಗಿಯೆಂದು ಗೌರವಿಸುವ ಆದರ್ಶ ಕೂಡ ಇಂದಿನ ಅಗತ್ಯವಾಗಿದೆ. ಹೀಗೆ ಕವನ ಪೌರಾಣಿಕ ಪಾತ್ರಗಳನ್ನು ಉಲ್ಲೇಖಿಸುತ್ತಿದ್ದರೂ, ಚಿಂತನೆಗಳು ಮಾತ್ರ ಸಮಕಾಲೀನ ಸಂಗತಿಗಳಿಗೆ ಪೂರಕವಾಗುವಂತಹವುಗಳೇ ಆಗಿವೆ. ಈ ನಿಟ್ಟಿನಲ್ಲ ಕವಿಯ ಚಿಂತನೆಯ ಅವಾಸ್ತವದಿಂದ ವಾಸ್ತವದತ್ತ ಮುಖ ಮಾಡಿದೆ ಎಂದೇ ಹೇಳಬಹುದು.

ಹೀಗೆ ಕೆಲವು ಮೌಲ್ಯ, ಆದರ್ಶ, ಚಿಂತನೆಗಳು ತಾವಾಗಿಯೇ ರೂಪಾಂತರ ಹೊಂದಿದ್ದರೆ, ಇನ್ನು ಕೆಲವನ್ನು ಸಮಕಾಲೀನ ಅಗತ್ಯಗಳಿಗೆ ತಕ್ಕಂತೆ ರೂಪಾಂತರಗೊಳಿಸಿಕೊಳ್ಳಲಾಗಿದೆ.

### ೪.೪. ಮುಖಾಮುಖಿ ನೆಲೆ

'ಮುಖಾಮುಖಿ' ಎಂದರೆ ಎದುರುಗೊಳ್ಳುವುದು. ಆಧುನಿಕ ಮಹಿಳಾ ಕಾವ್ಯ ಎದುರುಗೊಳ್ಳುತ್ತಿರುವ ದಮನಕಾರಿ ಅಂಶಗಳ ಅಧ್ಯಯನದ ಹಿನ್ನೆಲೆಯಲ್ಲಿ ಈ ಉಪಶೀರ್ಷಿಕೆಯನ್ನು ಇಟ್ಟುಕೊಳ್ಳಲಾಗಿದೆ. ಉಳ್ಳವರು ಇಲ್ಲದವರ ಮೇಲೆ, ಮೇಲ್ಜಾತಿಯವರು - ಕೆಳಜಾತಿಯವರ ಮೇಲೆ, ಬಹುಸಂಖ್ಯಾತರು - ಅಲ್ಪಸಂಖ್ಯಾತರ ಮೇಲೆ, ಪುರುಷರು-ಸ್ತ್ರೀಯರ ಮೇಲೆ ಯಾವಾಗಲೂ ತಮ್ಮ ಹಿಡಿತ ಸಾಧಿಸಲು ಪ್ರಯತ್ನಿಸುತ್ತಿರುತ್ತಾರೆ. ಮಹಿಳಾಕಾವ್ಯ ಎದುರುಗೊಳ್ಳುತ್ತಿರುವ ಬಹುಮುಖ್ಯ ದಮನಗಳನ್ನು ಎರಡು ಭಾಗಗಳಾಗಿ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಅವುಗಳೆಂದರೆ

ಅ. ಜಾತಿ/ವರ್ಗಸಂಬಂಧಿ ದಮನಗಳೊಂದಿಗೆ ಮುಖಾಮುಖಿ

ಆ. ಲಿಂಗಸಂಬಂಧಿ ದಮನಗಳೊಂದಿಗೆ ಮುಖಾಮುಖಿ

### ಅ. ಜಾತಿ/ವರ್ಗಸಂಬಂಧಿ ದಮನಗಳೊಂದಿಗೆ ಮುಖಾಮುಖಿ

ಭೂಮಿಯ ಮೇಲೆ ಹುಟ್ಟಿದ ಪ್ರತಿ ಮಗುವಿಗೂ ಹುಟ್ಟಿನಿಂದಲೇ ಜಾತಿ, ಮತ, ಧರ್ಮ, ದೇಶಗಳ ಗುರುತು ನೀಡಿ ವರ್ಗೀಕರಣ ಮಾಡುವುದು ಶತಶತಮಾನಗಳಿಂದಲೂ ನಡೆದುಕೊಂಡು

ಬಂದಿರುವ ಪದ್ಧತಿ. ಇಂತಹ ಪದ್ಧತಿ ಎಲ್ಲರಿಗೂ ಸಮಾನ ಅವಕಾಶ, ಸ್ವಾತಂತ್ರ್ಯ, ಅನುಕೂಲ ಮಾಡಿಕೊಡುವಂತಿದ್ದರೆ ಅದೊಂದು ದಮನಕಾರಿ ಅಂಶವಾಗುತ್ತಲೇ ಇರಲಿಲ್ಲ. ಮೂಲತಃ ಇಂತಹ ವಿಂಗಡಣೆಯೇ ಅಸಮಾನತೆಯ ಆಶಯವುಳ್ಳದ್ದು. ಇದನ್ನು ಕಾಲಕಾಲಕ್ಕೆ ಪ್ರತಿರೋಧಿಸುತ್ತಲೇ ಬರಲಾಗಿದೆಯಾದರೂ, ಹೊಸ ಹೊಸ ರೂಪದಲ್ಲಿ ಅದು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಲೇ ಬಂದಿದೆ.

ಕನ್ನಡ ಸಾಹಿತ್ಯದಲ್ಲಿ 'ಪ್ರಗತಿಶೀಲ'ವೆಂದು ಗುರುತಿಸುವ ಕಾಲಘಟ್ಟದಲ್ಲಿ ಆರ್ಥಿಕ ಶೋಷಣೆ, ವರ್ಗತಾರತಮ್ಯದ ಕುರಿತು ಸಾಕಷ್ಟು ಕಥೆ, ಕಾದಂಬರಿಗಳು ರಚನೆಯಾಗಿವೆ. ಸ್ವಾತಂತ್ರ್ಯಾನಂತರದ ರಾಜಕೀಯ, ಸಾಮಾಜಿಕ ಬೆಳವಣಿಗೆಗಳಿಂದ 'ದಲಿತ'-ಬಂಡಾಯ' ಸಾಹಿತ್ಯ ಪಂಥಗಳು ಎಲ್ಲ ಬಗೆಯ ತಾರತಮ್ಯಗಳ ವಿರುದ್ಧವೂ ದನಿ ಎತ್ತಿದವು. ಇದೇ ಅವಧಿಯಲ್ಲಿ ಮಹಿಳಾ ಕಾವ್ಯ ಕೂಡ ಕಣ್ತೆರೆಯುತ್ತಿದ್ದಿತು. ಅದು ಇಂತಹ ಸಾಮಾಜಿಕ ತಾರತಮ್ಯಗಳ ಜೊತೆಗೆ ತನ್ನದೇ ಅಸ್ತಿತ್ವಕ್ಕಾಗಿ 'ಲಿಂಗ'ದಮನ ಧೋರಣೆಗಳನ್ನೂ ಮುಖಾಮುಖಿಯಾಗಬೇಕಾಯಿತು. ವ್ಯಂಗ್ಯ, ವಿಂಡಬನೆ, ತಿರಸ್ಕಾರ, ಪ್ರತಿರೋಧ ಹೀಗೆ ಎಲ್ಲ ಬಗೆಯ ಸಂವೇದನೆಗಳ ಮೂಲಕವೂ ಇಂತಹ ಧೋರಣೆಗಳನ್ನು ಎದುರಿಸಲಾಗಿದೆ.

ವಚನಸಾಹಿತ್ಯದ ಕಾಲದಿಂದಲೂ ಜಾತಿಪದ್ಧತಿ ಎನ್ನುವುದು ತೊಲಗಬೇಕಾದ ಪಿಡುಗೆಂಬುದನ್ನು ಕನ್ನಡ ಸಾಹಿತ್ಯ ಬೆಂಬಲಿಸುತ್ತಲೇ ಬಂದಿದೆ. ಇದಕ್ಕಾಗಿ ಸಾಮಾಜಿಕ, ಧಾರ್ಮಿಕ ಸುಧಾರಣಾ ಚಳವಳಿಗಳೇ ನಡೆದಿವೆ. ಇವುಗಳೆಲ್ಲದರ ಫಲ ಅಲ್ಪಮಟ್ಟಿನ ಸುಧಾರಣೆ ಬಿಟ್ಟರೆ ಜಾತಿಯನ್ನು ಬುಡಸಹಿತ ಕೀಳಲು ಸಾಧ್ಯವಾಗಿಲ್ಲ. ಸ್ವಾತಂತ್ರ್ಯಾನಂತರದ ಭಾರತದಲ್ಲಿ, ಸಾಂವಿಧಾನಿಕ ಪರಿಹಾರಗಳು ಇರುವ ಕಾಲಕ್ಕೂ ಇದೊಂದು ಜ್ವಲಂತ ಸಮಸ್ಯೆಯಾಗಿದೆ. ಇದರ ಜೊತೆಗೆ ಬದಲಾದ ಆರ್ಥಿಕ ವ್ಯವಸ್ಥೆಯಲ್ಲಿ ವರ್ಗಗಳ ನಡುವಿನ ಅಂತರ ಕೂಡ ಹೆಚ್ಚಾಗುತ್ತಿದ್ದು, ಶ್ರೀಮಂತರು ಬಡವರ ಮೇಲೆ ನಡೆಸುತ್ತಿರುವ ದೌರ್ಜನ್ಯ ಹೆಚ್ಚಾಗುತ್ತಲೇ ಇದೆ. ಕೆಲವೊಮ್ಮೆ ಇದು ಗೋಚರವಾದರೆ, ಹಲವು ಸ್ತರಗಳಲ್ಲಿ ಅಗೋಚರ. ಈ ಜಾತಿ, ವರ್ಗತಾರತಮ್ಯಗಳನ್ನು ಮಹಿಳಾಕಾವ್ಯ ಎದುರುಗೊಳ್ಳುವ ಬಗೆಯನ್ನು ಅನೇಕ ಕವನಗಳ ನಿದರ್ಶನಗಳೊಂದಿಗೆ ವಿವರಿಸಬಹುದಾಗಿದೆ.

ಆಧುನಿಕ ಮಹಿಳಾಕಾವ್ಯದ ಪ್ರಾರಂಭಿಕ ರಚನೆಕಾರರಲ್ಲಿ ಒಬ್ಬರಾದ ಗಿರಿಬಾಲೆಯವರು ಪ್ರಕ್ರಿಯಿಸುವುದು ಹೀಗೆ :

> **ಜಾತಿಯಂತೆ ಕುಲಗಳಂತೆ**
> **ಹುಟ್ಟಿನಿಂದೆ ಬರುವುದಂತೆ;**
> **ಜಾತಿ ನೀತಿ ಕುಲಗಳೆಲ್ಲ**
> **ಕೃತಿಗಳಿಂದೆ ಅರಿಯಲಹುದು!**
> **ಸುಳ್ಳನವನು ಯಾವ ಜಾತಿ**
> **ಮೋಸಗಾರಗಾವ ನೀತಿ**
> **ಕಳ್ಳನವಗೆ ಯಾವ ಕುಲ?...**
>
> (ಜಾತಿ - ಕುಲ - ಗಿರಿಬಾಲೆ)

ಈ ಕವನದ ಮೇಲೆ ಹರಿದಾಸರ ಪ್ರಭಾವವಿರುವಂತೆ ಕಾಣುತ್ತದೆ. ಹುಟ್ಟಿನಿಂದ ಬರುವ ಹೆಸರಿಗಿಂತಲೂ ನಡತೆಯಿಂದ ಗಳಿಸುವ ಹೆಸರೇ ಶ್ರೇಷ್ಠವಾದದ್ದು ಎಂಬುದು ಕವಯಿತ್ರಿಯ ಅಭಿಪ್ರಾಯ. ಗುಣದಿಂದ ಯೋಗ್ಯತೆ ಗಳಿಸಿ ಉನ್ನತ ಜಾತಿಯವನಾಗಬಹುದೇ ಹೊರತು ಹುಟ್ಟಿನಿಂದ ಬಂದ ಜಾತಿಗೆ ಯಾವ ಬೆಲೆಯೂ ಇಲ್ಲ ಎಂಬುದು ಇಲ್ಲಿ ಸೂಚ್ಯ. ಇದು ಕೇವಲ ಆದರ್ಶದ ಹೇಳಿಕೆಯೇ ಹೊರತು ವಾಸ್ತವವಾಗಿ ಆಚರಣೆಯಲ್ಲಿರುವುದೇ ಬೇರೆ. ಹೀಗೆ ಈ 'ಜಾತಿ' ಎಂಬ ವ್ಯವಸ್ಥೆಯನ್ನು ಕಾಯುತ್ತಿರುವ ಅಂಶಗಳಾದರೂ ಯಾವುದು ಎಂದು ಆಲೋಚಿಸಿದರೆ ಮತ್ತೆ ಸಾಂಪ್ರದಾಯಿಕ ಪರಂಪರೆಯತ್ತಲೇ ಹೋಗಬೇಕಾಗುತ್ತದೆ. ಧಾರ್ಮಿಕವಾದ ಅನೇಕ ಆಚರಣೆಗಳ ಮೂಲಕ, ಪೌರಾಣಿಕ ನಂಬಿಕೆಗಳನ್ನು ಬಿತ್ತುವ ಮೂಲಕ ಯಾವ ರೀತಿ ಜಾತಿಯನ್ನು ಕಾಯ್ದುಕೊಳ್ಳಲಾಗಿದೆ ಎಂಬುದನ್ನು ಬಿ.ಟಿ. ಲಲಿತಾನಾಯಕ್ ಅವರು ವಿಡಂಬಿಸುವುದು ಹೀಗೆ:

**ಹಂದಿ ಆಮೆಗಳಂಥ ಅವತಾರ ಕಥೆಗಳನು**
**ಬೆಚ್ಚಿ ಬೀಳಿಸುವಂತೆ ಹೆಣೆದು ಹಾಡಿದಿರಿ**
**ಗಂಧಕರ್ಪೂರ ಬತ್ತಿ ಹೊಗೆಯಿಂದ ನಮಗೆ ಮತ್ತು**
**ಬರಿಸಿ ಮೋಕ್ಷ ಮುಕ್ತಿಗಳಂಥ ಉಕ್ತಿ ಹೇಳಿದಿರಿ**
**ಎಳೆಹರೆಯ ಬಾಲೆಯರು ಬಸಿರ್ಹೊತ್ತು ನಿಂತಾಗ**
**ಗಾಳಿ ಬೆಳಕಿನ ಕೂಟವಿದೆಂದು ಅಪ್ಪಣೆಯ ಕೊಡಿಸಿದಿರಿ**

(ಮುಂಜಾವು - ನಂ ರೂಪ್ಲಿ)

ಹೀಗೆ ಹುಸಿ ಪುರಾಣಗಳ ಭಯದಲ್ಲಿ ಜಾತಿಯನ್ನು ಸದಾ ರಕ್ಷಿಸುತ್ತಾ ಬರಲಾಗಿದೆ. ತಮ್ಮ ವಾಂಛೆಗಳನ್ನು ಈಡೇರಿಸಿಕೊಳ್ಳಲು ಅಮಾಯಕರ ಮೇಲೆ ದೌರ್ಜನ್ಯ ನಡೆಸುವುದಲ್ಲದೆ ಅವುಗಳಿಗೂ ಗಾಳಿ ಬೆಳಕಿನ ಕೂಟಗಳೆಂದು ಕಲ್ಪಿತ ಕಥೆಗಳನ್ನು ಸೃಷ್ಟಿಸಿ ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುವ ವ್ಯವಸ್ಥೆಯನ್ನು ಖಂಡನೆಯ ಧ್ವನಿಯಲ್ಲಿ ವಿಡಂಬಿಸಲಾಗಿದೆ.

ಹುಟ್ಟಿನ ಶ್ರೇಷ್ಠತೆಯನ್ನು ಮೆರೆಯುವ ಮೇಲರಿಮೆಗೂ ಕೂಡ ಅಂತಹುದೇ ವಿಡಂಬನೆಯ ನೋಟ ಅವರದು.

**ಬರೆ ನೀವು ಮೇಲಿನವರು**
**ಮೇಲಿನಿಂದ ಬಂದವರು**
**ಕೆಳಗಿನಿಂದಾಗಲಿ । ಒಳಗಿನಿಂದಾಗಲಿ**
**ಕೊಳೆಯಿಂದಾಗಲಿ । ಹೊರಬಂದವರಲ್ಲ**

**ನಿಮ್ಮಪ್ಪ ಅಗದಿ ದೂರ**
**ನಿಂತು ಕಿವಿ ಊದಿದಾಗ ನಿಮ್ಮಮ್ಮ**
**ನ ನೆತ್ತಿಗೇರಿತ್ತು ಧಾತು!**

**ನಾರದ ಸೋರದ ಹೊಲೆ**
**ರಕ್ತಮಾಂಸವಿಲ್ಲದ ದಿವ್ಯ**
**ದೇಹದಾರಿಗಳು ಸ್ವಾಮಿ**

**(ಮೇಲಿನವರು - ನಂ ರೂಪ್ಲಿ - ಪುಟ ೫೫)**

ಜೀವಿಸಹಜವಾದ ಎಲ್ಲ ಚಟುವಟಿಕೆಗಳಲ್ಲಿಯೂ ತೊಡಗಿಕೊಂಡು, ತಮ್ಮ ಸಹಜೀವಿಗಳಿಗಿಂತ ತಾವು ಮೇಲಿನವರು ಎಂಬ ಸುಳ್ಳನ್ನು ಬಿತ್ತುವ ಹುನ್ನಾರವನ್ನು ಕವಯಿತ್ರಿ ವ್ಯಂಗ್ಯದಿಂದ ನೋಡುತ್ತಾರೆ. ಊಟ, ನೋಟ, ಕೂಟಗಳೆಲ್ಲವೂ ಎಲ್ಲರಲ್ಲೂ ಸಮಾನವಾಗಿದ್ದರೂ 'ಮೇಲಿನವರು' ಎಂಬ ಗರಿಮೆ ಮಾತ್ರ ಕೆಲವರಿಗೆ, ಇದರ ಪ್ರಭಾವ ಎಷ್ಟರಮಟ್ಟಿಗಿದೆ ಎಂದರೆ 'ಕೆಳಗಿನವರು' ಎನ್ನಿಸಿಕೊಂಡ ಜನರಿಗೆ ತಮಗೂ ಒಂದು ಅಸ್ತಿತ್ವ ಇದೆ ಅನ್ನುವುದೇ ಮರೆತು ಹೋಗಿರುವುದು. ಅವರ ವಿಸ್ಮೃತಿ ಎಷ್ಟರಮಟ್ಟಿನದೆಂದರೆ ಶ್ರೇಷ್ಠವಾಗಿದ್ದೆಲ್ಲವೂ ಈ 'ಮೇಲಿನವರಿಗೆ' ಸಂಬಂಧಪಟ್ಟಿದ್ದು ಅಥವಾ ಶ್ರೇಷ್ಠವಾಗಿರುವುದ್ಯಾವುದನ್ನೂ ಇಟ್ಟುಕೊಳ್ಳುವ ಯೋಗ್ಯತೆ ಇಲ್ಲದವರು ತಾವು ಎಂಬಷ್ಟು, ಇದನ್ನು ಇದೇ ಕವಯಿತ್ರಿ ಒಂದು ಸನ್ನಿವೇಶ ವಿವರಣೆಯೊಂದಿಗೆ ತೆರೆದಿಡುತ್ತಾರೆ. ಅಂಬೇಡ್ಕರ್ ಜಯಂತಿಯಂದು ಭಾಷಣ ಮಾಡಲು ತಯಾರಿ ಮಾಡಿಕೊಂಡು ಹೊರಟ ಈ ನಿರೂಪಕಿಯ ಮನೆಗೆ ಇಬ್ಬರು 'ಕೆಳಗಿನವರು' ನೀರು ಕುಡಿಯಲು ಬರುತ್ತಾರೆ. ಅಂಬೇಡ್ಕರ್ ಬಗ್ಗೆ ನಿರೂಪಕಿಯಿಂದ ಚಿಕ್ಕ ವಿವರಣೆ ಪಡೆದ ಅವರಲ್ಲಿ ಒಬ್ಬ ಪ್ರತಿಕ್ರಿಯೆ.

**"ಯೌಯವ್ವಾ! ಹೆಂತಾ ಶ್ಯಾಣಾತನಿದ್ದಾನ್ರೀ!**
**ಹುಟಬಾರದಿತ್ರಿಯವ್ವಾ**
**ನಮ್ಮಂಥೋರ ಕೀಳು ಕುಲದಾಗ**
**ಹುಟಬಾರದಿತ್ರಿ ತಾಯಿ!"**

**(ಅಂಬೇಡ್ಕರ್ ಮಾಹಿತಿ ಆದ ನಿಮಗ? - ನಂ ರೂಪ್ಲಿ - ಪುಟ ೧೨)**

ಹೀಗೆ ತಾವು 'ಕೀಳು ಕುಲದೋರು' ಎಂಬ ನಂಬಿಸಲಾದ ಸತ್ಯವನ್ನು ಪರಾಮರ್ಶಿಸುವ, ಅದನ್ನು ವಿಮರ್ಶಿಸುವ ಯೋಚನೆ ಇಲ್ಲದ ಇವರ ಮುಗ್ಧತೆ ಶಿಕ್ಷಣ ಪಡೆದ, ಉದ್ಯೋಗಸ್ಥರಾದ ನಿರೂಪಕಿಯಂಥವರಿಗೆ ಆಶ್ಚರ್ಯಕರವಾಗಿರುವುದು ಮಾತ್ರವಲ್ಲದೆ ಅವರನ್ನು ಎಚ್ಚರಿಸುವ ಮಾರ್ಗವಾದರೂ ಯಾವುದೆಂಬ ಚಿಂತನೆಗೂ ಹಚ್ಚಿರಬೇಕು! ಕನ್ನಡ ಸಾಹಿತ್ಯದಲ್ಲಿ ಸಿದ್ಧಲಿಂಗಯ್ಯನವರಂತಹ ಕವಿಗಳು ಇಂತಹ ಶೋಷಣೆಯ ವಿರುದ್ಧ ನೇರವಾಗಿ ದಾಳಿ ನಡೆಸಿದ್ದೂ, ಆಕ್ರೋಶಭರಿತವಾಗಿ ಸ್ಪಂದಿಸಿದ್ದೂ ಇದೆ. ಆದರೆ ಸ್ತ್ರೀಯರ ಧ್ವನಿ ಮಾತ್ರ ವಿಡಂಬನೆಗಿಂತ ಮೇಲೆ ಸಾಗುವುದಿಲ್ಲ. ಇದು 'ಸ್ತ್ರೀ' ಸಹಜ ಸೌಜನ್ಯದ ಪ್ರಭಾವವೋ, ಆಕ್ರೋಶ, ಸಿಟ್ಟುಗಳಿಂದ ಯಾವ ಸಾಧನೆಯೂ ಆಗುವುದಿಲ್ಲವೆಂಬ ವಿವೇಚನೆಯೋ! ಪರವಿಡಂಬನೆಗಿಂತಲೂ ಸ್ವವಿಮರ್ಶೆಯೇ ಹೆಚ್ಚು ಕಂಡುಬರುತ್ತದೆ. ತನ್ನ ತಾನರಿದರೆ ಬೇರೆಯವರ ತಂತ್ರಗಳಿಗೆ ಬಲಿಯಾಗದಿರಬಹುದು ಅಥವಾ ತನ್ನನ್ನು ತಾನು

ಅರಿಯದ ಹೊರತು ತನ್ನ ಸ್ಥಾನಮಾನ, ಸ್ಥಿತಿಗತಿಗಳನ್ನು ಅರಿಯಲಾಗದು ಎಂಬ ಚಿಂತನೆ ಇದರ ಹಿನ್ನೆಲೆಯಲ್ಲಿರಬೇಕು. ಇದೇ ಕವಯಿತ್ರಿ ಶ್ರಮಿಕನನ್ನು ಉದ್ದೇಶಿಸಿ ಹೇಳುವ ಮಾತು;

ಬಡಬೋರ | ನೀನು ಬದುಕಿರಬೇಕು. ಅರೆ
ಹೊಟ್ಟೆ ಉಂಡೋ ತುಸುಗಂಜಿ ಕುಡಿದೋ
ಜೀವ ಹಿಡಿದಿರಬೇಕು!
ಮಕ್ಕಳು ಮರಿ ಅವಶ್ಯ ಹುಟ್ಟಿಸು -
ಒಂದೆರಡು ಮೂರು ಮಾತ್ರವಲ್ಲ
ಮನೆ ತುಂಬ ಇರಲಿ!
.................
ಸಾಲ ಬೇಕಾದರೆ ಕೊಡುತ್ತಾರೆ - ಕೊರಗಬೇಡ
ನೀನು ತೀರಿಸದಿದ್ದರೂ ಪರವಾಗಿಲ್ಲ
ನಿನ್ನ ಮಕ್ಕಳಿದ್ದಾರೆ, ಮೊಮ್ಮಕ್ಕಳಿದ್ದಾರೆ
ಹರೆಯದ ಪೋರಿಯರೂ ಇದ್ದಾರು...

(ಕೇಳಿ ಎಲುಬುಗಳೇ - ನಂ ರೂಪ್ಲಿ - ಪುಟ ೩)

ಆರ್ಥಿಕವಾಗಿ, ಸಾಮಾಜಿಕವಾಗಿ, ಕೌಟುಂಬಿಕವಾಗಿ, ಪಾರಂಪರಿಕವಾಗಿ ಹೀಗೆ ವಿವಿಧ ಸ್ತರಗಳಲ್ಲಿ ನಡೆಯುವ ಶೋಷಣೆಯ ಎಲ್ಲ ಮುಖಗಳನ್ನೂ ಕವಿತೆ ಬಿಚ್ಚಿಡುತ್ತಿದೆ. ಆಯ್ದುಕೊಂಡದ್ದು ಮಾತ್ರ ಸ್ವವಿಡಂಬನಾ ತಂತ್ರ, ಹಾಗಾದರೆ ಬದಲಾದ ಶೈಕ್ಷಣಿಕ-ರಾಜಕೀಯ ವ್ಯವಸ್ಥೆಗಳು ಈ ಜೀವನವಿಧಾನದ ಮೇಲೆ ಯಾವ ಪ್ರಭಾವವನ್ನೂ ಬೀರಿಲ್ಲವೆ ಎಂದುಕೊಂಡರೆ ಅಲ್ಲೂ ಕೂಡ ಆತ್ಮವಿಶ್ವಾಸದ ಎಳೆ ಒಂದು ಕಡೆ ಕಾಣಿಸಿಕೊಂಡರೆ, ಉದ್ಧಾರದ ಹೆಸರಲ್ಲಿ ಇನ್ನೊಂದು ರೂಪದಲ್ಲಿ ಸ್ವಾರ್ಥಕ್ಕೆ ಬಳಸಿಕೊಳ್ಳುವುದನ್ನು ಸುಜಾತಾ ಚಲವಾದಿ ಎನ್ನುವ ಕವಯಿತ್ರಿ ವಿವರಿಸುವುದು ಹೀಗೆ.

ಹೊಲೆ-ಮಾದಿಗರ ಕೇರಿಗಳು
ಹುಲಿ-ಸಿಂಹಗಳ ತಾಣಗಳು
ಕಾಡ ಮೃಗದಂತೆ ಬದುಕಿದವರು
ಊರ ಹೊರಗಿನ ಸ್ವಾತಂತ್ರ್ಯಪ್ರಿಯ
ರಣ ಕಹಳೆ ಮೊಳಗಿಸಿದವರು
ಬೃಹತ್ ವೋಟ್ ಬ್ಯಾಂಕ್‌ಗೆ ಬದಲಾದವರು
ರಾಜಕೀಯ ಪಕ್ಷಗಳ ಉಭಕ್ಕೆ
ಬಲಿಯಾದವರು

(ಹೊಲೆ ಮಾದಿಗರು - ಕೊರಗು - ಪುಟ ೨೫)

ಕವನದಲ್ಲಿ ವಿವರಣೆಗಳು ವಾಚ್ಯವೆನಿಸುತ್ತವೆ. ಮೊದಲ ಪದ್ಯಭಾಗದ ವಿವರಣೆ ದಲಿತರ ಸ್ವಾಭಿಮಾನದ ದ್ಯೋತಕವಾಗಿ ಕಾಣಿಸಿದರೆ, ನಂತರದ ಭಾಗದಲ್ಲಿ ಬದಲಾದ ರಾಜಕೀಯ ವ್ಯವಸ್ಥೆಯಲ್ಲಿ ಒಂದು ವರ್ಗವನ್ನು ಹಣ, ಸೌಲಭ್ಯಗಳ ಆಮಿಷ ತೋರಿಸಿ ದುರ್ಬಳಕೆ ಮಾಡಿಕೊಳ್ಳುತ್ತಿರುವುದರ ಕುರಿತು ವಿಡಂಬನೆಯಿದೆ. 'ಊರ ಹೊರಗಿನ ಸ್ವಾತಂತ್ರ್ಯಪ್ರಿಯ'ರು ಎಂಬ ರೂಪಕ ಕೂಡ ಕಾನೂನಿನಲ್ಲಿ ಮಾತ್ರ ತೊಲಗಿರುವ, ನೈಜ ಸನ್ನಿವೇಶದಲ್ಲಿ ಭಿನ್ನ ರೂಪದಲ್ಲಿ ಆಚರಣೆಯಲ್ಲಿರುವ ಅಸ್ಪೃಶ್ಯತೆಯನ್ನು ನೆನಪಿಸುತ್ತದೆ. ಇದು ಆರ್ಥಿಕ-ಸಾಮಾಜಿಕ ಶೋಷಣೆಯಾಗಿಯಷ್ಟೇ ಇರದೆ ಇನ್ನೂ ಮುಂದುವರಿದು ದೌರ್ಜನ್ಯವಾಗಿ ಮಾರ್ಪಟ್ಟಾಗ ಅದರ ಅಮಾನವೀಯ ಕ್ರೂರ ಮುಖದರ್ಶನವಾಗುತ್ತದೆ.

**ನಮ್ಮ ರೂಪ್ಲಿ ರಮಣಿಯರನು**
**ಕಚ್ಚೆ ಹರುಕ ಧನಿಕ ನಾಯಿ**
**ಕಣ್ಣು ಹಾಕಿ ಕಾಡುತಿರಲು**
**ಮೌನವಾಗಿ ಅತ್ತೆವು**
**ಒಳಗೊಳಗೇ ಸತ್ತೆವು**

**(ನಂ ರೂಪ್ಲಿ ಮತ್ತು ಕಚ್ಚೆ ಹರ್ಕನಾಯಿ - ನಂರೂಪ್ಲಿ - ಪುಟ ೬)**

ಇಂತಹ ದೌರ್ಜನ್ಯಗಳನ್ನು ಎದುರಿಸಲಾರದೆ ಅಸಹಾಯಕತೆಯಲ್ಲಿ ಕೊರಗುವ ಈ ಸನ್ನಿವೇಶ ಕೂಡ ತಣ್ಣನೆಯ ವಿಷಾದದೊಂದಿಗೆ ನಿರೂಪಿತವಾಗುತ್ತಿದೆ. ಇದನ್ನು ಇನ್ನಷ್ಟು ನಾಟಕೀಯವಾಗಿ ವಚನಗಳ ಧಾಟಿಯಲ್ಲಿ ಸುಕನ್ಯಾ ಮಾರುತಿ ಅವರು ನಿರೂಪಿಸುತ್ತಾರೆ.

**ಓ ಕೆರೆ ಭಾವಿಗಳೇ । ರೈಲು ಹಳಿಗಳೇ**
**ಕಪ್ಪು ರಸ್ತೆಯೇ । ನೀವು ಕಾಣಿರಾ? ನೀವು ಕಾಣಿರಾ?**
................................
**ನೀವು ಕಂಡಿರಾ? ಖಂಡಿತಾ?**
**ಒಡೆಯನ ಬಡಿಗೆ ಅವನ**
**ತಲೆಯೊಡೆದದ್ದು ಕಂಡು**
**ನೀವೂ ನಾಚಿ ತಲೆ ತಗ್ಗಿಸಿದಿರಾ**
**ಓಹ್!**

**(ನೀವು ಕಾಣಿರಾ - ನಾನೆಂಬ ಮಾಯೆ - ಪುಟ ೫೩)**

ಜೀತದಾಳುಗಳಾಗಿ ದುಡಿಸಿಕೊಳ್ಳುವುದು ಒಂದು ರೀತಿಯ ಹಿಂಸೆಯಾದರೆ, ಸಣ್ಣ ಪುಟ್ಟ ತಪ್ಪುಗಳಿಗೂ ನೀಡುವ ಚಿತ್ರಹಿಂಸೆ ಇನ್ನೊಂದು ಬಗೆ. ಹಣ, ಅಧಿಕಾರ ಬಲದಿಂದ ಅವುಗಳನ್ನು ಮುಚ್ಚಿಹಾಕುವ ಧೂರ್ತತನ ಬೇರೆ. 'ನೀವು ಕಾಣಿರಾ?' ಎಂದು ಪ್ರಶ್ನೆ ಪುನಃ ಪುನಃ ಬಂದಾಗ ಕೇವಲ ಪ್ರಶ್ನೆಯಾಗಿ ಮಾತ್ರವಲ್ಲದೆ, ನಿಮಗಿದು ಕಾಣಿಸಿಲ್ಲವೇ ಎಂದು ಎಚ್ಚರಿಸಿದ ಹಾಗೆ

ಭಾಸವಾಗುತ್ತದೆ. ಇದೇ ಕವಯಿತ್ರಿ ಬಡತನವನ್ನು ವರ್ಗತಾರತಮ್ಯವನ್ನು ವಚನದ ಪ್ರಸಿದ್ಧ ಸಾಲೊಂದನ್ನು ಉದ್ಧರಿಸಿ ಇನ್ನಷ್ಟು ವಿಡಂಬಿಸುತ್ತಿದ್ದಾರೆ.

**'ಉಳ್ಳವರು ಶಿವಾಲಯವ ಮಾಡುವರಯ್ಯ**
**ನಾವೇನು ಮಾಡೋಣ ಬಡವರಯ್ಯ!**
**ಬೇಕಾದರೆ ನಮ್ಮ ಕಾಯವ**
**ದಂಡಿಗೆಯ ಮಾಡಿಕೋ,**
**ಒಣಗಿ ಸಪೂರವಾಗಿದೆ.**
**ಪೊಳ್ಳು ಶಿರವನ್ನು ಸೋರೆಯ ಮಾಡಿಕೋ**

**(ಬಡವರಯ್ಯ - ನಾನೆಂಬ ಮಾಯೆ - ಪುಟ ೩೫)**

'ಎನ್ನ ಕಾಲೇ ಕಂಬ, ದೇಹವೇ ದೇಗುಲ' ವಚನದ ಸಾಲುಗಳು ಬಡವರ ಜೀವನಕ್ಕೆ ಅನ್ವಯವಾಗದಿರುವ ಪರಿಯನ್ನು ತೆಳುಹಾಸ್ಯದೊಂದಿಗೆ ಚಿತ್ರಿಸಲಾಗಿದೆ. ಬಡತನದ ಚಿತ್ರಣವನ್ನು ಪರಿಣಾಮಕಾರಿಯಾದ ಈ ದೃಷ್ಟಾಂತದಲ್ಲಿ ಮಂಡಿಸಿದ್ದು ಕವನವು ಸಾಹಿತ್ಯಕ ಕಾರಣಗಳಿಂದಲೂ ಆಕರ್ಷಿತವಾಗುವಂತೆ ಮಾಡಿದೆ.

ಇದೇ ವರ್ಗತಾರತಮ್ಯವನ್ನು ರೊಟ್ಟಿ ಮತ್ತು ಹಸಿವುಗಳೆಂಬ ರೂಪಕಗಳ ಮೂಲಕ ಕಟ್ಟಿಕೊಡುತ್ತಾರೆ ರೂಪ ಹಾಸನ ಅವರು :

**ಕೊಡುವ ರೊಟ್ಟಿ**
**ಪಡೆವ ಹಸಿವು**
**ಬದಲಾಗದ ಲೆಕ್ಕ ತಃಖ್ತೆ**
**ಅಸಮತೆಯ ಹೆಜ್ಜೆಗಳು**
**ಒಟ್ಟಾಗಿಯೇ ನಡೆಯುತ್ತಿವೆ**
**ಯಾರೋ ಮಾಡಿದ ದಾರಿ**

**(ಗಳಿಗೆ ಬಟ್ಟಲ ತಿರುವುಗಳಲ್ಲಿ - ಪುಟ ೧೩)**

ಪಡೆದಷ್ಟೂ, ದೋಚಿದಷ್ಟೂ ತೃಪ್ತಿಯಿಲ್ಲದ ಹಪಹಪಿಕೆ ಹಸಿವೆಗೆ ರೊಟ್ಟಿ ನೀಡುವುದರ ಪ್ರತೀಕ. ಈ ಅಸಮತೆಯ ಲೆಕ್ಕ ಎಂದೂ ಸರಿ ಹೋಗಲಾರದು ಎಂಬ ಅರಿವಿನಿಂದಲೇ ಒಟ್ಟಾಗಿ ಹೆಜ್ಜೆ ಹಾಕುತ್ತಿವೆ. ಇಂತಹ ಅನಿವಾರ್ಯತೆಗಿರುವ ಕಾರಣಗಳು ಹಲವಾರು. ಇಲ್ಲಿ ಹಸಿವೆಯ ಮಹತ್ವಾಕಾಂಕ್ಷೆಯೇ ರೊಟ್ಟಿಯನ್ನು ಅಸಹಾಯಕವನ್ನಾಗಿ ಮಾಡಿದೆ.

**ಪರಿಧಿ ವಿಸ್ತರಿಸಿದಂತೆಲ್ಲಾ**
**ಹಸಿವೆಗೆ ಇಷ್ಟವಿಲ್ಲದಿದ್ದರೂ**
**ಅದರ ಕರಾಳ ಮುಖಗಳು**
**ರೊಟ್ಟಿಗೆ ತನ್ನಂತೆ ತಾನೇ**

**ತೆರೆದುಕೊಳ್ಳುತ್ತಾ ಹೋಗುತ್ತದೆ.**
**ನಾಚಬೇಕಿದ್ದ ಹಸಿವು | ಆರ್ಭಟಿಸುತ್ತದೆ.**
**ದನಿಕಳೆದುಕೊಂಡ | ಅಸಹಾಯಕ ರೊಟ್ಟಿ**
**ಬಾಯಿ ಮುಚ್ಚುತ್ತದೆ**

**(ಗಳಿಗೆ ಬಟ್ಟಲ ತಿರುವುಗಳಲ್ಲಿ - ಪುಟ ೨೬)**

ಇಲ್ಲಿ ಅಸಹಾಯಕತೆಯೇ ಶೋಷಣೆಗಳನ್ನು ಸಹಿಸಿಕೊಳ್ಳಲು ಇರುವ ಮುಖ್ಯ ಕಾರಣ ಎಂಬುದು ವೇದ್ಯವಾಗುತ್ತದೆ. ಇಂತಹ ಅಸಹಾಯಕತೆಗೆ ಇಂದಿನ ರಾಜಕಾರಣ, ಅಧಿಕಾರಿದ ಮೇಲಾಟದ, ನ್ಯಾಯಾಂಗವೂ ಸೇರಿದಂತೆ ಬಡತನ ಪಾಲಿಗೆ ವಿಳಂಬವಾಗುವ ಕಾನೂನು ಕಟ್ಟಳೆಗಳು, ಅವುಗಳ ಹಿಂದೆ ಪ್ರಭಾವಶಾಲಿಯಾದ ಹಣ, ಅದನ್ನು ಎಟುಕಿಸಿಕೊಳ್ಳಲಾರದ ಪರಿಸ್ಥಿತಿ ಕಾರಣಗಳಾಗಿವೆ.

ಬಡತನದ ಕಾರಣದಿಂದಾಗಿ ತಮ್ಮ ಸುಂದರ ಬಾಲ್ಯವನ್ನು ಕಳೆದುಕೊಂಡು ಹರೆಯದಲ್ಲೇ ಮುಪ್ಪು ಕಾಣುವ ಬಾಲಕಾರ್ಮಿಕರ ಶೋಷಣೆಯನ್ನೂ ಕೂಡ ಮಹಿಳಾಕಾವ್ಯ ಎದುರುಗೊಳ್ಳುತ್ತದೆ. ಮಾಧವಿ ಭಂಡಾರಿಯವರು ಇದನ್ನು ನಾಟಕೀಯ ಸನ್ನಿವೇಶದಲ್ಲಿ ಹಿಡಿದಿಡುತ್ತಾರೆ. ಗೆಳತಿಯರೊಂದಿಗೆ ಹೋಟೆಲಿಗೆ ಹೋದ ನಿರೂಪಕಿ ಅಲ್ಲಿ ಸಪ್ಲೆ ಮಾಡುವ ಹುಡುಗನೊಂದಿಗೆ ಹೀಗೆ ಹೇಳುತ್ತಾಳೆ.

**ಈಗ 'ರುಚಿಯಾದುದೊಂದು ತಾ ಆಯ್ಕೆ ನಿನ್ನದು'**
**"ಇಡ್ಲಿಯನ್ನುಳಿದ | ಇನ್ನಾವುದರ ರುಚಿ ಗೊತ್ತು ಮೇಡಂ ನನಗೆ?'**

**(ಹೋಟೆಲ್ಲಿನಲ್ಲಿ ಒಂದು ದಿನ - ಹರಿದ ಸ್ಕರ್ಟಿನ ಹುಡುಗಿ)**

ಇದು ಹುಡುಗನ ಪ್ರತಿಕ್ರಿಯೆ. ಕಣ್ಣೆದುರಿಗಿರುವುದೆಲ್ಲ ಎಟುಕದಿರುವ ವಿಪರ್ಯಾಸ ಶೋಷಣೆಯ ಅಥವಾ ದುಡಿಯುವವನ ಪಾಲಿಗೆ ಎಲ್ಲವೂ ದಕ್ಕದಿರುವ ದುರಂತವನ್ನು ಮನಗಾಣಿಸುತ್ತದೆ. ಬಾಲಕಾರ್ಮಿಕ ವ್ಯವಸ್ಥೆಯನ್ನು ಇನ್ನಷ್ಟು ಧ್ವನಿಪೂರ್ಣಗೊಳಿಸಿ ವಿಡಂಬಿಸಿರುವುದು ದು. ಸರಸ್ವತಿ.

**ತೂಕಡಿಸುವ ಕಣ್ಣ ಇಗ್ಗಲಿಸಿ**
**ಪುಟ್ಟ ದೇಹವ ಕಟ್ಟಿಗೆಯಾಗಿ ದಹಿಸಿ**
**ಉರಿಬೆಂಕೀಲಿ ಕುದಿಗಾಜ**
**ಬಳೆಯಾಗಿಸಿ ಗರತೀರ**

**ಕೈಋಣಗುಟ್ಟಿಸುವ....**

**..................**

**ಗಾಳೀಲಿ ಬೆಳಕಿನ ಗೊಂಚಲ ಮಿಂಚಿಸಿ**
**ಜೋಡಿ ಕಂಗಳ ಹೊಳೆಸುವ**
**ಪಟಾಕಿ ಮಾಡುವ | ಚಿಣ್ಣರು | ಮಾಗದೆ ಹಣ್ಣಾದರು....**

**(ಪುಟ್ಟ ಹೊಟ್ಟೆಗಳು ಧನ್ಯವಾದವು - ಜೀವಸಂಪಿಗೆ - ಪುಟ ೪೯)**

ಕವನ ವಿವರಿಸುತ್ತಿರುವ ಮುಗ್ಧ ಮಕ್ಕಳು ಮಾಡುತ್ತಿರುವುದು ಅಪಾಯಕಾರಿ ಕೆಲಸಗಳನ್ನು. ಜೀವನಕ್ಕೆ ಯಾವುದೇ ಕ್ಷಣದಲ್ಲಾದರೂ ಆಪತ್ತು ಒದಗಬಹುದಾದ ಇಂತಹ ಕೆಲಸಗಳನ್ನು ಮಾಡುವ ಅನಿವಾರ್ಯತೆಯನ್ನು ಅವರ ಕೌಟುಂಬಿಕ ಪರಿಸ್ಥಿತಿಗಳು, ತನ್ಮೂಲಕ ಸಾಮಾಜಿಕ, ಆರ್ಥಿಕ ತಾರತಮ್ಯಗಳೇ ಸೃಷ್ಟಿ ಮಾಡಿವೆ. ಇವರು ಮಾಗದೇ ಹಣ್ಣಾದರು ಎಂಬ ರೂಪಕ ಅವರಿಗೆ ಒದಗುವ ಅಕಾಲಿಕ ಮುಪ್ಪು, ಅಕಾಲಿಕ ಸಾವುಗಳನ್ನು ಧ್ವನಿಸುತ್ತದೆ. ಆದರೂ 'ಒಪ್ಪತ್ತಿ ನೂಟಕೆ ಪುಟ್ಟ ಹೊಟ್ಟೆಗಳು ಧನ್ಯವಾದವು' ಎಂಬ ಕವನದ ಕೊನೆಯ ಸಾಲು ಬಡತನದ ಸ್ಥಿತಿಯನ್ನೇ ನೆನಪಿಸುತ್ತದೆ. ಇಂತಹ ದುಃಸ್ಥಿತಿಗೆ ಈ ಮಕ್ಕಳಾದರೂ ಕಾರಣರೆ. ತಮ್ಮದಲ್ಲದ ತಪ್ಪಿಗೆ ಪರಿತಪಿಸುತ್ತಿರುವ ಈ ಮಕ್ಕಳ ಸ್ಥಿತಿ ನಿರೂಪಕಿಯ ಮನಸ್ಸನ್ನು ಕಲಕಿದೆ. ಬಹುಶಃ ಆಕೆ ಕೂಡ ಏನೂ ಮಾಡಲಾಗದ ಅಸಹಾಯಕತೆಯನ್ನು ಅನುಸರಿಸುತ್ತಿರಬಹುದು. ಹಾಗಾಗಿ ಮಕ್ಕಳಿಗೆ ಕರೆ ಕೊಡುತ್ತಾಳೆ.

**ನಿಮ್ಮ**
**ನಾಳೆಗಳ ಹೊಸಕಿ**
**ಕೂಪಕೆ ಎಸೆದವರ**
**'ಇಂದು' ಚಿಂದಿಯಾಗಲೆಂದು**
**ಪುಟ್ಟ ಕಂಗಳ | ಕನಸ ಮಣಿಗಳ ಕಸಿದವರ**
**ನಿದ್ದೆ ಇಂಗಿ ಹೋಗಲೆಂದು**
**ರೊಟ್ಟಿಗಳ**
**ಜೀವ ಸುಡುವ ಬಂದೂಕಿನ ತುದಿಗೆ ನೇತಾಡಿಸುವವರ**
**ಹಸಿವು ಬತ್ತಿ ಹೋಗಲೆಂದು**
**ಜೋಗುಳದ ಹಾಡಿಗೆ ಜೋಳಿಗೆ ತಗುಲಿಸಿದವರ**
**ಪಾಡು ಕೇಡಾಗಲೆಂದು**
**ನೀವೊಮ್ಮೆ ಶಪಿಸಿ ಕಂದಮ್ಮಗಳೆ**

**(ನೀವೊಮ್ಮೆ ಶಪಿಸಿ - ಜೀವಸಂಪಿಗೆ - ಪುಟ ೪೨)**

ನೇರನುಡಿಯಲ್ಲಿಯೇ ಸನ್ನಿವೇಶ ಚಿತ್ರಣ ನೀಡುವ ಈ ಕವನ ನಿರಾಭರಣ ಸುಂದರಿಯಂತೆ ಸರಳವಾಗಿ ಕಾಣುತ್ತಿದ್ದರೂ ಸಂವೇದನೆಗಳು ಮಾತ್ರ ತೀವ್ರವಾಗಿ ತಟ್ಟುತ್ತವೆ. ಬರಿಯ ಶಾಪ ತಟ್ಟುವುದಾದರೆ ಹಗಲಿಡೀ ಶಾಪ ಹಾಕುತ್ತಲೇ ಇರಬಹುದಿತ್ತೇನೊ. ಇದು ಮನಸ್ಸಿನ ಸಮಾಧಾನಕ್ಕೆ ಹೊರತು ವಸ್ತುಸ್ಥಿತಿ ಬದಲಾಯಿಸುವ ಸಾಧ್ಯತೆಯಂತೂ ಇಲ್ಲ. ಸಹೃದಯ ಕವಯಿತ್ರಿಗೆ ಇಷ್ಟು ಸ್ಪಂದನೆ ಮಾತ್ರ ಸಾಧ್ಯವೇನೋ!

ಇನ್ನು ಆರ್ಥಿಕವಾಗಿ ಬಲಾಢ್ಯವಾದ ರಾಷ್ಟ್ರಗಳು, ಹಿಂದುಳಿದ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯ ಮೇಲೆ ನಡೆಸುವ ದಬ್ಬಾಳಿಕೆಯನ್ನು ಸವಿತಾ ನಾಗಭೂಷಣ ಅವರು ಒಂದು ಸಂವಾದದ ಮೂಲಕ ನಿರೂಪಿಸುತ್ತಾರೆ.

ತಂಗಿ.....

ಪೇರುಪೇಟೆ ಕುಸಿಯುತಿದೆ

ಮಾರುಕಟ್ಟೆ ನಡುಗುತಿದೆ...

ಕರಡಿಯೊಂದು ಕುಣಿಯುತಿದೆ

ಗೂಳಿಯೊಂದು ತಿವಿಯುತಿದೆ

ಗುಳ್ಳೆಯೊಂದು ಒಡೆಯುತಿದೆ

ಕೊಳ್ಳೆಯೊಂದು ಕರಗುತಿದೆ.

ಅಕ್ಕ......

ಪುಟ್ಟ ಮೀನು ಭಾರಿ ಹಡಗನ್ನು

ಮುಳುಗಿಸುವುದಂತೆ ನಿಜವೇನೇ?

.......................................

ಗೆದ್ದಲುಹುಳು ಭಾರಿ ಸೌಧವನ್ನು

ಕಬಳಿಸುವುದಂತೆ ನಿಜವೇನೇ?

(ಪೇರು ಪೇಟೆ ಕುಸಿಯುತಿದೆ - ದರುಶನ - ಪುಟ ೫೭)

ಹೀಗೆ ಕವನ ಮುಂದುವರಿದು ಕೊನೆಯಲ್ಲಿ ತಾನು ಕುಡಿಕೆಯಲಿ ಕೂಡಿಟ್ಟ ಹಣ ನನಗೆ ಸಾಕು ಎಂಬ ಆಶಯದೊಂದಿಗೆ ಮುಗಿಯುತ್ತದೆ. ಬುಡಬುಡಕೆಯವನು ಕಣಿ ಹೇಳುವ ರೀತಿಯಲ್ಲಿ ಮಾರುಕಟ್ಟೆ ಪರಿಸ್ಥಿತಿಯನ್ನು ವಿವರಿಸಲಾಗಿದೆ. ಜನರನ್ನು ಆತಂಕದ ಸ್ಥಿತಿಯಲ್ಲಿಡಲು ಬೃಹತ್ ಕಂಪನಿಗಳು, ಶ್ರೀಮಂತ ದೇಶಗಳು ಬಳಸುವ ತಂತ್ರವಿದು. ಇಂತಹ ಸುದ್ದಿಗಳಿಂದ ಹೆದರಿಕೊಳ್ಳುವ ಜನರು ವಿವೇಚನೆ ಕಳೆದುಕೊಂಡವರಂತೆ ಮಾರುಕಟ್ಟೆ ನಿಯಂತ್ರಿಸುವವರ ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ. ಈ ಕೆಟ್ಟ ಸ್ಥಿತಿಯನ್ನು ಮುಖ್ಯವಾಗಿ ಜಾಗತೀಕರಣ ಪ್ರಕ್ರಿಯೆಯನ್ನು ಕೆಲವು ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸಲಾಗಿದೆ. ಪುಟ್ಟ ಮೀನು ಭಾರಿ ಹಡಗನ್ನು, ಪುಟ್ಟ ಹಕ್ಕಿ ಭಾರಿ ವಿಮಾನವನ್ನು, ಗೆದ್ದಲು ಬೃಹತ್ ಕಟ್ಟಡವನ್ನು ಉರುಳಿಸುವ ದೃಷ್ಟಾಂತ ನೀಡಲಾಗಿದೆ. ಈ ದೃಷ್ಟಾಂತಗಳೆಲ್ಲವೂ ರೂಪಕಗಳಾಗಿ ಕೆಲವೇ ಬಹುರಾಷ್ಟ್ರೀಯ ಕಂಪನಿಗಳು, ಅವುಗಳ ಹಿನ್ನೆಲೆಯಿಂದ ಕೆಲವೇ ಶ್ರೀಮಂತ ದೇಶಗಳು, ಶ್ರೀಮಂತರು ಮಾರುಕಟ್ಟೆಯನ್ನು ನಿಯಂತ್ರಣ ಗೊಳಿಸುವುದನ್ನು ತನ್ಮೂಲಕ ಬಹುಸಂಖ್ಯೆಯ ಬಡ-ಮಧ್ಯಮವರ್ಗಗಳ ಹಣಕಾಸಿನ ಪರಿಸ್ಥಿತಿಗಳನ್ನು ನಿಯಂತ್ರಿಸಿವುದನ್ನು ಸೂಚಿಸುತ್ತವೆ. ಇಲ್ಲಿ ಹೆದರಿಸುತ್ತಿರುವ ತಂಗಿ, ಹೆದರಿದಂತೆ ಕಂಡರೂ ದಿಟ್ಟ ಉತ್ತರ ನೀಡುವ ಅಕ್ಕ ಶ್ರೀಮಂತರ ಮತ್ತು ಬಡದೇಶಗಳಾಗಿ ಕಾಣುತ್ತಿವೆ. ಸ್ವಾವಲಂಬಿ ಜೀವನ ನಡೆಸಲು ಹಣಕ್ಕಿಂತಲೂ ಮುಖ್ಯವಾಗಿ ಬೇಕಾಗಿರುವುದು ಸರ್ವರೀತಿಯ ಸಮಾಧಾನಕರ ಸ್ಥಿತಿ. ಅದಕ್ಕೆ ಮಿತದಲ್ಲೆಯೇ ಹಿತವನ್ನು ಸಾಧಿಸುವ ಗುಣವಿರಬೇಕು. ಹೀಗೆ ಸಾಮಾಜಿಕ, ಆರ್ಥಿಕ ವ್ಯವಹಾರಗಳಲ್ಲಿ ಕೆಳವರ್ಗದ ಜನರು ಪಡುವ ಬವಣೆಗಳಿಗೆ ಮಹಿಳಾಕಾವ್ಯ ತೀವ್ರವಾಗಿ ಸ್ಪಂದಿಸಿದೆ.

### ಆ. ಲಿಂಗಸಂಬಂಧಿ ದಮನಗಳೊಂದಿಗೆ ಮುಖಾಮುಖಿ

ದೇಶ, ಧರ್ಮ, ಜಾತಿ, ವರ್ಗಗಳ ನಡುವಿನ ತಾರತಮ್ಯಗಳು ಒಟ್ಟಾರೆ ಸಮಾಜವನ್ನು ಪ್ರಭಾವಿಸಿದರೆ, ಈ ಪ್ರತಿಯೊಂದು ವಲಯದೊಳಗೂ ಹೆಣ್ಣಿನ ಸ್ಥಾನಮಾನಗಳು ಮಾತ್ರ ಎರಡನೇ ದರ್ಜೆಯವೆ. ಸಿಮೋನ್ ದಿ ಬೊವಾ ಹೇಳುವಂತೆ 'ಹೆಣ್ಣನ್ನು ರೂಪಿಸಲಾಗುತ್ತದೆ'. ಪ್ರಾಕೃತಿಕ, ಸೃಷ್ಟಿಯ ಭಿನ್ನತೆಯ ಕಾರಣದಿಂದ ಜೀವಶಾಸ್ತ್ರೀಯವಾಗಿ ಹೆಣ್ಣು ಗಂಡಿಗಿಂತ ಭಿನ್ನವಾದ ದೇಹ ಲಕ್ಷಣಗಳನ್ನು ಪಡೆಯುತ್ತಾಳೆ. ಈ ಮೂಲಭೂತವಾದ ಭಿನ್ನತೆಯೊಂದರ ಮಾನದಂಡದಿಂದ ಅವಳ ಬದುಕಿನ ಹಲವು ಸ್ತರಗಳಲ್ಲಿ ಅವಳ ವ್ಯಕ್ತಿತ್ವವನ್ನು ದಮನಿಸುವ ಪ್ರಕ್ರಿಯೆ ನಡೆಯುತ್ತದೆ. ಆಧುನಿಕ ನಾಗರಿಕ ಪ್ರಪಂಚದಲ್ಲಿ ಇದು ಪ್ರಾರಂಭವಾಗುವುದು ಮಗು ಇನ್ನೂ ಗರ್ಭಾವಸ್ಥೆಯಲ್ಲಿರುವಾಗಲೇ. ತಾಯಿಯ ಹೊಟ್ಟೆಯಲ್ಲೇ ತನ್ನನ್ನು ಹಿಸುಕಿಹಾಕುವ ಕ್ರೌರ್ಯವನ್ನು ಮಗುವಿನ ಬಾಯಿಂದಲೇ ಮನಮುಟ್ಟಿಸುತ್ತಿದ್ದಾರೆ ಮಾಧವಿ ಭಂಡಾರಿ.

**"ಅಪ್ಪಾ ಬೆಳಬೆಳಗ್ಗೆ ಬಡಬಡಿಸಿ**
**ದೇವಸ್ಥಾನದೆಡೆಗೆ ಹೋದರಲ್ಲಮ್ಮಾ**
**ಸ್ಕ್ಯಾನಿಂಗ್ ಇದೆ ಎಂದು,**
**ಹಾಗೆಂದರೇನಮ್ಮಾ?**
**ಕೈಕಾಲು ಬಲಿಯುವ ಮುನ್ನವೆ । ನನ್ನ ಕತ್ತಹಿಸುಕುವ**
**ಹುನ್ನಾರವೇನಮ್ಮಾ?**

**(ಹೊಟ್ಟೆಯೊಳಗಿನ ಕಂದ - ಹರಿದ ಸ್ಕರ್ಟಿನ ಹುಡುಗಿ - ಪುಟ ೩೦)**

ಹೆಣ್ಣಾಗಿಯೂ ತನ್ನ ಹೊಟ್ಟೆಯೊಳಗೆ ಹೆಣ್ಣು ಮಗುವನ್ನು ಉಳಿಸಿಕೊಳ್ಳಲಾಗದ್ದಕ್ಕೆ ತಾಯಿಯ ಅಸಹಾಯಕತೆ ಏನು ಎನ್ನುವುದನ್ನು ಕೂಡ ಕವನ ಮುಂದೆ ವಿವರಿಸುತ್ತದೆ. ಇಂತಹ 'ಬಲಿ'ಯನ್ನು ಪ್ರತಿಭಟಿಸಿದರೆ ತನ್ನ ಜೀವನಕ್ಕೆ ಕುತ್ತು. ಹೀಗೆ ಲಿಂಗದ ಕಾರಣದಿಂದಾಗಿ ಹೆಣ್ಣು ಮಗು ಹುಟ್ಟುವ ಪೂರ್ವದಲ್ಲಿಯೇ ಕಣ್ಮರೆಯಾಗುವ ಕ್ರೌರ್ಯವನ್ನು ಇನ್ನಷ್ಟು ಧ್ವನಿಪೂರ್ಣವಾಗಿಸಿದ್ದಾರೆ ರೂಪ ಹಾಸನ.

**ಹಲವುಳಿದ ಅಶರೀರ ಹೆಣ್ಣು ಭ್ರೂಣಗಳ ಆಕ್ರಂದನ**
**ಮಿಡಿವ ಎದೆ ನರಳಿ, ಮಿಕ್ಕವರಿಗೆ ಖಾಲಿ ಮೌನ**
**ಅಮ್ಮಾ... ಅಮ್ಮಾ.... ಗಾಳಿಯೊಡಲು ಸೀಳಿ**
**ತೇಲಿ ಬರುವ ನೂರಾರು ಹೆಣ್ಣು ಉಲಿ**

**ಗರ್ಭದೊಳಗೇ ಜೀವ ಅಸ್ಪಷ್ಟ ರೂಪವಾದಂತೆ**
**ಕೊಬ್ಬಿದ ಕುರಿಯ ಕಟುಕ ಕಚಕ್ಕನೆ ಕತ್ತರಿಸಿದಂತೆ**
**ಮೃತ್ಯುರೂಪ ನಿರ್ದಾಕ್ಷಿಣ್ಯದಿ ಜೀವ ತುಂಡರಿಸಿ**
**ಎದೆಯೊಳಗಿನ ಭಾವಗಳ ನಿಮಿಷಾರ್ಧದಿ ಒರೆಸಿ**

...........................................................

**ಹಸಿ ಹಸಿ ಮೊಟ್ಟೆ ಕುಡಿದು ಜೀವ ಬಸಿವ**
**ನರರಾಕ್ಷಸರ ಈ ರುದ್ರ ತಾಂಡವ!**

**(ಅಶರೀರ ಜೀವ - ಒಂದಿಷ್ಟು ಹಸಿಮಣ್ಣು - ಪುಟ ೨೬)**

'ಭ್ರೂಣಹತ್ಯೆ'ಯಂತಹ ಕ್ರೌರ್ಯವನ್ನು ಅದರ ರಾಕ್ಷಸಿಮುಖಗಳೊಡನೆ ವಿವರಿಸುವ ಈ ಕವನದೊಳಗಿನ 'ಹಸಿ ಹಸಿ ಮೊಟ್ಟೆ ಕುಡಿವ', 'ಅಶರೀರ ಹೆಣ್ಣು' ರೂಪಕಗಳು, ಕೊಬ್ಬಿದ ಕುರಿಯ ಕತ್ತರಿಸುವ ಕಟುಕನ ಉಪಮೆ ಕೌರ್ಯದ ಹಸಿ ಅನುಭವ ಕಣ್ಣಿಗೆ ಕಟ್ಟುವಂತೆ ಮಾಡಿದೆ.

ಇನ್ನು ಹುಟ್ಟಿದ ನಂತರದ ಸ್ಥಿತಿ ಇನ್ನೊಂದು ಬಗೆಯದು :

**ಅವಳು ಮಗುವಾಗಿ**
**ಹೆಣ್ಣಾಗಿಮಾಗಿ**
**ಮುದುಕಿಯಾಗಿ**
**ಮೊಗ್ಗಾಗದೆ**
**ಹೂವಾಗದೆ ಕಾಯಿ**
**ಹಣ್ಣಾಗದೆ | ಮಣ್ಣಿಗೆ ತುಟಿ ಒತ್ತಿ ಮಲಗಿದಳು**

**(ಅವಳು - ನೀರತೇರು - ಕವಿತಾ ರೈ - ಪುಟ ೫೯)**

ಹಣ್ಣಾಗದೆ ಮಾಗುವ ಅಕಾಲಿಕ ಪರಿವರ್ತನೆ ಕೂಡ ತನ್ನದೇ ರೀತಿಯಲ್ಲಿ ಬೆಳೆಯುವ ಸ್ವಾತಂತ್ರ್ಯ ಹೆಣ್ಣುಮಕ್ಕಳಿಗೆ ಇರದಿರುವುದಕ್ಕೆ. ಇದಕ್ಕೆ ಕಾಲ ದೇಶಗಳ ವ್ಯತ್ಯಾಸವಿಲ್ಲ ಎನ್ನುವುದನ್ನು ಮಾಲತಿ ಪಟ್ಟಣಶೆಟ್ಟಿಯವರು ವಿವರಿಸುವುದು ಹೀಗೆ :

**ಒಬ್ಬರಿಬ್ಬರ ಕತೆ ಇದಲ್ಲ**
**ಮನೆಮನೆಯ ಗತಿಯೇ ಇದೆಲ್ಲ**
**ನುಗ್ಗಾದೆ ಮುಗ್ಗಾದೆ**
**ಬಗ್ಗಿ ಬಗ್ಗಿ ಅಗ್ಗವಾದೆ**
**ಬಾಯಿಲ್ಲದೆ ಕುಗ್ಗಿ ಹೋದೆ**
**ಕಾಲ ಕಸವಾದೆ ಜೀವಂತ ಹುಸಿಯಾದೆ!**

**(ಮೌನ ಕರಗುವ ಹೊತ್ತು - ಹೂದಂಡಿ - ಪುಟ ೨೩)**

ವಿವರಣೆಗಳು ವಾಚ್ಯವೆನ್ನಿಸಿದರೂ ಒಳಗಿನ ಸತ್ಯದ ಕಾರಣದಿಂದ ಹೆಣ್ಣಿನ ಮನಸ್ಥಿತಿ, ಪರಿಸ್ಥಿತಿಗಳ ನೈಜ ವಿವರಣೆಯಿಂದ ಕವನ ಗಮನ ಸೆಳೆಯುತ್ತದೆ. ಸಾಮಾಜಿಕವಾಗಿ ಕುಟುಂಬ, ನೆರೆಹೊರೆಗಳು ಹೆಣ್ಣನ್ನು ಹೀಗೆ ನಡೆಸಿಕೊಳ್ಳುವುದೇನೋ ಸರಿ. ಎಲ್ಲರಲ್ಲೂ ಅಜ್ಞಾನದತ್ತ ಕೊಂಡೊಯ್ಯುವ ಶಿಕ್ಷಣ ವ್ಯವಸ್ಥೆಯೊಳಗೂ ಅಂದರೆ ಲಿಖಿತ ಲೋಕದಿಂದಲೇ ಇಂತಹ ತಾರತಮ್ಯವಿದೆ ಎನ್ನವುದಕ್ಕೆ ಚ. ಸರ್ವಮಂಗಳ ನಿದರ್ಶನ ನೀಡುತ್ತಾರೆ.

'ಅವನು ಬಸವ ಅವಳು ಕಮಲ,
ಬಸವ ಅಪ್ಪನೊಂದಿಗೆ ಮಾಡುವ । ತೋಟದ ಕೆಲಸ
ಕಮಲ ಅಮ್ಮನೊಂದಿಗೆ ಮಾಡುವಳು । ಅಡಿಗೆ ಕೆಲಸ
..............................................
ಬಸವನಿಗೆ ಕೋಡಿದ್ದರೇನು?
ಕಮಲ ಅರಳುವುದಿಲ್ಲವೇ ಬೆಳೆಯುತ್ತ?
ಅರಳಿದ ಕಮಲಳ ಮುಂದೆ ಜಿನುಗಿ
ಸೋರುವುದಿಲ್ಲವೆ ಕೋಡಿನ ಬಿಗುಮಾನ?
ಬಸವನ ಗಂಡಸ್ತನಕ್ಕೆ ಒತ್ತಿ ಮುದ್ರೆ
ಚಲಾವಣೆಗೆ ತರೋಳು ಕಮಲ ಅಲ್ಲವೇ?

(ಅವನು ಬಸವ - ಅಮ್ಮನಗುಡ್ಡ - ಪುಟ ೨೨)

ವ್ಯಂಗ್ಯದ ಧಾಟಿಯಲ್ಲಿರುವ ಈ ಕವನ ಸಾಮಾಜಿಕವಾಗಿ ಬಸವನಿಗಿರುವ ಮನ್ನಣೆಯನ್ನು, ಕಮಲಳಿಗಿರುವ ಹಿನ್ನಡೆಯನ್ನೂ ತೆರೆದಿಡುತ್ತವೆ. ಆದರೆ ಬಸವ ಕೋಲೆ ಬಸವನಾಗುವ, ಕಮಲ ಕೆಸರಿನಲ್ಲಿ ಅರಳುವ ತಾವರೆಯಾಗುವ ಸಾಧ್ಯತೆಯನ್ನು ತಳ್ಳಿ ಹಾಕುವುದಿಲ್ಲ. ಬಾಹ್ಯವಾದ ಇಂತಹ ತರತಮದ ಧೋರಣೆಗಳು ಹೆಣ್ಣಿನ ನೈಜ ಶಕ್ತಿಯನ್ನೇನೂ ಕುಂದಿಸುವುದಿಲ್ಲ ಎಂಬ ದಿಟ್ಟ ಉತ್ತರವನ್ನೂ ಕವನ ಅಂತರ್ಗತ ಮಾಡಿಕೊಂಡಿದೆ.

ಮದುವೆ, ತಾಯ್ತನದಲ್ಲೂ ಹೆಣ್ಣಿನ ಆಯ್ಕೆಗೆ ಪ್ರಾಶಸ್ತ್ಯವಿಲ್ಲದಿರುವುದನ್ನೂ ಕೂಡ ಮಹಿಳಾ ಕಾವ್ಯ ಕಂಡರಿಸುತ್ತದೆ.

ಗಿಡವೆಂದು ಬಗೆದೆಯೊ
ಹೆಣ್ಣು ಜನ್ಮದ ಒಡಲ
ಫಲಗಳನು ಸೃಜಿಸುವುದಕೆ
ಕವಣೆ ಕಲ್ಲೊ ನಿನ್ನ
ಮಾನಸವು ಎಲೆ ದೇವ
ಈ ಕ್ರಮವೆ ಸ್ತ್ರೀ ವರ್ಗಕೆ....

(ಚಂಡಶಾಸನ - ಕಲ್ಯಾಣ - ಪುಟ ೧೨೦)

ಇಲ್ಲಿ ಕಾಣದ ಶಕ್ತಿಯಲ್ಲಿ ಮೊರೆಯಿಡುವ ಜಾನಕಮ್ಮನವರ ಕವನ, ಸಂತಾನ ಪಡೆಯುವುದು ಇತರ ಜೀವಿಗಳಂತೆ ನೈಸರ್ಗಿಕ ಕ್ರಿಯೆ ಮಾತ್ರವಾಗಿ ಉಳಿಯದೆ ಮನುಷ್ಯರ ವಿಷಯದಲ್ಲಿ ಅದೊಂದು ಸಾಮಾಜಿಕ ಸಂಗತಿಯೂ ಆಗಿ ಅದರ ಉಸ್ತುವಾರಿಯನ್ನೆಲ್ಲ ಹೆಣ್ಣಿನ ತಲೆಗೆ ಕಟ್ಟಿರುವ ಕ್ರಮವನ್ನು ಪ್ರಶ್ನಿಸುತ್ತಿದ್ದಾರೆ. ಇಂತಹ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದುದು ಯಾರು?

ಯಾರು ವ್ಯವಸ್ಥೆಯ ಹೊಣೆಗಾರರೋ ಅವರಿಂದ ಉತ್ತರ ದೊರೆಯಲಾರದು ಎಂಬ ನಂಬಿಕೆಯಿಂದಲೋ ಏನೋ ಈ ಕವಯಿತ್ರಿ ಕಾಣದ ಶಕ್ತಿಯಲ್ಲಿ ಮೊರೆಯಿಡುವ ಪರಂಪರಾಗತ ಕ್ರಮ ಅನುಸರಿಸುತ್ತಾರೆ.

ಎಲ್ಲ ಬಗೆಯ ಬಲಿದಾನಗಳು 'ಸ್ತ್ರೀ'ಯೆ ಆಗಿರುವ ಪೌರಾಣಿಕ, ಜಾನಪದೀಯ ಕಥೆಗಳ ಶೋಷಣೆಯನ್ನು ತಾರಿಣಿ ಶುಭದಾಯಿನಿಯವರು ಪ್ರಶ್ನಿಸುತ್ತಾರೆ.

**ಸತ್ತು ಸೆಲೆ ಬರಿಸುವ ಸೊಸೆ**
**ಸತ್ತು ಕಂಬ ನಿಲ್ಲಿಸುವ ಹೆಣ್ಣು**
**ಊರಭಾರಕ್ಕೆ ನೀನು**
**ಯಾಕೆ**
**ಗಂಡಸಿನ ದುಃಖಕ್ಕೆ**
**ಗೌರಿಯೇ ಯಾಕೆ?**

**(ಬಲಿ - ಚಿತ್ತಗ್ಲಾನಿಯ ಮಾತು - ಪುಟ ೫೭)**

ಇಲ್ಲಿ ಗರ್ಭಿಣಿ ಭಾಗೀರಥಿಯನ್ನು ಬಲಿ ನೀಡಿದ ಜಾನಪದ ಪ್ರಸಂಗವೂ ಸೇರಿದಂತೆ ತ್ಯಾಗ-ಬಲಿದಾನಗಳ ಹೆಸರಿನಲ್ಲಿ ಮಹಿಳೆಯನ್ನು 'ಬಲಿ'ಯಾಗಿಸಿ ಆದರ್ಶಗಳ ಹೆಸರಿನಲ್ಲಿರುವ ಇಂತಹ ಜೀವವಿರೋಧಿ ಕೃತ್ಯಗಳನ್ನು ಖಂಡಿಸುತ್ತಾರೆ. ಹಾಗೆಯೇ ಶಾಸ್ತ್ರಗಳಲ್ಲಿ ಹೆಣ್ಣಿನ ಕಾರ್ಯ ವೈಖರಿಯ ಬಣ್ಣನೆಯನ್ನು ಕುರಿತೂ ಸಹ ಇಂತಹುದೇ ಪ್ರತಿಕ್ರಿಯೆ ಚೇತನಾ ತೀರ್ಥಹಳ್ಳಿಯವರದ್ದು.

**ಯಾವತ್ತೂ ಕೇಳಿಲ್ಲ**
**ಕಾರ್ಯೇಷು ದಾಸ, ಶಯನೇಶುವಿಟನನ್ನು**
**ನಿಯತ್ತಿನ ಯಾವ ಸೂಳೆಯೂ ಇಲ್ಲಿ**
**ಸಾವಿರಗಳನೆಣಿಸಿಲ್ಲ; ಗರತಿ ಕೂಡಾ**
**ಬೆಂಕಿಗೆ ಸೀತೆಯನ್ನು ಸುಡಲಾಗಲಿಲ್ಲ | ರಾಮನ ಸಂಶಯವನ್ನೂ...**
**ಶಂಭೂಕರು ಮತ್ತು ಸೀತೆಯರನ್ನು ಗೋಳಾಡಿಸುವ ನೆಲಕ್ಕೆ**
**ನೆಮ್ಮದಿ ಮರೀಚಿಕೆ**

**(ರಾಮಂದಿರು, ಸೀತೆಯರು ಮತ್ತು ಶಬರಿಯ ಅವಸರ - ಪುಟ ೪೦)**

ಹೆಣ್ಣಿಗೆ ಸಮಾಜ ಕೊಡಮಾಡುವ ಯಾವ ಸ್ಥಾನದಿಂದಲೂ ಪ್ರಗತಿಯಿಲ್ಲ. ಗರತಿ-ಸೂಳೆ ಒಂದು ಆದರ್ಶ; ಇನ್ನೊಂದು ಅನೈತಿಕ; ಒಂದಕ್ಕೆ ಪುರಸ್ಕಾರ. ಇನ್ನೊಂದನ್ನೇ ತಿರಸ್ಕಾರ. ಹೋಗಲಿ ಇದರಿಂದ ಗಳಿಸಿದ್ದೇನಾದರೂ ವ್ಯತ್ಯಾಸವಾಗಿದೆಯೇ ಎಂದು ಆಲೋಚಿಸಿದರೆ ಇಬ್ಬರ ಸ್ಥಿತಿಯಲ್ಲೇನೂ ಬದಲಾವಣೆ ಇಲ್ಲ. ಒಬ್ಬಾಕೆ ಸಂಸಾರದಲ್ಲಿ ಬಂಧಿತೆ, ಇನ್ನೊಬ್ಬಾಕೆ ಸಮಾಜದಿಂದ ನಿರ್ಬಂಧಿತೆ. ಸೀತೆ ಅಗ್ನಿಪ್ರವೇಶ ಮಾಡಿ ತನ್ನ ಪಾತಿವ್ರತ್ಯ ಪ್ರದರ್ಶಿಸಿದರೂ ರಾಮನ ಸಂಶಯಕ್ಕೆ ಕಾಡಿಗೆ ಹೋಗುವುದನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ಮೂರನೆಯ ವ್ಯಕ್ತಿಯ ಮಾತಿಗಾಗಿ, ಹೆಂಡತಿಯ

ವ್ಯಕ್ತಿತ್ವವನ್ನು ಎತ್ತಿಹಿಡಿಯಲಾಗದ ಗಂಡಿನ ದೌರ್ಬಲ್ಯ ಎಲ್ಲ ಕಾಲಕ್ಕೂ ಇರುವಂತಹುದು. ಇದರಿಂದ ಈ ನಾಡಿಗೆ ನೆಮ್ಮದಿ ಇಲ್ಲ ಎಂಬ ನಿರೂಪಕಿಯ ಅನಿಸಿಕೆ ಶಂಭೂಕನಂತಹ ಕೆಳವರ್ಗದ, ಮಹಿಳೆಯರ ಮೇಲೆ ಒಟ್ಟಾರೆ ನಡೆಯುವ ದೌರ್ಜನ್ಯವನ್ನು ಹಂಗಿಸುತ್ತದೆ. ದೈಹಿಕ ಕಾರಣದಿಂದ ಹೆಣ್ಣು ಅನುಭವಿಸುವ ಮುಜುಗರವನ್ನು ಭಾಗ್ಯ ಜಯಸುದರ್ಶನ ಅವರು ಹೀಗೆ ಟೀಕಿಸುತ್ತಾರೆ.

**ಕಂಡದ್ದಕ್ಕೆಲ್ಲಾ ಕಣ್ಣು ಕಿಚಾಯಿಸಿ**
**ಕ್ಯಾಮರಾದಲ್ಲಿ ಸೆರೆ ಹಿಡಿಯುತ್ತೀರಿ**
**ಉಬ್ಬು, ತಗ್ಗು, ಏರಿಳಿತ**
**ಸ್ವರ್ಗ ಸೀಮೆಗಳನು ದಾಟಿ ವಿಹರಿಸುತ್ತೀರಿ । ಕ್ಷಣದಲಿ**
**ಉಮರರಾಗಿ ಬಿಡುತ್ತೀರಿ**

**(ಪುರುಷ ಪ್ರಪಂಚ - ಭಾವಸಿಂಚನ - ಪುಟ ೨೩)**

ಹೆಣ್ಣಿನ ದೇಹವೆಂದ ಕೂಡಲೇ ಜೊಲ್ಲು ಸುರಿಸುವ ಗಂಡಿನ ಪ್ರವೃತ್ತಿ ಮತ್ತು ಮೇಲ್ನೋಟದಲ್ಲಿ ಮಾತ್ರ ಸಾತ್ವಿಕರಂತೆ ತೋರಿಸಿಕೊಳ್ಳುವ ಆಷಾಢಭೂತಿತನವನ್ನು ಇಲ್ಲಿ ಹೇಳಲಾಗಿದೆ. ಸಾಧುಸಂತರು, ಮಠಮಾನ್ಯಗಳ ಮುಖ್ಯಸ್ಥರು, ಸರ್ವಸಂಗ ಪರಿತ್ಯಾಗಿಗಳೆಂದು ಬಿಂಬಿಸಿಕೊಂಡು, ಹೆಣ್ಣನ್ನು ತಮ್ಮ ಅಧಿಕಾರ, ಹಣದ ಬಲದಿಂದ ದುರ್ಬಳಕೆ ಮಾಡಿಕೊಳ್ಳುವವರನ್ನೂ ಒಳಗೊಂಡಂತೆ ಈ ಪ್ರಸಂಗವನ್ನು ವಿಸ್ತರಿಸಬಹುದಾಗಿದೆ. ಇನ್ನು ಹೆಣ್ಣಿನ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯ ಭಾರತೀಯ ಪರಂಪರೆಯಲ್ಲಿ ಹೆಜ್ಜೆ ಹಾಕುತ್ತಿರುವವರಿಗಂತೂ ಇನ್ನಿಲ್ಲದ ಹಿಂಸೆ ನೀಡುವ ಸಂಗತಿಯಾಗಿದೆ.

**ಸಿಹಿ ನದಿಗೆ ಉಪ್ಪು ತೆರೆದ ಎದೆ**
**ಉಪ್ಪಿನ ಕಡಲಿಗೆ ಸಿಹಿ ನುಂಗುವ ಬೆದೆ**
**ಕೊನೆಗೆ ಉಳಿದದ್ದು ಉಪ್ಪೇ ಉಪ್ಪು**
**ನದಿಯ ಕೋಮಲಕಾಯ । ಮುಳುಗಿ ಇಲ್ಲವಾಗಿಸಿತು**
**ಸಾಗರದ ಆ ಮಹಾಕಾಯ**

**('ಸಮುದ್ರ - ನದಿ' - ಉಳಿದದ್ದು ಆಕಾಶ - ಪುಟ ೨೬)**

ಇಲ್ಲಿ ನದಿಯ ಸಿಹಿ ಹೆಣ್ತನದ ರೂಪಕವಾದರೆ, ಸಮುದ್ರದ ಉಪ್ಪು ಪುರುಷನ ಗಂಡಸಿನ ರೂಪಕವಾಗಿದೆ. ಉಪ್ಪಿನ ಸಹವಾಸ ಮಾಡಿದ ನದಿ ತನ್ನ ಸಿಹಿಯನ್ನು ಮತ್ತೆಂದೂ ಪಡೆಯಲಾರದ್ದು ಇದು ಪರಪುರುಷನಿಂದಾಗುವ ದೌರ್ಜನ್ಯವಾದರೆ, ಇನ್ನು ಕೌಟುಂಬಿಕ ವಲಯದೊಳಗಿನ ದೌರ್ಜನ್ಯವನ್ನು ಪ್ರತಿಭಾ ನಂದಕುಮಾರ್ ಅವರ ಕವನ ಧ್ವನಿಪೂರ್ಣವಾಗಿ ಹಿಡಿದಿಡುತ್ತದೆ.

**ಎಲ್ಲಿದ್ದೀಯೇ ನೈನಾ**
**ಇಲ್ಲೇ ಇದ್ದೀನಪ್ಪಾ**
**ಕಾಟ್‌ಕಾಂಡೋಮ್ ಕ್ಯಾರಿಬ್ಯಾಗ್**

**ಇಲ್ಲೇ ಇವೆಯಪ್ಪಾ**

**ಊಟಕ್ಕೇನೇ ನೈನಾ**

**ರೊಟ್ಟಿ ತಂದೆಯೇನೇ**

**ಬೇಯ್ತಾ ಇದ್ದೀನಪ್ಪಾ**

**ಶರ್ಮ ತರ್‍ತಾನಪ್ಪ**

**(ನೈನಾಸಾಹ್ನಿ - ಆಯ್ದ ಕವಿತೆಗಳು, ಪುಟ ೫೯)**

ಇಲ್ಲಿ ಅಪ್ಪ ಶರ್ಮನಾಗುವ ವಿಪರ್ಯಾಸದೊಂದಿಗೆ, ಯಾವುದು ತನ್ನ ಮಾನ, ಪ್ರಾಣದ ರಕ್ಷಾಬಲವಾಗಿರಬೇಕಿತ್ತೋ ಅಂತಹ ಸಂಬಂಧವೇ ತನ್ನನ್ನು ಮಾರಾಟಕ್ಕಿಡುವ ಪರಿ ಕೂಡ ವಿಪರ್ಯಾಸವೇ ಸರಿ. ಹೀಗೆ ತಾಯಿಯಾಗಿ, ಹೆಂಡತಿಯಾಗಿ ಕೊನೆಗೆ ಮಗಳಾಗಿ ಹೆಣ್ಣು ಎದುರಿಸುವ ಎಲ್ಲ ವಿಧದ ದಮನಗಳನ್ನೂ ಕೂಡ ಮಹಿಳಾ ಕಾವ್ಯ ಎದುರುಗೊಳ್ಳುತ್ತದೆ. ಕೊನೆಗೊಂದು ಎಚ್ಚರಿಕೆಯ ಸಂದೇಶ ಕೂಡ ಇದೆ. ಡಾ. ವಿನಯಾ ತಮ್ಮ ಕವನವೊಂದರಲ್ಲಿ ಇಂತಹ ಎಚ್ಚರಿಕೆಯ ಸಂದೇಶ ನೀಡುತ್ತಾರೆ.

**ಒಂದಲ್ಲ ಒಂದು ದಿನ**

**ಈ ನೆಲದ ತುಂಬ ಹೆಣ್ಣುಗಳು**

**ಮೆರವಣಿಗೆ ಹೊರಡುತ್ತಾರೆ**

**ದೇಹದಗುಂಟ ಹರಿದ**

**ನೆತ್ತರಿನ ಚರಿತೆ ತೊಳೆಯಲು**

**ಹೊಸ ನದಿಯ ಹುಡುಕಿ ನಡೆಯುತ್ತಾರೆ.**

**(ಹೊಸ ನದಿಯ ಹುಡುಕಿ - ನೂರು ಗೋರಿಯ ದೀಪ - ಪುಟ ೧)**

ಇಂದು ಭೌತಿಕವಾಗಿ ಸಾಧ್ಯವಾಗುತ್ತಿರುವ ಅನೇಕ ನಿದರ್ಶನಗಳು ನಮ್ಮ ಕಣ್ಣ ಮುಂದಿವೆ. ಶಿಕ್ಷಣ, ಉದ್ಯೋಗಗಳ ಮೂಲಕ ತಮ್ಮ ಅಸ್ಮಿತೆಯನ್ನು ಗಟ್ಟಿಗೊಳಿಸಿಕೊಂಡಿರುವ ಮಹಿಳೆಯರು ದೌರ್ಜನ್ಯ, ಅಸಮಾನತೆಗಳ ವಿರುದ್ಧ ಧರಣಿ ನಡೆಸುತ್ತಾರೆ. ಮೇಲಾಗಿ ಇದು ಭೌತಿಕವಾಗಿಯೇ ಕಾಣಿಸಿಕೊಳ್ಳಬೇಕೆಂದೇನೂ ಇಲ್ಲ. ಹೊಸ ನದಿಯ ಹುಡುಕಾಟ ಮಾನಸಿಕವಾಗಿಯೇ ಆದರೂ ಅವರ ಜ್ಞಾನಲೋಕ ವಿಸ್ತಾರವಾಗುತ್ತದೆ. ತನ್ಮೂಲಕ ತಮ್ಮನ್ನು ತಾವು ಕಾಪಾಡಿಕೊಳ್ಳುವ ಸ್ಥೈರ್ಯವಾದರೂ ಹೆಚ್ಚುತ್ತದೆ.

### ೪.೫. ಶೋಧದ ನೆಲೆ

'ಶೋಧ' ಎಂದರೆ ಹುಡುಕುವುದು. ಇರುವುದನ್ನು ಬಿಟ್ಟು ಇರದುದರೆಡೆಗೆ ತುಡಿಯುವುದು; ಇರುವುದರಲ್ಲೇ ಮತ್ತೆ ಮತ್ತೆ ಹೊಸದನ್ನು ಕಾಣುವುದು ಮಾನವ ಪ್ರವೃತ್ತಿ. ಇದಕ್ಕೆ ಮಹಿಳೆ, ಮಹಿಳಾಕಾವ್ಯವೇನೂ ಹೊರತಲ್ಲ. ಹೀಗೆ ಮಹಿಳಾಕಾವ್ಯದಲ್ಲಿರುವ ವಿವಿಧ ಹುಡುಕಾಟಗಳ ಜೊತೆ ಅನುಸಂಧಾನ ನಡೆಸುವುದು ಪ್ರಸ್ತುತ ಉಪಶೀರ್ಷಿಕೆಯಡಿಯಲ್ಲಿ ಅಧ್ಯಯನದ ಉದ್ದೇಶವಾಗಿದೆ.

ಮಹಿಳಾಕಾವ್ಯ ಶೋಧಿಸುವ ಅನೇಕ ಅಂಶಗಳನ್ನು ಸ್ಥೂಲವಾಗಿ ಮೂರು ಮುಖ್ಯ ಅಂಶಗಳಲ್ಲಿ ವಿಂಗಡಿಸಿಕೊಂಡು ವಿವರಿಸಲಾಗಿದೆ. ಶೋಧದ ಆ ಮೂರು ಮುಖ್ಯ ನೆಲೆಗಳೆಂದರೆ –

ಅ. ಸಂಬಂಧಗಳ ಶೋಧ

ಆ. ಅಮೂರ್ತ ಸಂಗತಿಗಳ ಶೋಧ

ಇ. ಅಸ್ಮಿತೆಯ ಶೋಧ

**ಅ. ಸಂಬಂಧಗಳ ಶೋಧ:** ಮೂಲತಃ ಜೀವಿಯಾಗಿ ಮನುಷ್ಯರ ಸಂಬಂಧ ಪ್ರಕೃತಿಯೊಂದಿಗಿನದು. ನಂತರ ತಾನೇ ನಿರ್ಮಿಸಿಕೊಂಡ ಸಾಮಾಜಿಕ ನೆಲೆಗಳೊಂದಿಗೆ ಕೌಟುಂಬಿಕವಾಗಿ, ಸಾಮಾಜಿಕವಾಗಿ ಸಂಬಂಧಗಳೊಂದಿಗಿನ ಸಾಮರಸ್ಯ, ಸಂಘರ್ಷಗಳೇ ಮಾನವ ನಾಗರಿಕತೆಯ ಚರಿತ್ರೆಯನ್ನು ರೂಪಿಸಿರುವಂತಹದು. ಈ ಹಿನ್ನೆಲೆಯಲ್ಲಿ ಪ್ರಾಕೃತಿಕ ಅಂಶಗಳು, ಕೌಟುಂಬಿಕ ಸಂಬಂಧಗಳು ಹಾಗೂ ಸಾಮಾಜಿಕ ಸಂಬಂಧಗಳ ಕುರಿತಂತೆ ಮಹಿಳಾಕಾವ್ಯದ ಸಂವೇದನೆಗಳನ್ನು ಗುರುತಿಸುವ ಪ್ರಯತ್ನವನ್ನು ಮುಂದುವರಿಸಲಾಗಿದೆ.

ಭೂಮಿ, ಬಾನು, ಸೂರ್ಯ, ಚಂದ್ರ, ಬೆಟ್ಟ-ಗುಡ್ಡ, ನದಿ, ಹೂ-ಹಣ್ಣು ಹೀಗೆ ಸಚರಾಚರ ಪ್ರಾಕೃತಿಕ ಅಂಶಗಳೆಲ್ಲವೂ ಮಹಿಳಾಕಾವ್ಯದೊಳಗೆ ನೆಲೆ ಕಂಡುಕೊಳ್ಳುತ್ತವೆ. ನವೋದಯದ ಕವಿಗಳಲ್ಲಿ ಪ್ರಕೃತಿ ವಿಸ್ಮಯವಾಗಿ, ದೈವವಾಗಿ ಮೂಡಿಬಂದಿದ್ದರೆ ಮಹಿಳಾಕಾವ್ಯ ಕೂಡ ಆ ವಿಸ್ಮಯವನ್ನು ಅನುಭವಿಸುತ್ತದೆ.

**ಕಿಕ್ಕಿರಿದಿದ್ದವು ಮರದಲ್ಲಿ ಹೂವುಗಳು**
**ಇಡೀ ಮರವು ಹೂವು**
**ಇಡೀ ಹೂದೋಟವು ಒಂದು ಹೂಗೊಂಚಲು**
**ಇಡೀ ಭೂಮಂಡಲವು ಒಂದು ಹೂಬುಟ್ಟಿಯು**
**ಅವನೋ.........**
**ಮತ್ತನಾಗಿ ಮೈದುಂಬಿ**
**ಮಲಗಿದ್ದ | ಹೂವಿನೆದೆಯೊಳಗೆ**

**(ಹೂವುಗಳು - ಆಕಾಶಮಲ್ಲಿಗೆ - ಪುಟ ೧೬೭)**

ಸವಿತಾ ನಾಗಭೂಷಣ ಅವರ ಈ ಕವಿತೆಯಲ್ಲಿ ಭಿನ್ನವೆಲ್ಲವೂ ಅಭಿನ್ನವಾಗಿ ಗೋಚರಿಸುವ ಪರಿ ಕವಿಯ ವಿಸ್ಮಯ ನೋಟದ ಫಲ. ಮತ್ತನಾಗಿ ಮೈದುಂಬಿ ಮಲಗಿದವನು ಯಾರೆಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಪ್ರಕೃತಿಯೊಳಗಿನ ಚೈತನ್ಯವಾಗಿ ಒಮ್ಮೆ ಗುರುತಿಸಬಹುದು. ಪ್ರಕೃತಿಯನ್ನು ಹೆಣ್ಣಿಗೆ ಹೋಲಿಸುವುದರಿಂದ ಹೂವಿನ ಮಕರಂದ ಆಸ್ವಾದಿಸುವ ಪ್ರಿಯತಮನ ರೂಪವೂ ಆಗಿರಬಹುದು. ಇಂತಹ ಪ್ರಕೃತಿವಿಸ್ಮಯವನ್ನು ಗ್ರಹಿಸಬಹುದೇ ವಿನಾ ಅದರ ನಿಗೂಢಗಳನ್ನು ಅರ್ಥೈಸಲಂತೂ ಸಾಧ್ಯವಿಲ್ಲ. ಆದರೆ ಈ ಕವಯಿತ್ರಿಗೆ ಈ ಎಲ್ಲ ಸೃಷ್ಟಿ ವೈಖರಿಯನ್ನು ಭಾಷೆಯಲ್ಲಿ ಹಿಡಿದಿಡುವ ತವಕ. ಆ ಕಾರ್ಯಗಳಿಗೆಲ್ಲ ವಿವರಣೆ ಕೇಳುವ ಬಯಕೆ:

ಹೊರಳುತ್ತಿರುವ ಭೂಮಿಯನ್ನೂ

ಉರುಳುತ್ತಿರುವ ಸಾಗರವನ್ನೂ

ಮಾತನಾಡಿಸಬೇಕು

ಉರಿಯುತ್ತಿರುವ ಬೆಂಕಿಯನ್ನೂ

ಮೊರೆಯುತ್ತಿರುವ ಗಾಳಿಯನ್ನೂ

..........................

ಆಕಾಶ ಕಾಯದೊಳಗೆ

ಅವಿನಾಶಿ ಸೂರ್ಯ!

ದೇವರೆ.... ಇವರದ್ದು ಯಾವ ಭಾಷೆ?!

ಎಂದಾದರೂ ಕೈಗೂಡುವುದೇ ಆಶೆ?

(ಮಾತನಾಡಿಸಬೇಕು - ಆಕಾಶಮಲ್ಲಿಗೆ - ಪುಟ ೧೪೯)

ವೈಜ್ಞಾನಿಕ ಶೋಧಗಳಿಗೂ ಸವಾಲೆಸೆಯುವ ಈ ವಿಸ್ಮಯಗಳನ್ನು ವಿವರಿಸುವ ಭಾಷೆ ಯಾರಿಗೂ ದಕ್ಕಿದ್ದಿಲ್ಲ. ಕವಿ ಕಲ್ಪನೆಗಳಲ್ಲಿ ಸಾಧ್ಯವಾಗಿಸುವ ಶಕ್ತಿಯಿದೆಯೆಂದು ಅನೇಕ ಕವನಗಳು ಸಾಕ್ಷೀಕರಿಸುತ್ತವೆ.

ಸೂರ್ಯನಿಗೆ ಒಂದು ದಿನ

ರಜ ಕೊಡಿ - ಎಂದೆ

ರಜೆಯ ದಿನ ಬದಲಿಗೆ

ಜನ ಕೊಡಿ - ಎಂದರು

ಸಿಗಲಿಲ್ಲ ಮೂಲೋಕ

ಜಾಲಾಡಿದರೂ

(ಒಂದು ದಿನವಾದರೂ - ಹೂವ ಕಟ್ಟುವ ಕಾಯಕ - ಪುಟ ೧೨೩)

ತಮ್ಮ ದೈನಂದಿನ ಚಟುವಟಿಕೆಗಳನ್ನು, ಆಸೆ-ಆಕಾಂಕ್ಷೆಗಳನ್ನು, ಬೇಸರ-ಸಂತೋಷಗಳನ್ನೂ ಪ್ರಕೃತಿಚಿತ್ರಣಗಳಲ್ಲಿ ಕಾಣುವ ಪ್ರಯತ್ನವೂ ಇದೆ. ವೈದೇಹಿಯವರ ಸೂರ್ಯನ ಕುರಿತ 'ಅಸ್ತಮಾನದ ಕವಿತೆಗಳು' ಭಾಗ್ಯ ಜಯಸುದರ್ಶನ ಅವರ 'ಭೂಮಿ ಪದ್ಯಗಳು' ಬೇರೆ ಬೇರೆ ಕವಿಗಳ ಸಾಂದರ್ಭಿಕ ಹನಿಗವನಗಳನ್ನು ಇದಕ್ಕೆ ನಿದರ್ಶನ ನೀಡಬಹುದು. ಸೂರ್ಯನಿಗೆ ರಜ ಕೊಡಿಸುವ ಮೇಲಿನ ಕವನ ಪ್ರಕೃತಿಯ ಅಗಾಧ ಶಕ್ತಿಯನ್ನು ಪರೋಕ್ಷವಾಗಿ ಹೇಳುತ್ತಿದೆ. ಎಲ್ಲದರ ಕರ್ತೃ ತಾನೇ ಎಂದುಕೊಳ್ಳುವ ಮನುಷ್ಯರು ಪ್ರಕೃತಿಯ ಎದುರು ಎಂದಿಗೂ ಕುಬ್ಜರೆ! ಪ್ರಕೃತಿಯ ಈ ಮೌನಪಾಠ ಮಾನವರ ಅಹಂಕಾರಕ್ಕೆ ಸದಾ ಸವಾಲಾಗಿದೆ.

ಎದ್ದಾಗ ಕೇಳಿದರು । ನಿನಗೇನು ಬೇಕು ।

- ಸೂರ್ಯ

ಮಧ್ಯಾಹ್ನ ಕೇಳಿದರು । ಏನು, ಏನು ಬೇಕು?

- ಸೂರ್ಯ

ಕತ್ತಲಾಯಿತು ಎಂದರೆ

ಸೂರ್ಯ ಮುಳುಗಿದ ಎಂದಲ್ಲ

ಜಗ ಮಲಗಿತೆಂದೂ ಅಲ್ಲ

..............................

ಅಗೋ ಬಾನು ದೊಡ್ಡದು

ಭೂಮಿ ದೊಡ್ಡದು

(ಹುಡುಗಿ ಹೇಳಿದ ಕಥೆ - ಹೂವ ಕಟ್ಟುವ ಕಾಯಕ - ಪುಟ ೧೨೧)

ಇಲ್ಲಿ ಸೂರ್ಯ ಜ್ಞಾನದ, ಹೊಸ ಚಿಂತನೆಯ ರೂಪಕವಾಗಿ ಬಳಕೆಯಾಗಿದ್ದು, ಜ್ಞಾನದ ದಾರಿಗಳನ್ನು ಹತ್ತಿಕ್ಕುವುದು ವ್ಯರ್ಥಪ್ರಯತ್ನವೆಂಬ ಅರ್ಥವನ್ನೂ ಕವಿತೆ ಅಂತರ್ಗತ ಮಾಡಿಕೊಂಡಿದೆ. ಪುರುಷಪ್ರಧಾನ ವ್ಯವಸ್ಥೆ, ಹೆಣ್ಣಿಗಿರುವ ಮುಕ್ತ ಚಿಂತನೆಗಳನ್ನು ಹತ್ತಿಕ್ಕಿದಷ್ಟೂ ಅವು ಪ್ರಖರವಾಗಿ ಬೆಳಗುತ್ತವೆ ಎಂಬ ಸಂದೇಶ ಕೂಡ ಇದ್ದಂತಿದೆ.

ಈ ಕ್ಷಣದಲಿ ಗರ್ಭವತಿ

ಮತ್ತೊಂದು ಕ್ಷಣದಲಿ ಬಾಣಂತಿ

ಮಾಡುವರ್‍ಯಾರು ಆರೈಕೆ

ಇಷ್ಟೊಂದು ತ್ವರಿತ ಗತಿಯಲ್ಲಿ?

(ಭೂಮಿ ಪದ್ಯಗಳು - ಭಾವಸಿಂಚನ - ಪುಟ ೩೧೫)

ತಾಯ್ತನದ ಹಂತಗಳನ್ನು ಭೂಮಿಯ ಕ್ರಿಯೆಯಲ್ಲಿ ಕಾಣುವ ಕವಿಗೆ ಭೂಮಿಗಿರುವ ಧೀಶಕ್ತಿಯು ವಿಸ್ಮಯವಾಗಿದೆ. ಭೂಮಿ ಹೆಣ್ಣಿನ ರೂಪಕವಾಗಿರುವುದರಿಂದ ಹೆಣ್ಣು ಕೂಡ ಇಂತಹುದೇ ಜೀವಚೈತನ್ಯವನ್ನು ಹೊಂದಿದವಳು. ದೈನಂದಿನ ಕ್ರಿಯೆಗಳನ್ನು ಪ್ರಕೃತಿಯಲ್ಲಿ ಇನ್ನೊಂದು ಬಗೆಯಲ್ಲಿ ಅವರು ಗುರುತಿಸುವುದು ಹೀಗೆ :

ಸದಾ ನಿಂತು | ನಿನ್ನ ಚೆಲುವನ್ನು

ಸವಿಯುವ ಸೂರ್ಯನಿಗೂ

ಬೇಸರವಿಲ್ಲ

ನಿನಗೂ ಅದನ್ನು ತಿರುಗಿರುಗಿಸಿ

ತೋರಿಸಲು ಬೇಸರವಿಲ್ಲ

(ಅದೇ - ಪುಟ ೩೨೩)

ಪ್ರೇಮಿಯಾಗಿ ಭೂಮಿ ಸೂರ್ಯರನ್ನು ತಮಾಷೆಗೆಳೆಯುವ ಈ ಕವಯಿತ್ರಿ ಪ್ರೇಮದ ಅತಿ ತರುವ ಅಪಾಯವನ್ನೂ ಕೂಡ ಪ್ರಕೃತಿಯಲ್ಲಿಯೇ ಕಾಣುತ್ತಾರೆ. ಅದು ಎಚ್ಚರಿಕೆಯ ಕರೆ ಕೂಡ ಹೌದು.

**ಸೂರ್ಯನಿಗೂ | ಚಂದ್ರನಿಗೂ**
**ಕನ್ನಡಿ | ಹಿಡಿಯುತ್ತ**
**ನಿನ್ನನ್ನು ನೀನು ಮರೆಯುವ**
**ಅಪಾಯವಿಲ್ಲವೇ?**

**(ಅದೇ - ಪುಟ ೩೨೭)**

ಬಾಹ್ಯವಾಗಿ ನಡೆಯುವ ಈ ವ್ಯಾಪಾರಗಳಲ್ಲಿಯೂ ಜೀವನಪಾಠ ಅರಸುವ ಚಾಣಾಕ್ಷಮತಿ ಈ ಕವಯಿತ್ರಿಯದು. ನಿರಂತರವಾಗಿ ಪ್ರಕೃತಿ ಇಂತಹ ಪಾಠಗಳನ್ನು ನೀಡುತ್ತಿದ್ದರೂ ಮನುಷ್ಯರು ಅದನ್ನು ಧಿಕ್ಕರಿಸುತ್ತಾ ಬಂದದ್ದೂ ಅಷ್ಟೇ ಸತ್ಯ.

**ಒಲವಿನ ಮಹಾಪೂರದಲಿ**
**ಕೈಹಿಡಿದು | ತೇಲುತ್ತಾ ಸಾಗುತ್ತಿದ್ದ**
**ಜೋಡಿ ಪ್ರವಾಹವಿಳಿದಾಗ**
**ಎದುರು ಬದುರು ದಡದಲ್ಲಿ**
**ನಿಂತಿದ್ದರು!**

**(ಪ್ರವಾಹವಿಳಿದಾಗ - ಲತಾರಾಜಶೇಖರ - ಹನಿಹನಿ - ಪುಟ ೮೫)**

ಹೀಗೆ ಪ್ರಕೃತಿ ವಿಸ್ಮಯದ ಗೂಡಾಗಿ, ಜೀವನಪಾಠವಾಗಿ, ಮನಸ್ಸಿಗೆ ಮುದ ನೀಡುವ ಜೀವನ ಸಹ ಪ್ರಯಾಣಿಗನಾಗಿ ಕವಿ ಮನಸ್ಸುಗಳಿಗೆ ಸಹಕರಿಸುತ್ತ, ಸವಾಲೆಸೆಯುತ್ತ ಬರುತ್ತಿದೆ.

ಇನ್ನು ಕುಟುಂಬದೊಳಗಿನ ಸಂಬಂಧಗಳಲ್ಲಿ ಈ ಶೋಧದ ಪ್ರಕ್ರಿಯೆ ನಡೆದಿರುವ ಪರಿಯನ್ನು ಅನೇಕ ಕವನಗಳ ನಿದರ್ಶನದೊಂದಿಗೆ ಸ್ಪಷ್ಟಪಡಿಸಿಕೊಳ್ಳಬೇಕಿದೆ. ಭಾರತೀಯ ಪರಂಪರೆಯಲ್ಲಿ 'ಕುಟುಂಬಕ್ಕೆ ಆದ್ಯ ಸ್ಥಾನವಿದೆ. ಅಪ್ಪ, ಅಮ್ಮ, ಅಣ್ಣ, ತಂಗಿ, ಅಜ್ಜ, ಅಜ್ಜಿ, ಮಗ, ಮಗಳು ಹೀಗೆ ಸಂಬಂಧಗಳ ಸರಣಿಯೇ ಇರುತ್ತದೆ. ಇಲ್ಲಿ ಒಬ್ಬ ವ್ಯಕ್ತಿ ಅನೇಕ ಪಾತ್ರಗಳಾಗುವ ಅವಕಾಶವೂ ಇದೆ. ಪ್ರತಿಯೊಂದು ಸಂಬಂಧಕ್ಕೂ ಅದರದೇ ಆದ ಸ್ಥಾನಮಾನ, ಅಧಿಕಾರ, ಜವಾಬ್ದಾರಿ, ಕರ್ತವ್ಯಗಳು ಅಲಿಖಿತವಾಗಿಯೇ ನಿಗದಿಯಾಗಿವೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಪುರುಷನಿಗೇ ಆದ್ಯ ಸ್ಥಾನ. ತಂದೆ, ಅಣ್ಣ-ತಮ್ಮ, ಗಂಡ, ಮಗನಾಗಿ ಅವನ ಹಕ್ಕುಬಾಧ್ಯತೆಗಳು ಭಿನ್ನ ಭಿನ್ನವಾಗಿರುತ್ತವೆ. 'ತಂದೆ'ಯಾಗಿ ಅಪ್ಪನ ಪಾತ್ರ ಚಿತ್ರವನ್ನು ಚೇತನಾ ತೀರ್ಥಹಳ್ಳಿಯವರು ವಿವರಿಸುವುದು ಹೀಗೆ :

**ಅಪ್ಪ ನನ್ನೊಳಗೆ**
**ಉರಿದು ಹೊಟ್ಟುವ ಕೋಪ**
**ಸುಟ್ಟ ಬಾಲ್ಯದ ಬೂದಿ, ನಿತ್ಯ ಬಂಡಾಯ**
**ಅಪ್ಪ ಯಾವತ್ತೂ ನಮ್ಮ ಪಾಲಿಗೆ ಅಮ್ಮನ ಯಜಮಾನ**
**ಅವಳಿಗಾದರೋ ಅಂವ ಕೌರವನ ಗೌರವ,**

ಕಾನೂನು ಮಾಡುವ ಪಾಳೇಗಾರ
....ಮಹಾಮಾನವಂತ
ವಾರಗೆಯವರಂತೆ ಕುಡಿದು । ಚರಂಡಿ ಅಳೆದವನಲ್ಲ
ಅಂವ ನಮ್ಮ ಬಾಲ್ಯ ಕಸಿದಿದ್ದನೋ
ನಾವೇ ಅವನ ಯೌವನ ಕಸಿದಿದ್ದವೋ
ಈಗ,
'ಅಪ್ಪ' ನಾನು ಮಿಸ್ ಮಾಡಿಕೊಳ್ಳುತ್ತಿರುವ
ಒಡಲಾಳದ ಕೂಗು
ಎದೆಯಿಂದ ಜಾರಿ ಬಿದ್ದ ಗರ್ವ
ಯಾವತ್ತೂ ಹಡೆಯಲಾಗದ ಹೊಕ್ಕಳ ಸಂಕಟ

(ಅಪ್ಪ - ಶಬರಿಯ ಅವಸರ - ಪುಟ ೩೨)

ಹೆಚ್ಚಿನ ಸಂದರ್ಭಗಳಲ್ಲಿ 'ಅಪ್ಪ' ಮಿತ್ರನಿಗಿಂತ 'ಶತ್ರು'ವಾಗಿದ್ದೇ ಹೆಚ್ಚು. ಇದು ಪ್ರತಿಭಾ ನಂದಕುಮಾರ್ ಕವನಗಳಲ್ಲಿ ತನ್ನೆಲ್ಲ ನೈಜತೆಯೊಂದಿಗೆ ಮೂಡಿಬಂದಿರುತ್ತದೆ. 'ನೈನಾ ಸಾಹಿ' ಕವನವಂತೂ 'ಅಪ್ಪ'ನ ಆಷಾಡಭೂತಿತನವನ್ನು ಕಣ್ಣಿಗೆ ಕಟ್ಟಿದಂತೆ ವಿವರಿಸುತ್ತದೆ. ಇಲ್ಲಿ ಚೇತನಾ 'ಅಪ್ಪ'ನನ್ನು ಎರಡು ಕಾಲಘಟ್ಟಗಳಲ್ಲಿ ಎದುರುಗೊಳ್ಳುತ್ತಾರೆ. ಬಾಲ್ಯದಲ್ಲಿ ಖಳನಾಯಕನಾಗಿರುವ ಅಪ್ಪ ಪ್ರೌಢರಾದಾಗ ಒಡಲಾಳದ ಕೂಗಾಗಿ ಪರಿಣಿಮಿಸಿದ್ದಾನೆ. ಇದು ಮೂಲತಃ ಅಪ್ಪನ ವ್ಯಕ್ತಿತ್ವದಲ್ಲಾದ ಮಾರ್ಪಾಟು ಅಲ್ಲ. ಬದಲಿಗೆ ಈ ನಿರೂಪಕಿಯಲ್ಲಾದ ಮಾರ್ಪಾಟು. ಅವಸ್ಥಾಂತರದ ಗ್ರಹಿಕೆ, ತನ್ನೆಲ್ಲ ಸ್ವಾತಂತ್ರ್ಯಗಳಿಗೆ ಕಡಿವಾಣ ಹಾಕುವ, ಅಮ್ಮನನ್ನು ಸದಾ ತನ್ನ ಅಂಕೆಯಲ್ಲಿಟ್ಟುಕೊಳ್ಳುವ ಈ 'ಕೌರವ' ಇಂದ್ಯಾಕೆ ಈ ಪರಿಯಲ್ಲಿ ಕಾಡುತ್ತಾನೆ. ಅದೂ ಹೊಕ್ಕಳ ಸಂಕಟವಾಗಿ. ಇಲ್ಲಿ ಸಾಮಾಜಿಕ ಸನ್ನಿವೇಶವೊಂದರಲ್ಲಿ ಅದಕ್ಕಿಂತ ಪ್ರಭಾವಶಾಲಿಯಾದ ಆರ್ಥಿಕ ಕಾರಣವೊಂದಿದೆ. ಬಡ-ಮಧ್ಯಮ-ಕೃಷಿ ಕುಟುಂಬದ ಸ್ಥಿತಿಗಳು ಇಲ್ಲಿ ಹೆಚ್ಚು ಪ್ರಭಾವಶಾಲಿಯಾಗಿವೆ. ಮನೆತನ, ಮಕ್ಕಳು, ಮರ್ಯಾದೆ ಮುಂತಾದ ಪಾರಂಪರಿಕ ಸಾಮಾಜಿಕ ಗ್ರಹಿಕೆಗಳು ಪುರುಷ-ಸ್ತ್ರೀ ಎಂಬ ಭೇದವಿಲ್ಲದೆ ತಮ್ಮ ಹಿಡಿತದಲ್ಲಿರಿಸಿಕೊಂಡಿರುತ್ತವೆ. ಈ ಕುಟುಂಬದ ಚೌಕಟ್ಟನ್ನು ಅದಿರುವಂತೆಯೇ ಉಳಿಸಿಕೊಳ್ಳಬೇಕಾದರೆ ಅದು ಪ್ರತಿ ಸದಸ್ಯನ ತ್ಯಾಗವನ್ನೂ ಸಹ ಬೇಡುತ್ತದೆ. 'ತಂದೆ' ಎಂಬುದು ಹೊಣೆಗಾರಿಕೆಯ ಸ್ಥಾನವಾಗಿ ಗುರುತಿಸಲ್ಪಟ್ಟ ಸಮಾಜದಲ್ಲಿ ಹೊಣೆ ಹೊತ್ತುಕೊಳ್ಳುವವನೂ ಕೂಡ ತನ್ನ ಖಾಸಗಿತನವನ್ನು ಬದಿಗಿಡುತ್ತಲೇ ಬರಬೇಕಾಗುತ್ತದೆ ಎಂಬ ದೃಷ್ಟಿಕೋನದಿಂದ 'ಅಪ್ಪ'ನ ಚಿತ್ರ ರಚನೆಯಾಗಿದೆ. ಆತ ಸ್ವಾಭಿಮಾನದಿಂದ ಬದುಕುವ ಪಾಠ ಕಲಿಸಿದ ಕಾರಣವೇ ಈಗ ನಿರೂಪಕಿ ತನ್ನ ಅಸ್ಮಿತೆಯನ್ನು ಕಂಡುಕೊಂಡಿದ್ದಾಳೆ. ಹೀಗೆ ಯಾವಾಗಲೂ ನೇತ್ಯಾತ್ಮಕ ಕಾರಣಗಳಿಗಾಗಿಯೇ ಗುರುತಿಸಲ್ಪಡುವ 'ಪಾತ್ರ'ವನ್ನು ವಾಸ್ತವದ ನೆಲೆಯಲ್ಲಿಟ್ಟು ಶೋಧಿಸಲಾಗಿದೆ.

ಇನ್ನು 'ಅಮ್ಮ'ನ ಬಗೆಗಿನ ಖಂಡನೆ, ಸ್ಮರಣೆಗಳಿಗಿಂತಲೂ ಲೆಕ್ಕವೇ ಇಲ್ಲ! ಪಾರಂಪರಿಕ ಮೌಲ್ಯಗಳ 'ನಿರಾಕರಣೆ'ಯ ಪ್ರಸಂಗಗಳಲ್ಲಿಯಂತೂ 'ಅಮ್ಮ'ನನ್ನು ಸಂಬೋಧಿಸಿರುವ ಕವನಗಳೇ ಹೆಚ್ಚು. ಇದಕ್ಕೆ 'ಅಮ್ಮ' ಎನ್ನುವುದೊಂದು ಸನಿಹದ, ಸಲುಗೆಯ ಸಹನೆಯ ಸಂಬಂಧವಾಗಿರುವ ಕಾರಣ ಇರಬಹುದು. ತಾಯಿ ಮಗುವಿನ ಸಂಬಂಧವನ್ನು ವಿಭಾ ಅವರು 'ಜೀವ ಮಿಡಿತದ ಸದ್ದು' ಎಂಬ ರೂಪಕದಲ್ಲಿ ಹಿಡಿದಿಡುತ್ತಾರೆ.

**ಅವ್ವ,**
**ನಿನ್ನ ಬೆಚ್ಚಗಿನ ಒಡಲಿಂದ**
**ಹೊರಬಂದಾಗ ಬೆಚ್ಚಿ ಅತ್ತಿದ್ದೆ**
**ಅಂದು,**
**'ಮಗಳು ದೊಡ್ಡವಳಾದಳು'**
**ಎಂಬ ಸಂಭ್ರಮದಲ್ಲೇ ನೀನು**
**ಒಳಗೆಲ್ಲೋ ಕೊರಗಿದೆ....!**
**ಅವ್ವ**
**ನನ್ನೊಳಗೆ ನೂರು ಪ್ರಶ್ನೆಗಳಿದ್ದವು**
**ನಾನು ಒಂದನ್ನೂ ಕೇಳಲಿಲ್ಲ!**
**ಹೌದವ್ವ**
**ನಾವೆಲ್ಲೋ ಎಡವಿದ್ದೇವೆ**
**ಏನನ್ನೋ ಬಚ್ಚಿಟ್ಟುಕೊಳ್ಳಲು**
**ಹೋಗಿ ಪೂರ್ತಿ ಬೆತ್ತಲಾಗಿದ್ದೇವೆ.**

**(ಜೀವ ಮಿಡಿತದ ಸದ್ದು - ವಿಭಾ - ಪುಟ ೬)**

'ತಾಯಿ'ಯಿಂದ ಬೇರ್ಪಡುತ್ತಿದ್ದಂತೆಯೇ ಮಗು ಅಳುವುದ್ಯಾಕೆ? ಇದಕ್ಕೆ ವೈಜ್ಞಾನಿಕ ಕಾರಣಗಳೇನೇ ಇರಬಹುದು. ಆದರೆ ತಾಯಿಯ ಸಾನಿಧ್ಯ ಹಿತವೂ, ದೂರ ಅಹಿತವೂ ಆಗಿರುವುದಂತೂ ಸತ್ಯ. ಭಾರತೀಯ ಪರಂಪರೆಯಲ್ಲಿ ಮಗುವಿನ ಅದರಲ್ಲೂ ಹೆಣ್ಣುಮಗುವಿನ ಬದುಕಿನಲ್ಲಿ ತಾಯಿಯದು ನಿರ್ಣಾಯಕ ಪಾತ್ರ. ಜನನಪೂರ್ವದಿಂದ 'ತಾಯಿ' ಬದುಕಿರುವವರೆಗೆ ಆಕೆ ವಹಿಸಿಕೊಳ್ಳುವ ಜವಾಬ್ದಾರಿಗಳೆಲ್ಲವೂ ಇದರ ಹಿಂದಿವೆ. ಮಗಳು 'ದೊಡ್ಡವಳಾದರೆ' ತಾಯಿ ಸಂಭ್ರಮಮಿಶ್ರಿತ ಅಳುಕು ತೋರುವುದೇಕೆ? ನಿಜವಾಗಿಯೂ ಇದು ಆಕೆಗೆ 'ಸಂಭ್ರಮ' ನೀಡಿದೆಯೇ! ಸಂಭ್ರಮ ಪಡಬೇಕೆನ್ನುವ ತೋರಿಕೆಗಾಗಿ ಆ ರೀತಿ ನಡೆದುಕೊಳ್ಳುತ್ತಾಳೋ! ಸಂತಾನ ಪಡೆಯುವ ಸಾಮರ್ಥ್ಯವಿಲ್ಲದ ಹೆಣ್ಣು ಅನುಭವಿಸುವ ಕಷ್ಟ-ನಷ್ಟಗಳು ಇಂತಹ ಸಂಭ್ರಮದ ಹಿಂದಿರಲೇಬೇಕು. ಇನ್ನು ಅಳುಕಾದರೂ ಏಕೆ? ತನ್ನ ಮಗಳನ್ನು ತಾನು ಅಥವಾ ಮಗಳೇ ತನ್ನನ್ನು ತಾನು ನಿರ್ವಹಿಸಿಕೊಳ್ಳಲು ಪಡಬೇಕಾದ ಬವಣೆಗಳೇನಾದರೂ ಕಣ್ಣೆದುರಿಗಿವೆಯೇ!

ಹೌದೆಂಬುದು ಇಲ್ಲಿ ಸೂಚ್ಯಾರ್ಥವೇ ಆಗಿದೆ. ಏಕೆಂದರೆ ಇದನ್ನು ಆಕೆ ಮಗಳೆದುರಿಗೆಲ್ಲೂ ಹೇಳಿಕೊಳ್ಳುವುದಿಲ್ಲ. ಇದೇ ಕಾಲಕ್ಕೆ ಮಗಳಲ್ಲೇ ನೂರಾರು ಪ್ರಶ್ನೆಗಳಿವೆ. ಆದರೆ ಕೇಳಲಾರಳು. ಮಗಳು ಕೇಳದಿದ್ದರೂ ತಾಯಿ ಅರ್ಥೈಸಿಕೊಳ್ಳಬಲ್ಲಳು. ಹಾಗಾಗಿಯೇ ಎಲ್ಲ ಮುಚ್ಚಿಟ್ಟು ಬೆತ್ತಲಾಗಿದ್ದೇವೆ ಎಂಬ ಧ್ವನಿಪೂರ್ಣ ಮಾತುಗಳಿಂದ ಈ ಜೀವಗಳ ಮಿಡಿತದ ಸದ್ದಿನ ತೀವ್ರ ಸಂವೇದನೆಯನ್ನು ಕವನ ಒದಗಿಸುತ್ತದೆ. ಹೀಗೆ ಹೆಣ್ಣುಮಕ್ಕಳ ಮಟ್ಟಿಗೆ ಎಲ್ಲವೂ ಆಗುವ ತಾಯಿಯನ್ನು ಯಾವುದಕ್ಕೆ ಹೋಲಿಸಿದರೂ ತೃಪ್ತಿ ಇಲ್ಲ. ಗೀತಾ ಹೆಗಡೆಯವರು ಅಮ್ಮನನ್ನು ಅಶ್ವತ್ಥದೊಂದಿಗೆ ಸಮೀಕರಿಸುತ್ತಾರೆ:

**ಅಂಗಳವ ತಿಕ್ಕಿ ಹೊಳೆಯಿಸುವಳು**
**ತನ್ನ ಹೃದಯದಂತೆ - ಅಂಚಿಗೆ ನೆಟ್ಟ**
**ಬೇಲಿ ಗಿಡದಲ್ಲಿರಳಿದ ಹೂಗಳ**
**ಪರಿಮಳ ಹೀರಿದ ನೆಲ**
**ಆಕಾಶ ಪ್ರತಿಫಲಿಸುವಂತೆ ನಿರಭ್ರ**
**ಸ್ಫಟಿಕ ಜಲ ಪುಳಕಿಸುವಂತೆ ಶುಭ್ರ**
**ಗೀರು ಗಾಯವಾಗಲುಂಟೆ - ನೋವು ಮನದಲ್ಲಿ**
**ಟಿಸಿಲೊಡೆದ ಅಶ್ವತ್ಥ ಕೂಡ ಅಷ್ಟೆ,**
**ಸಾವಿರಾರು ಹಕ್ಕಿ ಗಾನಕ್ಕೆ ಅಮ್ಮ**
**ಮಡಿಲಲ್ಲಿ ಬಚ್ಚಿಟ್ಟ ಹೂವೆಷ್ಟೊ - ಹೊಂಗನಸೆಷ್ಟೊ...**
**ಕಾಲ ಸರ್ಪ ಕಬಳಿಸಿದ ಸುಳಿಚಕ್ರ | ವಿಲವಿಲನೆ ತಿರುಗಿ ತೀಡಿದಾಗ**
**ಹೊಕ್ಕಳಿನಿಂದೆದ್ದ ಕಲಮಲದಲ್ಲಿ**
**ಕಂಗೆಟ್ಟ ಕೂಸುಗಳು - ಇಬ್ಬರೂ**

**(ಅಮ್ಮ ಮತ್ತು ಅಶ್ವತ್ಥ - ಅಕ್ಷರ ಚೈತನ್ಯ - ಪುಟ ೧)**

ಆಶ್ರಯ ಮತ್ತು ಅಸಹಾಯಕತೆ ಇಲ್ಲಿನ ತಾದಾತ್ಮ್ಯಗುಣ. ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದ ಶ್ರಮವನ್ನು ಕವಯಿತ್ರಿ ಸ್ಫಟಿಕಜಲಕ್ಕೆ ಹೋಲಿಸಿದ್ದಾರೆ. ಇಬ್ಬರೂ ಕಾಲನ ವಶವಾದವರು. ಉಪಕಾರ ಮಾಡಿಸಿಕೊಂಡವರಿಗೆ ಪ್ರತ್ಯುಪಕಾರ ಮಾಡುವ ಸದ್ಬುದ್ಧಿ ಇದ್ದರೆ ಬಹುಶಃ ಅಷ್ಟೊಂದು ಅಸಹಾಯಕ ಸ್ಥಿತಿ ತಲುಪಲಾರದು. ಆದರೆ ಅವರದು ಮಗುವಿನ ಅಸಹಾಯಕತೆ. ಹಾಗಾಗಿ ಇಲ್ಲಿ ಸಹಿಸಿಕೊಳ್ಳುವುದೇ ಅನಿವಾರ್ಯವಾದ ಪರಿಹಾರ.

'ಅಮ್ಮ' ತಾಯಿಯಾಗಿರುವಾಗಲೇ ಇನ್ನೊಬ್ಬನ ಹೆಂಡತಿಯೂ ಹೌದು. 'ಗಂಡ'ನೆಂಬ ಅಧಿಕಾರಯುತ ಸ್ಥಾನದ ಅಧೀನದೊಳಗಿದ್ದುಕೊಂಡೆ, ಮುದ್ದಿನ ಮಕ್ಕಳ ಮಮತೆಯ ತಾಯಿಯಾಗುವ ಈ ಸಾಂಪ್ರದಾಯಿಕ ಅಮ್ಮನ ಚಿತ್ರಣವನ್ನು ಛಾಯಾ ಭಗವತಿ ಚಿತ್ರಿಸುವುದು ಹೀಗೆ:

**ಬೆಸುಗೆಯ ಬಿಸಿ ಆರಿದ ಮೇಲಿನ ಅಪ್ಪನ**
**ಅಪರೂಪದ ಸರಸಗಳಿಗೆ,**

**ಅರ್ಥವಿಲ್ಲದೇ ಕಕ್ಕಿದ ಅಸಹನೆಗಳಿಗೆ**

**ಸುಮ್ಮನೆ ಉಕ್ಕಿ ಬಂದ ಸಿಟ್ಟುಗಳಿಗೆ**

**ಮೈಗಿಂತ ಮನಸ ನೋಯಿಸಿದ**

**ಪೆಟ್ಟುಗಳಿಗೆ ಮೈಗೊಟ್ಟಾಕೆ...**

**ಮುಸ್ಸಂಜೆಯ ದೀಪ ಪ್ರಜ್ವಲಿಸಿದಂತೆಲ್ಲ**

...............................

**ಇರುಳುಗಳು ಕರಗುವುದ ಕಂಡು**

**ನಗುವ ನಮ್ಮ ತಲೆ ನೇವರಿಸುತ್ತ**

**ಪ್ರೀತಿ ಸುರಿಸಿದಾಕೆ**

**("ಅವಳು" - ಪುಟಾಣಿ ಕೆಂಪು ಹೂ - ಪುಟ ೨೧)**

ಇಲ್ಲಿ 'ಮುಸ್ಸಂಜೆಯ ಪ್ರಜ್ವಲಿಸುವ ದೀಪ', 'ಕರಗುತ್ತಿರುವ ಇರುಳು' ಅಮ್ಮನ ವೃದ್ಧಾಪ್ಯ, ಅವಸಾನದಂಚನ್ನು ಪ್ರತಿಮಿಸುತ್ತಿವೆ ಎಂದು ಭಾಸವಾಗುತ್ತದೆ. ಇಲ್ಲಿ ಹೆಣ್ಣಿನ ದೈಹಿಕ ಸಾಮರ್ಥ್ಯ ಒಂದು ಕಾಲಘಟ್ಟಕ್ಕೆ ಕುಗ್ಗುತ್ತಿದ್ದರೂ, ಅದೇ ಪುರುಷನ ಸಾಮರ್ಥ್ಯ ಕುಗ್ಗದಿರುವ ಜೈವಿಕ ಸತ್ಯ, ಅದರಿಂದ ಹೆಣ್ಣಾಗಿ ಆಕೆ ಅನುಭವಿಸಬೇಕಾದ ಹಿಂಸೆಗಳ ಚಿತ್ರಣವೂ ಇದೆ. ಆದರೆ ಮಕ್ಕಳ ನಗುವನ್ನು ಕಾಪಿಡುವ ಕಾಳಜಿಯನ್ನಾಕೆ ಮರೆಯುವುದಿಲ್ಲ. ಇಲ್ಲಿ 'ಅಮ್ಮ'ನ ಕುರಿತು ಬರೆಯುವ ನಿರೂಪಕಿಯೂ ಇನ್ನೊಂದು ಕಾಲಘಟ್ಟದಲ್ಲಿ 'ತಾಯಿ'ಯೇ ಆಗುವವಳು ಅಥವಾ ಆಗಿರುವವಳು. "ಅಮ್ಮ" ಮಗುವಾಗುವ ಒಂದು ವೈಚಿತ್ರ್ಯ ಕೂಡ ಈ ಕರುಳ ಸಂಬಂಧದಲ್ಲಿ ಸುತ್ತಿಕೊಂಡಿದೆ.

**ಹಿಡಿಯಷ್ಟು ಅಚ್ಚರಿ | ಕಡಲಷ್ಟು ವೇದನೆ**

**ನಾನೀಗ ನಿನ್ನ ತಾಯಾಗಲೇ**

.........................

**ತೊಡೆಗೂಸ ಮಾಡಿ ಕುಡಿಸಿ ಬಿಡಲೆ**

**ಒಡಲಿನಿತು ಸೆಲೆಯಿರದೇ ಬತ್ತಿ ಹೋಗುವ ಮುನ್ನ**

**ಕರುಳ ಕುಡಿಯಾಗೆನ್ನ ಬಾ ಅಮ್ಮಾ!**

**(ಬಾ ಅಮ್ಮಾ - ಅದೇ - ಪುಟ ೪೩)**

ಒಡಲ ಸೆಲೆ ಆರಿ ಹೋಗುವ ಭಯವೇಕೆ?! ಆಧುನಿಕ ಆರ್ಥಿಕ ಓಡಾಟಗಳಲ್ಲಿ ಕಳೆದು ಹೋಗಿರುವ ಮನುಷ್ಯರು ತಮ್ಮ ಸಂಬಂಧ, ಸಂವೇದನೆಗಳನ್ನೂ ಕಳೆದುಕೊಳ್ಳುತ್ತಿರುವ ಅಂತರಾರ್ಥದಂತೆ ಭಾಸವಾಗುತ್ತದೆ. ದಿನಂಪ್ರತಿ ವೃದ್ಧಾಶ್ರಮಗಳು ವೃದ್ಧಿಯಾಗುತ್ತಿರುವುದಕ್ಕೆ ಬದುಕಿನ ಒತ್ತಡಗಳ ಜೊತೆಗೆ ಮಾನವರ ಸಂವೇದನಾರಹಿತತೆಯೂ ಕಾರಣವಾಗಿರುವ ಅನೇಕ ಸಾಧ್ಯತೆಗಳನ್ನು ಕವನದ ಹಿನ್ನೆಲೆಯಲ್ಲಿ ಗುರುತಿಸಬಹುದು. ಅಮ್ಮನ ಸಾವು ತರುವ ನೋವು ಏನು ಎನ್ನುವುದನ್ನು ವೈದೇಹಿಯವರ 'ಅಮ್ಮನ ಪದ್ಯಗಳು' ಅನುಭವಿಸುತ್ತವೆ.

ಒಂದಾನೊಂದು ಕಾಲದಲ್ಲಿ
ಮಂಗನಂತೆ ನಂಗೂ ಒಂದು । ಬಾಲವಿದ್ದಿತು
ಅಮ್ಮ ತೀರಿಕೊಂಡ ದಿನ ಆ । ಬಾಲ ಉದುರಿತು
ಒಂದಾನೊಂದು ಕಾಲದಲ್ಲಿ
ಎಲ್ಲರಂತೆ ನಂಗೂ ಒಂದು । ಬಾಯಿ ಇದ್ದಿತು
ಅಮ್ಮ ತೀರಿಕೊಂಡ ದಿನ । ಅದು ಬಿದ್ದು ಹೋಯಿತು

(ಅಮ್ಮನ ಪದ್ಯಗಳು - ಹೂವ ಕಟ್ಟುವ ಕಾಯಕ, ಪುಟ ೧೦೫)

'ಬಾಲ' ಹೆಮ್ಮೆಯನ್ನೂ 'ಬಾಯಿ' ಸ್ವಾಭಿಮಾನವನ್ನೂ ಪ್ರತಿನಿಧಿಸುವ ಈ ಕವನ 'ಅಮ್ಮ' ಮಗುವಿನ ಜೀವನದಲ್ಲಿ ಏನು ಎಂಬುದನ್ನು ಪ್ರತಿಮಾತ್ಮಕವಾಗಿ ನಿರೂಪಿಸಿದೆ. ಅಮ್ಮನನ್ನು ಇನ್ನಷ್ಟು ಸಂಕೀರ್ಣ ಸನ್ನಿವೇಶವೊಂದರಲ್ಲಿ ಬಂಧಿಸುವ ವೈದೇಹಿಯವರು ಆಧ್ಯಾತ್ಮಿಕ ನೆಲೆಗೆ ಅವಳ ಸಾವನ್ನು ತಂದು ನಿಲ್ಲಿಸುವುದು ಹೀಗೆ

ಅಮ್ಮನಂಥವರಿಗೆ ಮುಕ್ತಿ ಸಿಗಬಾರದು
ಭೂಮಿ ಬರಡಾಗುತ್ತದೆ
ಅಮ್ಮನಂಥವರು ಮರುಹುಟ್ಟ ಕೂಡದು
ಸ್ವರ್ಗ ಬರಡಾಗುತ್ತದೆ

(ಅದೇ - ಪುಟ ೯೯)

ಸತ್ತ ಶ್ರೇಷ್ಠರನ್ನು ಸ್ವರ್ಗಕ್ಕೇರಿಸುವುದು ವೈದಿಕ ನಂಬಿಕೆ. ನೀಚರು ಮುಕ್ತಿ ಕಾಣದೆ ಮತ್ತೆ ಮತ್ತೆ ಹುಟ್ಟಿ ಬರುವುದು ಇನ್ನೊಂದು ನಂಬಿಕೆ. 'ಅಮ್ಮ' ಮತ್ತೆ ಮತ್ತೆ ಹುಟ್ಟಿ ಬರಬೇಕು ಎನ್ನುವ ಆಶಯದೊಂದಿಗೇ, ಸ್ವರ್ಗವನ್ನೂ ಬರಡು ಮಾಡಬಾರದೆಂಬ ಕಳಕಳಿಯೂ ಸೇರಿಕೊಂಡಿದೆ. ಹಾಗಾದರೆ 'ಅಮ್ಮ' ಇಲ್ಲಿಯೂ ಅಲ್ಲಿಯೂ ಸಲ್ಲುವ ಪರಿ ಯಾವುದು? ಪ್ರತಿ ಅಮ್ಮನೂ ಇಲ್ಲಿಯೇ ಅಂತಹ ಸ್ವರ್ಗವನ್ನು ನಿರ್ಮಾಣ ಮಾಡುತ್ತಾಳೆ ಅಥವಾ ಪ್ರತಿ 'ಅಮ್ಮ'ನಿಗೂ ಇಲ್ಲಿ ಸ್ವರ್ಗ ಸೃಷ್ಟಿಸುವ ಶಕ್ತಿಯಿದೆ. ಅಂದರೆ ಎಲ್ಲಿಯವರೆಗೆ 'ಅಮ್ಮ' ಎನ್ನುವ ಸಂಬಂಧ ತನ್ನ ಜೀವಸಂಬಂಧಿ ಪೊರೆಯುವ ಎಲ್ಲ ಕರ್ತವ್ಯಗಳನ್ನು ತನ್ನೆಲ್ಲ ಸಂಕಷ್ಟಗಳ ನಡುವೆಯೂ ನಿಭಾಯಿಸಬಲ್ಲ ಕರ್ತೃತ್ವಶಕ್ತಿಯನ್ನು ಹೊಂದಿರುತ್ತದೆಯೋ ಅಲ್ಲಿಯವರೆಗೂ 'ಅಮ್ಮ'ನಿಗೆ ಮುಕ್ತಿಯಿಲ್ಲ. ಸ್ವರ್ಗ ಬರಡಾಗುವುದೂ ಇಲ್ಲ ಎಂಬ ಆಧ್ಯಾತ್ಮಿಕ ನೆಲೆಯಲ್ಲಿ 'ಅಮ್ಮ'ನನ್ನು ವಿಶ್ಲೇಷಿಸಬಹುದು. ಅಮ್ಮ-ಅಪ್ಪ ಕುಟುಂಬದ ಆಧಾರಸ್ತಂಭಗಳಾಗಿರುವಂತೆಯೇ ಭಾರತೀಯ ಸಾಮಾಜಿಕ ಸನ್ನಿವೇಶದಲ್ಲಿ ವ್ಯಕ್ತಿತ್ವ ನಿರ್ಮಾಣದಲ್ಲಿ ಪ್ರಭಾವಶಾಲಿಯಾದವರು. ಯಾವುದೋ ಕಾಲಘಟ್ಟದಲ್ಲಿ ತೆರೆಮರೆಗೆ ಸರಿಯುವ ಸಂಬಂಧಗಳಿವು. ಅದಕ್ಕೇ ವೈದೇಹಿಯವರು :

ಅಮ್ಮ ಅಪ್ಪ ಮತ್ತೆಷ್ಟು ಆತುಮ ಪ್ರಿಯರು
ಮುನ್ನಡೆಯುತ್ತಿದ್ದಂತೆ ಹಿಂದಾದರು!

ದೂಡಿ ಇಡಲಾರರೆ ಕಳೆದ ವರ್ಷಗಳನ್ನು
ಕೆಲಕಾಲವಾದರೂ ಯಾವ ದೇವರೂ
ಸಂದವರು ಸಂದೇ ಹೋದರು

'ಅಮ್ಮನ ಪದ್ಯಗಳು' - ಅದೇ - ಪುಟ ೧೦೭)

ತಾಯಿಯಾಗಿ ಮಗಳನ್ನು ಬೇರೆ ಮನೆಗೆ ಕಳಿಸಿಕೊಡುವಾಗಲೂ ವೈದೇಹಿ ಭಾರತೀಯ ಸಮಾಜದ ಪರಂಪರಾಗತ ರೂಢಿಯಂತೆ ಒಂದು ಹೃದ್ಯವಾದ ಸನ್ನಿವೇಶವನ್ನು ಕಟ್ಟುತ್ತಾರೆ. 'ವಿಭಕ್ತ'ವಿರಲಿ, 'ಅವಿಭಕ್ತ'ವಿರಲಿ ಸಂಬಂಧಗಳನ್ನೇ ಉಸಿರಂತೆ ಬದುಕುತ್ತಿರುವ ಕೌಟುಂಬಿಕ ಸನ್ನಿವೇಶದಲ್ಲಿ ಮಗಳನ್ನು ಇನ್ನೊಂದು ಮನೆಗೆ ಕಳಿಸಿಕೊಡುವ ಸಂದರ್ಭ ಅನೇಕ ನೆನಪುಗಳನ್ನು ಮರಳಿಸುವಂತಹುದು.

ಹಾಗಾಗಿಯೇ ಇಲ್ಲಿ ಅಮ್ಮ

ಕಲ್ಲು ಮುಳ್ಳ ಹಾದಿಬೀದಿಯಲಿ ನಡೆಸಿ
ಕರೆದು ತಂದೆವು ಅಂತೂ ಇಲ್ಲಿಯವರೆಗೆ
ಕಲ್ಲು ಒತ್ತಿತೆ ಮುಳ್ಳು ಕಂತಿತೆ ಮಗೂ
ಕೇಳಲಿಲ್ಲದ ಕೊರಗು ಈಗ ನಮಗೆ

('ಮಗಳಿಗೆ'- ಹೂವ ಕಟ್ಟುವ ಕಾಯಕ - ಪುಟ ೩)

ಎಷ್ಟೆಲ್ಲ ಬವಣೆಗಳ ನಡುವೆಯೂ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವ ಭಾರತೀಯ ಕೌಟುಂಬಿಕ ವಾತಾವರಣದ ಚಿತ್ರಣವನ್ನು ಕವನ ಹೀಗೆ ಕಟ್ಟಿ ಕೊಡುತ್ತದೆ. 'ವ್ಯಕ್ತಿ ಸ್ವಾತಂತ್ರ್ಯ'ಕ್ಕೆ ಸೂಕ್ತ ಅವಕಾಶಗಳಿಲ್ಲ ಎನ್ನುವ ಆರೋಪದಾಚೆಯೂ ವ್ಯಕ್ತಿ ಸ್ವಾತಂತ್ರ್ಯಕ್ಕಿಂತ ತಾವು ಈ ಮೊದಲೇ ನಿರ್ಧರಿಸಿದ ಕೌಟುಂಬಿಕ ಚೌಕಟ್ಟಿನ ಒಳಗೇ ನಡೆಯಲು ಸಿದ್ಧವಾಗಿದ್ದುಕೊಂಡು ಎಲ್ಲಿಯೂ ಕೂಡ ಅದಕ್ಕೆ ಧಕ್ಕೆ ಬರದಂತೆ ನಡೆಯುವ ರೀತಿಗೂ ಇದು ಉದಾಹರಣೆಯಾಗಿದೆ. ಇಲ್ಲಿ ಸರಿ ತಪ್ಪುಗಳ ವಿಮರ್ಶೆಗಿಂತ ಬದುಕಿನ ಜೊತೆಗೇ ಕಟ್ಟಿಕೊಂಡಿರುವ ಭಾವನೆಗಳೂ ಸಹ ಮುಖ್ಯವಾಗಿವೆ. ಮಗಳ ಗೈರು ಅಮ್ಮನನ್ನು ಕಾಡುತ್ತಿರುವುದಕ್ಕೆ ಸುದೀರ್ಘವಾಗಿ ವಿವರಣೆ ನೀಡುತ್ತಾರೆ.

ಆ ಪುಟ್ಟ ಹುಡುಗಿ ಕರೆದ ಹಾಗಾಗುವುದು
ಏನೊ ಹೇಳಲು ಬಯಸಿ ಮನಸು ಏಳುವುದು
ಮತ್ತಲ್ಲೆ ಒರಗುವುದು ಕಣ್ಣ ಕೊನೆಯಲ್ಲಿ ಹನಿ
ಹರಳಾಗಿ ನಿಲ್ಲುವುದು ನುಡಿಯ ಬದಲು

....................

ಪಡುವಣದ ಗಾಳಿ ಬೀಸುತ್ತ ಕೇಳುವುದು

ದಣಿವಾಯಿತೇ ಹೆಣ್ಣು ಹೆತ್ತವರಿಗೆ?

.............................................

ಹೋಗು ಮಗಳೆ ಹೋಗು | ನಿನ್ನ ನಾಳೆಗೆ ಹೋಗು

ಪುಣ್ಯ ಫಲಿಸಲಿ ನಿನ್ನ ಬಾಳಿನಲ್ಲಿ

ನಿನ್ನೆ ನಾವಾಗಿ ಬೇರಾಗುವವರು

ಒಳಿತು ಹಾರೈಸುತ್ತ ಹಿಂದೆ ಉಳಿಯುವೆವು

('ಮಗಳಿಗೆ' - ಪುಟ ೬)

ಕುಟುಂಬ, ಮಕ್ಕಳೇ ಸರ್ವಸ್ವ ಎಂದುಕೊಳ್ಳುವ, ಬೇರೆ ಪರ್ಯಾಯಗಳನ್ನು ಯೋಚಿಸದ ಮಧ್ಯಮವರ್ಗದ ಕೌಟುಂಬಿಕ ಚಿತ್ರಣವಿದು. ಮಕ್ಕಳೆಂಬ ಸಂಬಂಧ ಗಾಳಿಯಲ್ಲಿ ಬೆರೆತ ಉಸಿರಿನಷ್ಟೇ ತಾದಾತ್ಮ್ಯತೆಯುಳ್ಳದ್ದು. ಮಕ್ಕಳು ಪ್ರೌಢರಾಗುತ್ತಿದ್ದಂತೆ 'ವಿಭಕ್ತ' ಕುಟುಂಬಗಳಲ್ಲಿ ಕಾಡುವ ಏಕತಾನತೆ, ಏಕಾಂಗಿತನಗಳಿಗೂ ಇದು ನಿದರ್ಶನವಾಗುತ್ತದೆ. ನಮ್ಮ ಜಾನಪದ ಕಾವ್ಯಗಳಂತೂ ತಾಯಿ-ತವರು, ಮಕ್ಕಳ ನಿರ್ಗಮನದಂತಹ ಕೌಟುಂಬಿಕ ಸನ್ನಿವೇಶಗಳನ್ನು ಇನ್ನಿಲ್ಲದಂತೆ ವಿವರಿಸುತ್ತವೆ. ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲೂ, ಎಲ್ಲೋ ಒಂದು ಮಾರ್ದವತೆಯನ್ನು ಉಳಿಸಿಕೊಳ್ಳುವ ತವಕದಂತೆಯೂ ಈ ಸಂಬಂಧಗಳ ಚಿತ್ರಣ ಕಾಣಿಸಿಕೊಳ್ಳುತ್ತದೆ.

ಮಾನವ ಸಮಾಜ ನಿರ್ಮಾಣಕ್ಕೆ, ಮುಂದುವರಿಕೆಗೆ ತಳಪಾಯವೇ ಆಗಿರುವ ಗಂಡು-ಹೆಣ್ಣುಗಳ ಸಂಬಂಧವನ್ನು ಯಾವೆಲ್ಲ ನೆಲೆಯಲ್ಲಿ ಮಹಿಳಾಕಾವ್ಯ ಶೋಧಿಸುತ್ತದೆ ಎಂಬುದರ ಕಡೆಗೂ ಅಧ್ಯಯನದ ವಿಸ್ತಾರ ಚಾಚಿಕೊಂಡಾಗ 'ಹೆಣ್ಣಿ'ಗೆ ಪ್ರಿಯತಮನಾಗಿ, ಸಖನಾಗಿ, ಸಂಗಾತಿಯಾಗಿ ಗಂಡಿನ ಪಾತ್ರ ವಿಸ್ತಾರವಾಗಿದೆ. ಸ್ವೀಕರಣೆ, ನಿರಾಕರಣೆ, ಪ್ರತಿರೋಧಗಳೆಲ್ಲದರ ಆಚೆ ಮತ್ತೆ ಮತ್ತೆ ಹೆಣ್ಣು-ಗಂಡುಗಳು ಜೀವ ಸೃಷ್ಟಿಕಾರ್ಯದಲ್ಲಿ ತೊಡಗಿಕೊಳ್ಳಲು ಕೇವಲ ಜೈವಿಕ, ದೇಹಸಂಬಂಧಿ ಕಾರಣಗಳು ಮಾತ್ರವಿಲ್ಲ. ಹಾಗಿದ್ದರೆ ಇತರ ಜೀವಿಗಳಿಗಿಂತ ಮನುಷ್ಯರ ಜೀವನ ಭಿನ್ನವೇನೂ ಆಗುತ್ತಿರಲಿಲ್ಲ. ಈ ಮೂಲಭೂತ ನೆಲೆಯಾಚೆ ಈ ಸಂಬಂಧಗಳು ಜಗಿಯುತ್ತಿರುವ ಕಾರಣದಿಂದಲೇ ನಿತ್ಯನೂತನ ರಮ್ಯಲೋಕವೊಂದು ಪ್ರತಿ ಕವಿಯ ಕೆಲವು ಕ್ಷಣದ ಸೃಷ್ಟಿಯಾದರೂ ಆಗಿರುತ್ತದೆ. ಜೀವ-ಜೀವಗಳ ನಂಟು ಉಸಿರಾಟ, ಊಟಗಳಷ್ಟೆ ಅಥವಾ ಅದಕ್ಕಿಂತ ಮಿಗಿಲು ಎನ್ನುವುದನ್ನು ವಿಭಾ ಒಂದು ಸರಳ ಕವನದ ಮೂಲಕ ಕಟ್ಟಿಕೊಡುತ್ತಾರೆ.

ಒಂದು ರೊಟ್ಟಿ | ಒಂದು ಕವಿತೆ

ಕೇಳಲೊಂದಿಷ್ಟು ಸಂಗೀತ

ಇದ್ದರೆ ಸಾಕು | ಈ ಸೂರಿನಡಿ

ಒಬ್ಬಳೇ ಇದ್ದು ಬಿಡುವೆ ಎಂಬ

ಜಂಬವಿತ್ತಲ್ಲ | ಹಾಗಾದರೆ, ಈ ಸಂಜೆ

**ಏಕಾಂತಕ್ಕೆ ಜೀವ**

**ತುಂಬಲು ನೀನು ಬೇಕು**

**ಅಂತ ಯಾಕನ್ನಿಸಬೇಕು?**

**('ಏಕಾಂತ ಸಂಜೆ' - ಜೀವಮಿಡಿತದ ಸದ್ದು - ಪುಟ ೧೭)**

ಹೌದು ಯಾಕನ್ನಿಸಬೇಕು? ಇದು ದೇಹದ ಪ್ರಾಥಮಿಕ ಅವಶ್ಯಕತೆಗಳನ್ನೂ ಮೀರಿ, ಮನಸ್ಸಿಗೆ ಹಿತವಾಗಿರುವುದೇನೋ ಬೇಕು ಎನ್ನುವ ಉತ್ತರವನ್ನೇ ನಿರೀಕ್ಷಿಸುತ್ತಿದೆ. ಈ ಪರಸ್ಪರಾವಲಂಬನೆಗೆ ಸಾಮಾಜಿಕವಾದ ಅದಕ್ಕಿಂತಲೂ ಮುಂದುವರಿದು ಭಾವನಾತ್ಮಕ ಕಾರಣವಿದೆ ಎನ್ನುವುದೇ ಇಲ್ಲಿನ ಭಾವಾರ್ಥ. ಗಂಡು ಹೆಣ್ಣಿನ ಅನುನಯದಲ್ಲಿ ಎಲ್ಲವೂ ತೆರೆದ ಪುಸ್ತಕದಂತೆ. ಇದನ್ನು ಹೇಮಾ ಪಟ್ಟಣಶೆಟ್ಟಿಯವರು ಧಾರುಣಿ, ತೇಜಸ್ಸು, ಆಧಾರ, ಕನ್ಯೆ, ಮನ ಎಂಬ ಪಂಚಸೂತ್ರಗಳಲ್ಲಿ ಹೆಣ್ಣು ಗಂಡಿನ ಬದುಕಿನ ಅವಿಚ್ಛಿನ್ನ ಭಾಗವಾಗಿರುವುದನ್ನು ಕಟ್ಟಿಕೊಡುತ್ತಾರೆ:

**ನಿನ್ನ ನಿರ್ಬಯಲಲ್ಲಿ ಸೇರಿ ಬಯಲಾಗಿರುವ**

**ಗಗನ - ತನು ಮನು ನಾನು**

**ಅವನ ಶ್ರದ್ಧಾಪೂರ್ಣ ಮನ ನಾನು**

**ಅಲ್ಲವೆ ನನ್ನ ಮನ–ಮನು**

**(ಪಂಚಸೂತ್ರ - ವಿರಹೋತ್ಸವ - ಪುಟ ೩೦)**

ಇಲ್ಲಿಯ ನಿರೂಪಕಿ ಪ್ರೇಮದ, ದಾಂಪತ್ಯದ ಸಿಹಿಯನ್ನು ಸೂರೆಗೊಳ್ಳುತ್ತಿದ್ದಾಳೆ. ಗಂಡು-ಹೆಣ್ಣಿನ ಈ ಸಹಜ ಅನುರಾಗವನ್ನು ದಾಂಪತ್ಯವೆಂಬ ಬಂಧನದಲ್ಲಿ ಬಿಗಿದಾಗ ಅದಕ್ಕೊಂದು ಬಿಗಿತ ಅಂಟಿಕೊಂಡು ಬಿಡುತ್ತದೆ. ಕ್ರಮೇಣ ಭಾವಮಾಧುರ್ಯ ಕಳೆದುಹೋಗುತ್ತದೆ ಅಥವಾ ಕಡಿಮೆಯಾಗುತ್ತದೆ. ಅದಕ್ಕೆ ಒಲವಿನ ಹುಡುಗ 'ಗಂಡ'ನಾಗುವ ಭಯವನ್ನು ಈ ಕವಯಿತ್ರಿ ಹೀಗೆ ವ್ಯಕ್ತಪಡಿಸಿದ್ದಾರೆ.

**ವರ್ಷಗಳ ಹಿಂದೆ ನಾ ಹುಡುಗಿ**

**ಹುಡುಗ ಇವನಾಗಿದ್ದ**

**ಬಯಕೆ ಕಣ್ತೆರೆದು ಮೈ ಬಿಗಿದು ನಿಧಾನ**

**ಸುತ್ತಿ ಬಳಸಿತು ನಮ್ಮ**

**ಹುಡುಗ ಗಂಡು | ಕಲಿಯಾದ.**

**ಗಂಡ ಸಿಗಬಹುದು, ಗಂಡು ಸಿಗಬಹುದು**

**ಗಂಡನೊಳಗಿನ ಗಂಡು | ಹುಡುಗ ಬೇಕೆನಗೆ**

**ಹುಡಕಬೇಕೆನಗೆ**

**('ಗಂಡನೊಳಗಿನ ಗಂಡು ಹುಡುಗ' - ವಿರಹೋತ್ಸವ - ಪುಟ ೪೭)**

ವರ್ಷಗಳ ಹಿಂದಿನ ಹುಡುಗನನ್ನು ಗಂಡನಲ್ಲಿ ಹುಡುಕುವುದು ಅನಿವಾರ್ಯವಾಗುವ ಈ ಪ್ರಸಂಗ ಪ್ರೇಮ-ಪ್ರಣಯಗಳ ಸಾಮಾಜಿಕ ಆಯಾಮವನ್ನು ಪ್ರದರ್ಶಿಸುತ್ತದೆ. ಹುಡುಗ ಗಂಡನಾದ ಕೂಡಲೇ ಅಥವಾ ಗಂಡ ತನ್ನ 'ಹುಡುಗ'ತನವನ್ನು ಕಳೆದುಕೊಂಡ ಕೂಡಲೇ ಒಬ್ಬರು ಮೇಲು-ಇನ್ನೊಬ್ಬರು ಕೀಳು ಅಥವಾ ಒಬ್ಬರು ಹೇಳುವವರು ಇನ್ನೊಬ್ಬರು ಪಾಲಿಸುವವರು ಆಗಿ ಬಿಡುವ ಅಪಾಯವೇ ಈ ಭಯಕ್ಕೆ ಕಾರಣವಾಗಿರಬಹುದು. ಇಂತಹುದೇ ಭಯವನ್ನು ರಶ್ಮಿ ಹೆಗಡೆ ಹೀಗೆ ತೋರ್ಪಡಿಸುತ್ತಾರೆ:

**ನೀ ಭಯ ಹುಟ್ಟಿಸುತ್ತೀ.....**
**ಗೆಳೆಯ ಪ್ರೇಮಿ ಹಿತೈಷಿ....**
**ಏನೋ ಒಂದು ಆಗಿ ಬಿಡುವ ಭಯ**
**ಅಥವಾ**
**ಏನೋ ಆಗದೆ ಹಾಗೇ । ಕರಗಿಬಿಡುವ ಭಯ**

**(ಹೆಸರಿಲ್ಲದ ಹೆಜ್ಜೆಗಳು - ಲೆಕ್ಕಕ್ಕೆ ಸಿಗದವರು - ಪುಟ ೨೮)**

ಯಾವುದೇ ಸಂಬಂಧಕ್ಕೆ ಹೆಸರು ಅಂಟಿಕೊಂಡ ಕೂಡಲೇ ಅದು ಇನ್ನೇನೋ ನಿರ್ವಹಿಸುವತ್ತ ಹೆಜ್ಜೆ ಹಾಕತೊಡಗುತ್ತದೆ. ಹಾಗಾಗಿ ಈ ಕವಿಗೆ ಅಂತಹ ಹೆಸರಿಸಿಕೊಳ್ಳುವ ಸಂಬಂಧವಾವುದೂ ಬೇಡವಾಗಿದೆ. ಇದನ್ನು ಮನಸ್ಸಿಗೆ ಸಂಬಂಧಿಸಿದ, ಅವ್ಯಕ್ತ ಸಂಬಂಧವಾಗಿಸಿಕೊಳ್ಳುವಲ್ಲಿಯೇ ಕವಿಯ ಆಸಕ್ತಿ ಇದೆ. ಇಂತಹುದೇ ಅವ್ಯಕ್ತ ಸ್ನೇಹ-ಸಂಬಂಧ ಹೆಸರಿಸಿಕೊಂಡಾಗ ಸಹಜತೆ ಮಾಯವಾಗುವುದನ್ನು ಇನ್ನೊಬ್ಬ ಕವಯಿತ್ರಿ ಬಿಚ್ಚಿಡುತ್ತಾಳೆ.

**ಕೆರೆ ಏರಿ । ಹೆಜ್ಜೆ ಗುರುತು**
**ನಗು ಮುನಿಸು । ಮಿನುಗು ಚುಕ್ಕಿ**
**ಎಲ್ಲ ಹೇಳುತ್ತಿವೆ । ಗೆಳೆಯ**
**ನೀ ನನ್ನ ಗಂಡನಾಗಬಾರದಿತ್ತು!**

**('ನೀ ನನ್ನ ಗಂಡನಾಗಬಾರದಿತ್ತು' - ಕನಸ ತುಂಬಿದ ಕವಿತೆ, ಎನ್.ಆರ್. ರೂಪಶ್ರೀ - ಪುಟ ೪೧)**

'ಗಂಡನಾಗಬಾರದಿತ್ತು' ಎಂಬುದು ಗಂಡನಿಗೆ 'ಗಂಡ' ಸ್ಥಾನಮಾನ ಗತ್ತು-ಗಮ್ಮತ್ತುಗಳು ಆವರಿಸಿ ನೈಜ ಪ್ರೇಮವನ್ನು ದೂರ ಮಾಡಬಾರದೆಂಬ ಧ್ವನ್ಯರ್ಥವೇ ಹೊರತು 'ಗಂಡ' ಎಂಬ ಸಂಬಂಧವನ್ನು ನಿರಾಕರಿಸುತ್ತಿರುವ ರೀತಿಯೇನೂ ಅಲ್ಲ. ಗಂಡನಾಗಿಯೂ ಪ್ರೇಮಿಯಾಗಿರುವ ಸಹಜೀವಿಯನ್ನು ಹೆಣ್ಣು ಬಯಸುತ್ತಾಳೆ ಎಂಬುದು ಹಿಂದಿನ ಮೂರು ಕವನಗಳ ಒಳಾರ್ಥವಾಗಿದೆ. ಸರಳವಾದ ಬಂಧದಲ್ಲಿ ಸಹಜವಾಗಿ ಮೂಡಿಬಂದಿರುವ ಈ ಕವನಗಳು, ಭಾವಮಾಧುರ್ಯದಿಂದ ಗಮನ ಸೆಳೆಯುತ್ತವೆ.

ಇಷ್ಟಾಗಿಯೂ ಹೆಸರಿಸಿಕೊಂಡ ಸಂಬಂಧದಲ್ಲಿ ಪ್ರೇಮವೊಂದು ಸಹಜವಾಗಿರುವುದು ಸಾಧ್ಯ ಇಲ್ಲವೇ? ಎಂದು ಯೋಚಿಸಿದರೆ ಅಲ್ಲೂ ಕೂಡ ಹೆಣ್ಣು ಒಂದು ಹೆಜ್ಜೆ ಮುಂದೆ ಹೋಗಿ

ಅಂತಹ ಸಂಬಂಧವನ್ನು ಗಟ್ಟಿಗೊಳಿಸಿಕೊಳ್ಳುತ್ತಾರೆ. ಇಲ್ಲಿ ಅನುನಯವೇ ಅವರನ್ನು ಒಂದು ಗೂಡಿಸುವ ಮಾಧ್ಯಮ. ಸ. ಉಷಾ ಅವರು ನಿರೂಪಿಸುವುದು ಹೀಗೆ:

**ಹೇಳು ಗೆಳೆಯ**
**ನಿನಗನ್ನಿಸುವುದಿಲ್ಲವೇ**
**ನಿನ್ನ ಕನಸಿಗೆ ನಾನೂ | ಬಣ್ಣ ತರಬಹುದೆಂದು**
**ಬೇಡಯ್ಯ**
**ನಿನ್ನ ಸಹಸ್ರಶೀರ್ಷ | ಸಹಸ್ರಪಾದ**
**ಸಹಸ್ರಬಾಹುಗಳನ್ನೆಲ್ಲ**
**ಕಿತ್ತಿಟ್ಟು ಬಣ್ಣ ಅಳಿಸಿಕೊಂಡು | ಬಾ ಗೆಳೆಯ**
**ಮೈಮುಟ್ಟಿ ಮನಮುಟ್ಟಿ**
**ಒಮ್ಮೆಯಾದರೂ ಮುಟ್ಟು**
**ಮರೆ ನಿನ್ನ ಹಳೆ ರೋಗ ಒಂದು ಕ್ಷಣ**

**('ಈ ನೆಲದ ಹಾಡು' - ಈ ನೆಲದ ಹಾಡು - ಪುಟ ೫)**

ಈಗಾಗಲೇ ಪ್ರಾಪ್ತವಾಗಿರುವ ಉಪಾಧಿಗಳನ್ನೆಲ್ಲ ತೊರೆದು, ಅವುಗಳಲ್ಲಿರುವ ಹಳೆತನವನ್ನು ಹೋಗಲಾಡಿಸಿಕೊಂಡು ಹೊಸತನ ಪ್ರಾಪ್ತಗೊಳಿಸಿಕೊಳ್ಳಲು ಇರುವ ಸಾಧ್ಯತೆಯನ್ನು ಕವನ ಉಚ್ಚರಿಸುತ್ತದೆ. ಇಲ್ಲಿ ತನ್ನ ಸಹಜೀವಿಯಲ್ಲೂ, ಅವಳೊಂದಿಗಿನ ಜೀವನದಲ್ಲೂ ಹೊಸತನವನ್ನು ಗ್ರಹಿಸುವ, ಆಸ್ವಾದಿಸುವ ಮನಸ್ಥಿತಿಯನ್ನು ಬೆಳೆಸಿಕೊಳ್ಳಲು ಈ ಕರೆ. ಹಿಂದಿನಿಂದ ಬಿತ್ತಲಾದ ಪೂರ್ವಗ್ರಹಗಳನ್ನು ಬಿಡಲಾಗದಿದ್ದರೆ ಆಗಲೂ ಅವಳ ಸಾಂತ್ವನವಿದೆ. ಅವನಲ್ಲಿ ವಿಶ್ವಾಸ ತುಂಬುವ ಭರವಸೆಯೊಂದಿಗೆ:

**ಈಗ ಹೇಳು**
**ಯಾರವರು ನಿನ್ನನೀ ಗತಿಗೆ ತಂದವರು**
**ಅಥವಾ ಮರೆತು ಬಿಡು**
**ನಿನ್ನೆಗಳು ನಾಳೆಗಳು | ಕರಗಿ ಹೋಗಲಿ ಇಂದು**
**ಒಂದು ಬಿಸಿ ಚುಂಬನದಲಿ**

**(ಪ್ರಿಯತಮನ ಹಾಡು - ಈ ನೆಲದ ಹಾಡು - ಪುಟ ೪೭)**

ಭೂತಕಾಲದ ಕಹಿ, ಭವಿಷ್ಯತ್ತಿನ ಭಯವನ್ನು ಮರೆತು ವರ್ತಮಾನದಲ್ಲಿ ಬದುಕಲು ಅನುನಯದಿಂದ ತನ್ನ ಸಂಗಾತಿಯನ್ನು ಸಂತೈಸುತ್ತಿರುವ ಈ ಪರಿ ಹೆಣ್ಣಿನ ಜೀವನಪ್ರೀತಿ, ಪೊರೆಯುವ ಶಕ್ತಿಗಳನ್ನು ತೆರೆದಿಡುತ್ತದೆ. ಈ ಎಲ್ಲ ಕವನಗಳೂ ಏಕಮುಖಿ ಸಂವಾದಗಳೇ ಆಗಿರುವುದೂ ಕೂಡ ಎದುರಿನಿಂದ ಬರುವ ಪ್ರತಿಕ್ರಿಯೆಯಲ್ಲಿ ಸಕಾರಾತ್ಮಕ ಉತ್ತರಗಳು ನಿರೀಕ್ಷಿತವೇ ಆಗಿದೆ ಎಂದಷ್ಟೆ ಊಹಿಸಬಹುದು.

ಈ ಪ್ರೇಮಪ್ರವಾಹದಲ್ಲಿ ಕಳೆದುಹೋಗದೆ ಈ ನಡುವೆಯೂ ವಾಸ್ತವವನ್ನು ಬದುಕಿಸುತ್ತಿರುವ ಚಿತ್ರಣಗಳೂ ಇವೆ. ಸುಕನ್ಯಾ ಮಾರುತಿಯವರು ಸತ್ತ ನಂತರ ಸ್ಮಾರಕ ಮಾಡುವ ಪ್ರೇಮವನ್ನು ಹಿನ್ನೆಲೆಯಾಗಿಟ್ಟುಕೊಂಡು ಹೀಗೆ ಹೇಳುತ್ತಾರೆ.

**ನಾ ಸತ್ತ ಮೇಲೆ ಜನ ಮೆಚ್ಚಿಕೊಳ್ಳುವ**
**ತಾಜಮಹಲು - ಗೋಳಗುಮ್ಮಟಗಳು**
**ನನಗೆ ಬೇಡ ಹುಜೂರ | ನಾನಿರುವಾಗಲೇ**
**ರೊಟ್ಟಿ - ಬಟ್ಟೆ ತಲೆಯ ಮೇಲೊಂದು ಸೂರು | ಕೊಟ್ಟು ನೋಡು**
**ಯಾವ ಮುಮತಾಜ ರಂಭಾಳಿಗಿಂತ**
**ಮಿಗಿಲಾಗಿ ಪ್ರೇಮಿಸುತ್ತೇನೆ**

**(ತಾಜಮಹಲಿನ ಹಾಡು - ನಾನೆಂಬ ಮಾಯೆ - ಪುಟ ೧೪೧)**

ಪ್ರೇಮ ಕಾಮಗಳೆಲ್ಲವೂ ಹೊಟ್ಟೆ ತುಂಬಿದ ನಂತರದವು. ಹೊಟ್ಟೆಪಾಡಿಗೇ ಹೋರಾಟ ನಡೆಸಬೇಕಾದ ಪರಿಸ್ಥಿತಿ ಇರುವಾಗ ಪ್ರೇಮ-ತ್ಯಾಗಗಳ ಕಲ್ಪನೆ ಹಾಸ್ಯಾಸ್ಪದವೆನಿಸಿಕೊಳ್ಳುತ್ತದೆ. ಆರ್ಥಿಕ ಸದೃಢತೆ ಅಥವಾ ಪ್ರಾಥಮಿಕ ಅವಶ್ಯಕತೆಗಳೇ ದುರ್ಲಭವಾಗಿರುವಾಗ ಪ್ರೇಮದ ಕನಸು ಕಾಣಲು ಇಲ್ಲದವರಿಗೆ ಸಾಧ್ಯವಾಗುವ ಮಾತೆ! ಹೀಗೆ ಪ್ರೀತಿ ಪ್ರೇಮಗಳಿಗೂ ಆರ್ಥಿಕ ಲೆಕ್ಕಾಚಾರದ ನಂಟು ಇದ್ದೇ ಇರುತ್ತದೆ ಎಂಬುದಿಲ್ಲಿ ವಿದಿತ. ಇದನ್ನೇ ಇನ್ನೊಂದು ಆಯಾಮದಲ್ಲಿ ಪ್ರತಿಭಾ ನಂದಕುಮಾರ್ ಅವರು ತಮ್ಮ 'ದಾಂಪತ್ಯ'ದಲ್ಲಿ ಚಿತ್ರಿಸುತ್ತಾರೆ.

**ಎಂತೆಂತಹ ಕದನಗಳನ್ನು ಕಾದಿದೆವು ನಾವು**
**ಹರಿತ ಖಡ್ಗ ಚಾಟಿ ಸೀಳಿ**
**ಕತ್ತರಿಸುವ ಮಾತು ಬಳಸಿ**
**ಕೊನೆಗೆ ಹೇಗೋ ಮುಗಿಯಿತು**
**ನಾನೊಂದು ಕುರೂಪಿ ಕಪ್ಪೆಯಾದರೆ**
**ನೀನೊಂದು ಕೇರೆ ಹಾವು**
**ಈ ಕೊಳದ ಗಡಿ ದಾಟಲಾರೆವು**
**ಕೈ ಕುಲಕಿ ನಮ್ಮ ನಮ್ಮ ಮೂಲೆಗೆ ಸೇರಿದೆವು**

**('ದಾಂಪತ್ಯ' - ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು - ಪುಟ ೬೩)**

ಇಲ್ಲಿ 'ಕಪ್ಪೆ', 'ಕೇರೆ ಹಾವು' ಲೈಂಗಿಕ ಪ್ರತಿಮೆಗಳಾಗಿ ಗೋಚರಿಸುತ್ತವೆ. 'ಗಂಡ ಹೆಂಡರ ಜಗಳ ಉಂಡು ಮಲಗೋವರೆಗೆ' ಎನ್ನುವ ಗಾದೆ ಮಾತಿನಂತೆ ಲೈಂಗಿಕ ಚಟುವಟಿಕೆ ದಾಂಪತ್ಯದ ಭಾಗವಾಗುವ, ದಾಂಪತ್ಯವನ್ನು ಸರಿಪಡಿಸುವ ಸಾಧನವಾಗುವ ವಾಸ್ತವವನ್ನೂ ಈ ಕವಿ ಗ್ರಹಿಸುತ್ತಾರೆ. ದೈನಂದಿನ ಸಾಂಸಾರಿಕ ಚಟುವಟಿಕೆಗಳಲ್ಲಿ ಕಳೆದುಹೋಗಿರುವ ಗಂಡ-ಹೆಂಡತಿಗೆ ಇದು ಯುದ್ಧವಿರಾಮದ ಸಮಯ, ಮತ್ತೆ ಬೆಳಗಾದರೆ ಕದನಾರಂಭ. ಹೀಗೆ ದೈನಂದಿನ

ಚಟುವಟಿಕೆಗಳನ್ನು ಅವುಗಳ ವಸ್ತುನಿಷ್ಠ ನೆಲೆಯಲ್ಲಿ ಪರಿಶೀಲಿಸುವ ಚಿಕಿತ್ಸಕ ನೋಟವನ್ನಿಲ್ಲಿ ಕಾಣಬಹುದು.

'ಪ್ರೇಮ'ವು ವ್ಯಾಪಾರೀಕರಣದ ಒಂದು ಸಾಧನವೂ ಆಗುವ ವ್ಯಂಗ್ಯವನ್ನು ಕವಿತಾ ರೈ ಅವರು ದೃಷ್ಟಾಂತದೊಂದಿಗೆ ಕಟ್ಟಿಕೊಡುತ್ತಾರೆ.

**ಹಸಿದು ರೊಟ್ಟಿಗಾಗಿ | ಅರಸುತ್ತಿರುವಾಗಲೇ ಸಿಕ್ಕಳು**
**ಲೈವ್ ಬ್ಯಾಂಡಿನಲಿ ಕುಣಿವ**
**ಅವಳು ಅವನಷ್ಟೇ ಹಸಿದಿದ್ದಳು**
**ಪ್ರೀತಿ ಮಾತ ಕಲಿಸಿ**
**ಜೊತೆಗೆ ಉಂಡ ಕ್ಷಣಗಳು**
**ಅವಳಿಂದಲೇ ಹಣ**
**ಕಸಿದು ರಂ ಕುಡಿದು | ಮತ್ಯಾರೊಂದಿಗೋ**
**ಅಲೆಯುವುದು ಕಲಿಸಿತು**
**ಹಸಿವು ಹಾಗೆ | ಜೀವಂತವಾಗಿತ್ತು.**

**(ಹಸಿವು ಹಾಗೆ – 'ನೀರತೇರು' – ಪುಟ ೫೮)**

'ಕಾಮ'ವೇ ಪರಮೋದ್ದೇಶವಾಗಿ ಕಂಡಾಗ ಪ್ರೇಮ'ದ ದುರ್ಬಳಕೆಯಾಗುವ ಪರಿ ಇದು. ಇಲ್ಲಿ ಹುಡುಗಿ ಲೈವ್ ಬ್ಯಾಂಡ್‌ನಲ್ಲಿ ಕುಣಿಯುವ ಕಾರಣದಿಂದ ಪ್ರೀತಿಯಿಂದ ವಂಚಿತಳಾಗುವ ವಿಪರ್ಯಾಸವೂ ಇದೆ; ಲೈವ್ ಬ್ಯಾಂಡ್ ಹುಡುಗಿಯಲ್ಲಿನ ನೈಜ ಪ್ರೇಮವನ್ನು ಗುರುತಿಸಲಾಗದ, ಸ್ವಾರ್ಥ ಮನಸ್ಸೂ ಇನ್ನೊಂದು ಬಗೆಯ ವಿಪರ್ಯಾಸ. 'ಪ್ರೇಮ'ವೆಂದೂ ನಂಬಿಕೆಯ ತಳಹದಿಯನ್ನು ಹೊಂದಿರುವಂತಹದ್ದು. ಎಲ್ಲ ಸಂಬಂಧಗಳನ್ನೂ ಬಂಧಿಸಿಡುವುದು ನಂಬಿಕೆಯೇ. ಇಂತಹ ನಂಬಿಕೆ-ವಿಶ್ವಾಸಗಳು ಇಲ್ಲವಾದಾಗ ಸಂಬಂಧಗಳ ನಡುವೆ ಏರ್ಪಡುವ ಬಿರುಕನ್ನು ವಿಜಯಲಕ್ಷ್ಮಿ ಹೀಗೆ ಗುರುತಿಸುತ್ತಾರೆ :

**ಜನುಮ ಜನುಮದ ಸ್ನೇಹ**
**ಬಂಧನವ ಬಿಗಿಯೆಂದು**
**ನಂಬಿದೆಮ್ಮಯ ನಡುವೆ**
**ಮಂಜಿನಾ ತೆರೆಯಡ್ಡ**
**ಬಂದೆಮ್ಮ ಎಂದೆಂದು**
**ದೂರಕೆಳೆದೊಯ್ದಿತು**

**('ನನ್ನವರೆ ನನಗಿಲ್ಲ' - ಚಿನ್ನದ ಗೆರೆ - ಪುಟ ೪೩)**

ಇಲ್ಲಿ ಅಪನಂಬಿಕೆಯನ್ನು 'ಮಂಜಿನ ತೆರೆ'ಗೆ ಹೋಲಿಸಿರುವುದು ವಿಶೇಷವಾಗಿದೆ. 'ಮಂಜು' ಸ್ಪರ್ಶಕ್ಕೆ ತಂಪು. ಪರಿಣಾಮದಲ್ಲಿ ರಕ್ತವನ್ನೇ ಹೆಪ್ಪುಗಟ್ಟಿಸಿ ಯಾರಿಗೂ ಸುಳಿವು ಕೊಡದಂತೆ,

ಹಿಂಸಿಸದೆ ಸಾಯಿಸುತ್ತದೆ. ಹೀಗೆ ಸ್ನೇಹ ಸಂಬಂಧಗಳ ನಡುವೆ ಬರುವ ಭಿನ್ನಪ್ರಾಯಗಳು ಅವುಗಳನ್ನು ಬಹಳ ದೂರ ಸರಿಸಬಹುದು. ಸಂಬಂಧಗಳಲ್ಲಿನ ವ್ಯಾವಹಾರಿಕ ತನವನ್ನು ಅಥವಾ ಸಂಬಂಧಗಳ ನಡುವೆ ಬರುವ ವ್ಯವಹಾರವನ್ನು ಸುಕನ್ಯಾ ಮಾರುತಿಯವರ ವಿಡಂಬನೆಯಲ್ಲಿ ಕಾಣಬಹುದು.

**ಎಲ್ಲ ಸಂಬಂಧಗಳೂ | ಇಷ್ಟೊಂದು**
**ಸಡಿಲವೆಂದು | ನಾನಂದುಕೊಂಡಿರಲಿಲ್ಲ.**
**ಒದ್ದರೆ ಕಾಲು**
**ಹುದುಲಲ್ಲಿ ಹುದುಗುತ್ತವೆ.**
**ಬರೀ ಕೊಡುವುದಷ್ಟೇ | ಗೊತ್ತಿದ್ದ ನನಗೆ,**
**ಪಡೆಯುವುದಷ್ಟೇ | ಗೊತ್ತಿರುವ**
**ಜಾಣ ಸಂಬಂಧಗಳು**
**ಭಯ ಹುಟ್ಟಿಸುತ್ತವೆ.**
**(ಸಂಬಂಧಗಳು - ನಾನೆಂಬ ಮಾಯೆ - ಪುಟ ೨೩೮)**

ವಾಚ್ಯದಂತೆ ಭಾಸವಾದರೂ ಮುಗ್ಧ ಮನಸ್ಸುಗಳು ಸಂಬಂಧಗಳಿಗೆ ಕೊಡುವ ಆದ್ಯತೆಯು ಬಾಹ್ಯವಾದ ಸಾಮಾಜಿಕ-ಆರ್ಥಿಕ ಸಂಬಂಧಿ ಕಾರಣಗಳಿಂದ ಅಳೆಯಲ್ಪಟ್ಟಾಗ ಮತ್ತೆ ಮೇಲು-ಕೀಳುಗಳೆಂಬ ಅಂತಸ್ತುಗಳು ಮನಸ್ಸಿನಲ್ಲಿ ಹುಟ್ಟಿಕೊಳ್ಳುತ್ತವೆ. ಸಂಬಂಧಗಳು ಕಳೆದುಹೋಗಲು| ದೂರವಾಗಲು 'ಲಿಂಗ' ಕಾರಣವೂ ಕೈ ಜೋಡಿಸುತ್ತದೆ. 'ಸಾಧನೆ'ಯ ಹಾದಿಯಲ್ಲಿ ಹೆಣ್ಣೊಂದು ಅಡ್ಡಿ ಎಂದು ಭಾವಿಸುವ ಮಹತ್ವಾಕಾಂಕ್ಷೆ ಉಳ್ಳವರು ಸಂಬಂಧವೊಂದನ್ನು ದೂರವಿರಿಸುವ ನೋವು, ಅಸಹಾಯಕತೆಯನ್ನು ಗೀತಾ ವಸಂತ ವ್ಯಕ್ತಪಡಿಸುವುದು ಹೀಗೆ:

**ಹಿಡಿತುಂಬ ಪ್ರೀತಿ ಹಿಡಿದು**
**'ಬೇಕಾ' ಎಂದಾತ**
**ಪದತಲದಿ ತಲೆಯಿಟ್ಟು**
**'ದೇಹೀ' ಎಂದಾತ**
**ಹೋಗುವಾಗ 'ಬರಲಾ' ಎನ್ನಲಿಲ್ಲ**
**ಅದ್ವೈತದ ಭ್ರಮೆ ಕಳಚಿತು.**
**ಅವನೊಳಗೆಲ್ಲ ವಾಂಛೆ, ಕಾಮನೆ | ಮಹತ್ವಾಕಾಂಕ್ಷೆ, ಛಲ**
**ಸಾಧಕನ, ಸುಧಾರಕನ ಒಡೆಯನ**
**ಬಣ್ಣ ಬಣ್ಣದ ಅಂಗಿ ತೊಡುವ ಆಸೆ**
**('ಅಂಗಿ' - ಪರಿಮಳದ ಬೀಜ - ಪುಟ ೨೭)**

'ಬಳಸಿ ಬಿಸಾಡು' ಎಂಬ ಆಧುನಿಕ ನೀತಿಯನ್ನು ಕವನ ನೆನಪಿಸುತ್ತದೆ. ದೈಹಿಕ, ಮಾನಸಿಕ ಅಗತ್ಯಕ್ಕೆ ತಕ್ಕಂತೆ ಹೆಣ್ಣನ್ನು ಬಳಸಿಕೊಂಡು, ಆಸೆ ತೀರಿದ ನಂತರ ತಮ್ಮ ಸಾಧನೆಯೇ

ದೊಡ್ಡದಾಗಿ ಕಾಣಿಸಿಕೊಳ್ಳುವ ಸ್ವಾರ್ಥ ಕೂಡ ಕಾಣುತ್ತದೆ. ಹಾಗಾದರೆ ಆಕೆಯ ಪ್ರತಿಕ್ರಿಯೆಗೆ ಅವಕಾಶವಿಲ್ಲವೆ! ಹೀಗೆ ಹೆಣ್ಣು-ಗಂಡಿನ ಸಂಬಂಧದಲ್ಲಿ ಹೆಣ್ಣು ತಾನಾಗಿಯೇ ದೂರ ಸರಿದರೂ ಅಥವಾ ಗಂಡು ತಾನಾಗಿಯೇ ಬಿಟ್ಟು ಹೋದರೂ ನೋವು ಮಾತ್ರ ಹೆಣ್ಣಿಗೇ ಎಂಬ ವಿಪರ್ಯಾಸ ಕೂಡ ಇಲ್ಲಿ ಚಿತ್ರಿತವಾಗಿದೆ.

### ಆ. ಅಮೂರ್ತ ಸಂಗತಿಗಳ ಶೋಧ

ತನ್ನ ಜ್ಞಾನೇಂದ್ರಿಯಗಳಿಗೆ ನಿಲುಕದ ಕೌತುಕದ ಬಗ್ಗೆ ಮನುಷ್ಯರಿಗೆ ಎಂದೆಂದೂ ತಣಿಯದ ಕುತೂಹಲ. ಸೃಷ್ಟಿ, ಸ್ಥಿತಿ, ಲಯಗಳ ನಿರ್ವಹಣೆಯ ಕುರಿತು ಕಾಲಕಾಲಕ್ಕೆ ಹೊಸ ಹೊಸ ಆಲೋಚನೆಗಳನ್ನು ಮಾಡುತ್ತಾ, ತನ್ಮೂಲಕ ತಾತ್ವಿಕ ಸಿದ್ಧಾಂತಗಳನ್ನು ಹುಟ್ಟು ಹಾಕಲಾಗಿದೆ. ಬುದ್ಧ, ಶಂಕರ, ಮಧ್ವ, ರಾಮಾನುಜ, ಚೈತನ್ಯ ಮುಂತಾದ ದಾರ್ಶನಿಕರು ನೀಡಿದ ತಾತ್ವಿಕ ಚಿಂತನೆಗಳು ಆಧ್ಯಾತ್ಮಿಕವಾಗಿದ್ದು ಧಾರ್ಮಿಕತೆಯ ಲೇಪನ ಪಡೆದುಕೊಂಡವು. ಇನ್ನು ಬಸವ, ಅಲ್ಲಮ ಮುಂತಾದ ವಚನಕಾರರ ಅಮೂರ್ತತೆಯ ಕುರಿತ ಚಿಂತನೆಗಳು ಸಾಮಾಜಿಕ ಬದುಕಿಗೆ ಹತ್ತಿರವಾಗಿದ್ದರೂ ಅವೂ ಕೂಡ ಧಾರ್ಮಿಕ ಕಟ್ಟಳೆಯಿಂದ ಬಂಧಿತವಾಗಿವೆ. ಅಕ್ಕಮಹಾದೇವಿಯಂತಹ ಶಿವಶರಣೆಯರದು ಇನ್ನೊಂದು ಬಗೆಯ ಆಧ್ಯಾತ್ಮಿಕತೆ. ಜನನ-ಮರಣ-ದೇವರು-ಧರ್ಮ ಮುಂತಾದ ನಂಬಿಕೆಗಳನ್ನಾಧರಿಸಿಯೋ ಅಮೂರ್ತ ಚಿಂತನೆ ಆರಂಭವಾಗುತ್ತವೆ. ಹೀಗೆ ಮಹಿಳಾಕಾವ್ಯ ಆಧ್ಯಾತ್ಮಿಕತೆ ಕುರಿತು, ಸಾವಿನ ಕುರಿತು ನಡೆಸಿದ ಚಿಂತನೆಗಳು ನೀಡಿದ ಪ್ರತಿಕ್ರಿಯೆಗಳನ್ನು ಪರಿಶೀಲಿಸುವ ಉದ್ದೇಶದೊಂದಿಗೆ ಈ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಮುಂದುವರಿಸಲಾಗಿದೆ.

ಅಮೂರ್ತವಾದ ಚಿಂತನೆಗಳನ್ನು ಅದು ಅಧ್ಯಾತ್ಮವಿರಲಿ, ಸಾವಿನ ಪರಿಕಲ್ಪನೆಯಿರಲಿ ಸಾಹಿತ್ಯದಲ್ಲಿ ಅಭಿವ್ಯಕ್ತಿಸುವಾಗ ಪ್ರತಿಮೆಗಳು, ರೂಪಕಗಳ ಮೂಲಕ ಹಿಡಿದಿಡುವ ಪ್ರಯತ್ನವಿರುತ್ತದೆ. ಪ್ರಕೃತಿ ಸಂಬಂಧಿತ ಪ್ರತಿಮೆಗಳ ಮೂಲಕ ಆಧ್ಯಾತ್ಮಿಕ ಚಿಂತನೆಗಳನ್ನು ಹಿಡಿದಿಡುವ ಸವಿತಾ ನಾಗಭೂಷಣ ಅವರು ಬೆರಳು ಎಂಬ ಪ್ರತಿಮೆಯನ್ನು ವಿಸ್ತರಿಸುವುದು ಹೀಗೆ:

> **ಚಿಮ್ಮಿತು ಚಾಚಿತು ಚಲಿಸಿತು | ಬೀಜದ ಬೆಳಕು**
> **ತತ್ತಿಯನಪ್ಪಿತು ತುತ್ತನು ಉಣಿಸಿತು**
> **ತಟ್ಟಿ ಮಲಗಿಸಿತು ತಾಯಿಯ ಬೆರಳು**
> **ಹುಟ್ಟದು ಸವೆಯಿತು ಹಾಯಿಯು ಹರಿಯಿತು**
> **ಹತ್ತೂ ದಿಕ್ಕಿಗೆ ಬೊಂಬಿನ ನೆರಳು**
> **ಕಾಣದ ಬೆರಳೊಂದು ಕೊಳಲನು ನುಡಿಸಿತು**
> **ಹಂಸೆಯ ಹಿಡಿದೆತ್ತಿ ಗಗನಕೆ ಚಿಮ್ಮಿತು**
> **ಝಗ್ಗೆಂದು ಹೊಳೆಯಿತು ಮಿಂಚಿನ ನೆರಳು**
>
> **('ಬೆರಳು' - ಆಕಾಶಮಲ್ಲಿಗೆ - ಪುಟ ೧೩೭)**

ಇಲ್ಲಿ 'ಬೆರಳು' ಸಚರಾಚರ ಜಗತ್ತನ್ನು ನಿಯಂತ್ರಿಸುವ ಶಕ್ತಿಯಾಗಿ ಬಳಕೆಯಾದರೆ, 'ಸವೆದ ಹುಟ್ಟು', 'ಹರಿಯುವ ಹಾಯಿ', ಬೊಂಬಿನ ನೆರಳು' ಮುಂತಾದ ರೂಪಕಗಳು ಕ್ಷೀಣಿಸುವ ಆಯುಸ್ಸು, ಜೀವನದ ನಶ್ವರತೆಗಳನ್ನು ಪ್ರತಿಮಿಸುತ್ತಿವೆ. 'ಹಂಸೆ' ಈ ಹಿಂದಿನ ಸಾಹಿತ್ಯ ಪರಂಪರೆಯಲ್ಲಿ ಬಳಕೆಯಾಗಿರುವ 'ಆತ್ಮ' ಅಥವಾ 'ಚೈತನ್ಯ'ವೆಂದು ಪರಿಗಣಿಸಬಹುದು. ಝುಗ್ಗೆಂದು ಹೊಳೆಯುವ ಮಿಂಚಿನ ನೆರಳು ಆತ್ಮಸಾಕ್ಷಾತ್ಕಾರವನ್ನು ಪ್ರತಿಮಿಸುತ್ತಿರಬಹುದು. ಹೀಗೆ ಜೀವ ಪೊರೆಯುವ, ನಿಯಂತ್ರಿಸುವ, ಕೊನೆಗಾಣಿಸುವ ಅಗೋಚರತೆಯನ್ನು ಪ್ರತಿಮೆಯ ಮೂಲಕ ಹಿಡಿದಿಡುವ ಪ್ರಯತ್ನವನ್ನು ವೈದೇಹಿ, ಎಚ್.ಎಲ್. ಪುಷ್ಪ, ರೂಪ ಹಾಸನ, ಡಾ. ವಿನಯಾ, ಚೇತನಾ ತೀರ್ಥಹಳ್ಳಿ ಮುಂತಾದವರೂ ಮಾಡಿರುತ್ತಾರೆ.

'ನವಿಲು' ಎಂಬ ರೂಪಕದ ಮೂಲಕ ವೈದೇಹಿ ಮನಸ್ಸಿನ ಅಪರಿಮಿತ ಶಕ್ತಿಯನ್ನು ಹೀಗೆ ವಿವರಿಸುತ್ತಾರೆ.

**ಕಳೆದೆಲ್ಲ ಬೆಳಗುಗಳು ಮರಳುವಂತೆ**
**ಸುತ್ತಿಟ್ಟ ಸುಪ್ತಗಳು ಹಿಂದುರುಳುವಂತೆ**
**ಜಗದ ವಿಸ್ಮಯವೆಲ್ಲ ಮುದ್ದು ಮಗುವಾದಂತೆ**
**ಕುಣಿದು ಕುಣಿದೂ ಬೆವರ | ಮಾಣಿಕ್ಯ ಹೊಳೆದಂತೆ**
**ಕದನ ಕುತೂಹಲ ರಾಗ | ಕಡೆದ ಸುಧೆಯಂತೆ**
**ಶುದ್ಧೋದನನ ಮಗ | ಎದ್ದು ಬಂದಂತೆ**
**('ನವಿಲು' - ವೈದೇಹಿ ಅವರ ಆಯ್ದ ಕವಿತೆಗಳು - ಪುಟ ೩೪)**

ನವಿಲಿನ ನರ್ತನ ವಿವಿಧ ಭಂಗಿಗಳ ಈ ವರ್ಣನೆ ಮನಸ್ಸಿನ ಅವರ್ಣನೀಯ ಪುಳಕವನ್ನು ಹೇಳುತ್ತಿರುವಂತೆ ಭಾಸವಾಗುತ್ತದೆ. ನೀಡಿರುವ ಉಪಮೆಗಳೂ ಸಹ ಅಮೂರ್ತವಾದ ಈ ಆನಂದವನ್ನು ವಿವರಿಸುವ ಪ್ರಯತ್ನ ಮಾಡಿವೆ. 'ಬುದ್ಧ'ನ ಆಗಮನ ಅಜ್ಞಾನವನ್ನು ಕಳೆದು ಜಗತ್ತಿನ ಜ್ಞಾನಸೂಚಕವಾದಂತೆ ಎಂಬ ಉಪಮೆ, ಇದು ಹರ್ಷವನ್ನೇ ವ್ಯಕ್ತಪಡಿಸುತ್ತಿರುವುದೆಂಬುದನ್ನು ಸ್ಪಷ್ಟಪಡಿಸುತ್ತದೆ. ಎಚ್.ಎಲ್. ಪುಷ್ಪ, ದು. ಸರಸ್ವತಿಯವರೂ ಕೂಡ ನವಿಲಿನ ಪ್ರತಿಮೆಯನ್ನು ಬಳಸಿ ಆಧ್ಯಾತ್ಮಿಕತೆಯನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ. 'ಮೀನು ಮತ್ತು ಬೆಸ್ತ'ನ ಪ್ರತಿಮೆಗಳಿಂದ ಜಗತ್ ವ್ಯಾಪಾರದ ವೈಚಿತ್ರ್ಯಗಳನ್ನು ಎಚ್.ಎಲ್. ಪುಷ್ಪ ಅವರು ಹೀಗೆ ವಿವರಿಸುತ್ತಾರೆ.

**ಮೀನಿನ ಸುತ್ತ ಬೆಸ್ತ,**
**ಬೆಸ್ತನ ಸುತ್ತ ಮೀನು**
**ಯಾರನ್ನು ಯಾರು ಬೇಟೆಯಾಡುತ್ತಾರೋ?**
**ಆಟವಂತೂ ಸಾಗುತ್ತಲೇ ಇದೆ**

ಬೆಸ್ತ ಮೀನನ್ನು ಬಯಸಿ
ಮೀನು ಬೆಸ್ತನನ್ನು ಬಯಸಿ.

(ಹೀಗೊಂದು ಆಟ - ಲೋಹದ ಕಣ್ಣು - ಪುಟ ೫೩)

ಇದು ನಿಸರ್ಗಜೀವಿಯ ಸಂಬಂಧವನ್ನೋ, ಆತ್ಮ-ಪರಮಾತ್ಮಗಳ ಸಂಬಂಧವನ್ನೋ ವಿವರಿಸುವ ಕಲ್ಪನೆಯಾಗಿರಬಹುದೆಂದು ಊಹಿಸಬಹುದು. ಇಲ್ಲಿ ಯಾರು ಯಾರನ್ನು ಅವಲಂಬಿಸಿದ್ದಾರೆ ಎನ್ನುವುದು ಒಂದು ಜಿಜ್ಞಾಸೆಯನ್ನು ಹುಟ್ಟು ಹಾಕಿದೆ. ಬೇಟೆಗಾರ ಹೊಂಚು ಹಾಕುವುದು ತನ್ನ ಬೇಟಕ್ಕಾಗಿ. ಇಲ್ಲಿ ಬೇಟ ಕೂಡ ಬೇಟೆಗಾರರನ್ನು ಬಯಸುತ್ತದೆ ಎಂದರೆ ಸೃಷ್ಟಿಯಲ್ಲಿನ ಪ್ರತಿಯೊಂದು ಅವಲಂಬನೆಯೂ ಪರಸ್ಪರ ಪೂರಕವಾಗಿರುವಂತಹುದೇ! ಜೀವಕ್ಕೆ ಅತೀಂದ್ರಿಯದ ಸೆಳೆತ. ಅತೀಂದ್ರಿಯ ಶಕ್ತಿಗಳ ಅಸ್ತಿತ್ವಕ್ಕೆ ಜೀವಿಗಳ ವ್ಯಾಪಾರವೂ ಮುಖ್ಯವಾದುದೇ ಆಗಿದೆ. ಹೀಗೆ 'ಕೋಳಿ ಮೊದಲ ಮೊಟ್ಟೆ ಮೊದಲ' ಎಂಬ ಉತ್ತರವಿಲ್ಲದ ಜಿಜ್ಞಾಸೆಯಂತೆ ಜೀವನಕ್ಕೂ ಪರಮಾತ್ಮಕ್ಕೂ ಇರುವ ನಂಟನ್ನು ವಿವರಿಸಲು ಪ್ರಯತ್ನಿಸಬಹುದೇ ವಿನಾ ಅರ್ಥ ವಿವರಣೆ ನೀಡಲು ಸಾಧ್ಯವಿಲ್ಲ. ಇಂತಹುದೇ ಜಿಜ್ಞಾಸೆ ಉಳ್ಳವರ-ಇಲ್ಲದವರ ಅಥವಾ ನೀಡುವವರ-ಪಡೆಯುವವರ ಮಹತ್ವಾಕಾಂಕ್ಷೆಯ ಹಿನ್ನೆಲೆಯಲ್ಲೂ ಹಸಿವು ಮತ್ತು ರೊಟ್ಟಿಗಳ ರೂಪಕದಲ್ಲಿ ಕಂಡುಬರುತ್ತದೆ.

ಅಸಾಧ್ಯ ಸಾಧ್ಯತೆಗಳ | ಆವಿಷ್ಕಾರದಲ್ಲಿ ಹಸಿವು
ತನ್ನ ತಾನೇ ಮರೆಯುತ್ತದೆ | ಮೆರೆಯುತ್ತದೆ
ಸಾಧ್ಯತೆಗಳೇ ಅಸಾಧ್ಯವಾಗುವ | ವಿಪರ್ಯಾಸದಲ್ಲಿ
ರೊಟ್ಟಿ ದೀನವಾಗುತ್ತದೆ | ದ್ವೀಪವಾಗುತ್ತದೆ.

(ಗಳಿಗೆ ಬಟ್ಟಲ ತಿರುವುಗಳಲ್ಲಿ - ಪುಟ ೧೪)

ತಿಂದು ಮುಗಿಸುವುದಲ್ಲ | ಈ ರೊಟ್ಟಿ
ತಿಂದರೆ ತೀರುವುದಿಲ್ಲ | ತಿನ್ನದೆಯೂ ವಿಧಿಯಿಲ್ಲ
ಅನನ್ಯರೊಟ್ಟಿ | ಅಕ್ಷೋಹಿಣಿ ಹಸಿವು

(ಅದೇ ಪುಸ್ತಕ - ಪುಟ ೨)

ದಾಹ ಮತ್ತು ದಾಹ ನೀಗಿಸಿಕೊಳ್ಳುವ ಮಾರ್ಗಗಳ ನಡುವಿನ ಆವರ್ತನೆ, ಪೋಷಿಸುವ-ಅವಲಂಬಿತವಾಗಿರುವ ಅಂಶಗಳ ನಡುವಿನ ನಿಂತರ ಆಕರ್ಷಣೆ-ವಿಕರ್ಷಣೆಗಳನ್ನು ಈ ರೂಪಕಗಳು ಹಿಡಿದಿಡುತ್ತವೆ. 'ಹಸಿವೆಂಬ ಹಾವು ಕಾಲಕಚ್ಚಿತ್ತಡೆ ಆಪಾದಮಸ್ತಕ ವಿಷವೇರಿತ್ತಯ್ಯ' ಎಂಬ ವಚನದ ಸಾಲು ನೆನಪಾಗುತ್ತದೆ. ಈ ಹಸಿವು ದೇಹದ ಹಸಿವು ಮಾತ್ರವಲ್ಲ, ಇಂದ್ರಿಯಗಳ ಹಸಿವು ಮುಂದುವರಿದು ಅತೀಂದ್ರಿಯದ ಹಸಿವು... ಅಧ್ಯಾತ್ಮದ ಹಸಿವು... ಆಕ್ರಮಣದ ಹಸಿವು ಹೀಗೆ ಹಸಿವಿನ ವ್ಯಾಪ್ತಿ ವಿಸ್ತಾರಗೊಳ್ಳುತ್ತಾ ಹೋಗುತ್ತದೆ.

ಬದುಕಿನ ಬವಣೆಗಳು ಕಂಗೆಡಿಸಿದಾಗ, ಪ್ರಯತ್ನಗಳೆಲ್ಲವೂ ವಿಫಲವಾದಾಗ, ತನ್ನ ಬಗ್ಗೆ ತನಗೇ ವಿಶ್ವಾಸ ಹೋದಾಗ ಅಮೂರ್ತ ಚೈತನ್ಯದ ಕಡೆ ಮನ ಮುಖ ಮಾಡುತ್ತದೆ. ಹೀಗೆ ಅಮೂರ್ತವನ್ನು ದು. ಸರಸ್ವತಿ ಆಹ್ವಾನಿಸುವ ಪರಿ ಇದು:

**ನಾ ಕಾದೆ, ಬೇಸತ್ತೆ | ಹುಡುಕಿ ಸೋತೆ**
**ಹೇಗಾದರೂ ಒಮ್ಮೆ ಬಾ**
**ಇರುಳು ನುಂಗುವ ಮುನ್ನ ಬಾ**
**ಕಾದ ಕಣ್ಣುಗಳು | ಬರಿದಾಗುವ ಮುನ್ನ ಬಾ**
**ಮೈದಡವಿ ಮೇಲೆತ್ತು ಬಾ**

**(ಮತ್ತೊಮ್ಮೆ ಬಾ - 'ದಲಿತ ಕಾವ್ಯ' - ಪುಟ ೧೨೪)**

ಇರುಳು ಇಲ್ಲಿ ಅಜ್ಞಾನವೂ ಆಗಿರಬಹುದು. ಸಾವು-ಸಂಕಷ್ಟ ಯಾವುದೂ ಆಗಬಹುದು. ಕಾದ ಕಣ್ಣುಗಳು ನಿರೀಕ್ಷಿಸುತ್ತಿವೆ. ಈ ಸಂದರ್ಭದಲ್ಲಿ 'ಬಾ ಇಲ್ಲಿ ಸಂಭವಿಸು, ಇಂದೆಲ್ಲ ಹೃದಯದಲಿ, ನಿತ್ಯವೂ ಅವತರಿಪ ಸತ್ಯಾವತಾರ' ಎಂಬ ಕುವೆಂಪು ಗೀತೆ ನೆನಪಾಗುತ್ತದೆ. ಚೇತನಾ ತೀರ್ಥಹಳ್ಳಿಯವರು ತಮ್ಮ ಅನುಭಾವ ಗೀತೆಗಳಲ್ಲಿ ಸೆಮೆಟಿಕ್, ಸೂಫಿ, ರೂಮಿ, ಲಾವೋತ್ಸೆ, ನವಾಹೋ ಜನರ ಪ್ರಾರ್ಥನೆ, ಥೇರಿಯರ ಹಾಡು(ಬೌದ್ಧ ಭಿಕ್ಷುಣಿಯರು) ಬೈಬಲ್, ಕುರಾನ್, ಅಕ್ಕ, ಅಲ್ಲಮ ಹೀಗೆ ಪ್ರಪಂಚದ ಬಹುಮುಖ್ಯ ಆಧ್ಯಾತ್ಮಿಕ ಜೀವನ ಕ್ರಮಗಳನ್ನು ಎದುರುಗೊಳ್ಳುತ್ತಾರೆ. ಅಲ್ಲಿ ಉಕ್ತವಾಗಿರುವ ಪ್ರಮುಖ ವ್ಯಕ್ತಿಗಳ ಹೆಸರು ಹಿನ್ನೆಲೆಯನ್ನೂ ಕೂಡ ಅಡಿಟಿಪ್ಪಣಿಯಲ್ಲಿ ವಿವರಿಸುತ್ತಾರೆ.

**ಕಾಯಬೇಕು,**
**ಕಾಮಮೋಹ ನೀರಾವಿಯಾಗಿ**
**ಘನವಷ್ಟೆ ಉಳಿಯಬೇಕು | ಒಳಗೆ!**
**ಕಾದವರು, ಕಾಯಿಸಿಕೊಂಡವರೆಲ್ಲ**
**ಅಳಿದು | ಕಾವಷ್ಟೆ ಉಳಿಯಬೇಕು**
**ಕೊನೆಗೆ**

**(ಕಾಯುವುದೇ ಆದರೆ - ಶಬರಿಯ ಅವಸರ - ಪುಟ ೭೦)**

'ಭಾವಪರಿಶುದ್ಧಿ'ಯನ್ನು ಕುರಿತು ಕವನ ವಿವರಿಸುವಂತಿದೆ. ನಿಸ್ವಾರ್ಥ, ನಿರಪೇಕ್ಷವಾಗಿರುವ ಸೈಜತೆ ಮಾತ್ರ ಭಾವ ಪರಿಶುದ್ಧಗೊಳ್ಳುವ ನಿಜವಾದ ಮಾರ್ಗ, ಅದು ಒಮ್ಮೆಲೆ ಸಿದ್ಧಿಗೊಳ್ಳುವುದಲ್ಲ, ನಿಧಾನವಾಗಿ ಸಿದ್ಧಿಸಿಕೊಳ್ಳಬೇಕಾದದ್ದು. ಇಲ್ಲಿ ಕಾಯುವಿಕೆ ಧ್ಯಾನವಾಗಿಯೂ ಕಾಣುತ್ತದೆ.

ನಿಶ್ಚಿತವಾಗಿದ್ದರೂ ವಿಚಿತ್ರವಾಗಿರುವ, ಯಾವಾಗ, ಎಲ್ಲಿ, ಯಾವ ರೀತಿ ಎಂಬ ಸುಳಿವು ನೀಡದೆ ಆಕ್ರಮಿಸಿ ಮನುಕುಲಕ್ಕೆ ಎಂದೆಂದೂ ನಿಗೂಢವೂ, ಪರಿಹಾರ್ಯವೂ ಆದದ್ದು 'ಸಾವು'.

ಈ ಸಾವೆಂಬ ಪರಿಕಲ್ಪನೆ ಕೂಡ ವಿವರಣೆಗೆ ನಿಲುಕದ್ದು. ಆದರೂ ಸಾವಿನ ಕುರಿತು ಸಾಹಿತ್ಯ ಯಾವತ್ತೂ ಸಂವೇದನಾಶೀಲವಾಗಿಯೇ ಇದೆ. ಸಾವೆಂಬ ಅಂತಿಮ ಬಿಂದುವಿನ ಭಯದಿಂದಲೇ ಅವಸರದಿಂದ ಜೀವನಕ್ರಮಗಳು ಒಂದರ ನಂತರ ಒಂದು ಜರುಗಿದಂತೆ ಕಂಡುಬರುತ್ತದೆ. ಬದುಕಿನ ಬಗ್ಗೆ ಅಗಾಧ ಕನಸುಗಳನ್ನಿಟ್ಟುಕೊಂಡಿರುವ ಯಾವ ಮನಸ್ಸೂ ಕೂಡ ಸಾವನ್ನು ಆಹ್ವಾನಿಸುವುದಿಲ್ಲ. ಬದಲಿಗೆ ಸಾವಿನ ಭಯ ಯಾವಾಗಲೂ ಕಾಡುತ್ತಿರುವ ಬಗೆಯನ್ನು ಛಾಯಾ ಭಗವತಿ ನಿರೂಪಿಸುವುದು ಹೀಗೆ:

**ಓ ಸಾವೇ.**

**ಈ ಪುಟ್ಟ ಬದುಕಿನ**

**ಮನೆಯ ಬಾಗಿಲನು ತುಸುವೇ**

**ತಡ ಮಾಡಿ ತಟ್ಟಲಾರೆಯಾ?**

**(ಬಯಕೆ - ಪುಟಾಣಿ ಕೆಂಪು ಶೂ - ಪುಟ ೨೪)**

ಈಗಾಗಲೇ ಯೋಜಿತ ಕನಸುಗಳನ್ನು ಕಟ್ಟಿಕೊಂಡಿರುವ ಮನಸ್ಸಿನ ಆತಂಕ-ಆರ್ತನಾದವಿದು. ಆದರೆ ಈ ಸಾವನ್ನು ಪ್ರೀತಿಸುತ್ತೇನೆನ್ನುವುದು ಚೇತನಾ ಅವರ ಅನಿಸಿಕೆ. ಹಾಗಾದರೆ ಯಾವ ಸಾವನ್ನು ಚಪ್ಪರಿಸುತ್ತಿದ್ದಾರೆ. ಸರ್ವರಿಗೂ ಅಹಿತವಾಗುವ ಸಾವು ಈ ಕವಯಿತ್ರಿಗೆ ಹಿತವಾಗಲು ಕಾರಣವಾದರೂ ಏನು. ಅದಕ್ಕೆ ಕಾರಣ ಅವರ ಕವನಗಳಲ್ಲೇ ಇದೆ.

**ಬದುಕನ್ನು । ಪ್ರೀತಿಸತೊಡಗಿದ್ದೇನೆ.**

**ಹೊಟ್ಟೆಯುರಿಯಿಂದಲಾದರೂ**

**ಸಾವು । ಬಂದಪ್ಪಲಿ ಎಂದು**

**ನಾನವನನಪ್ಪುವ ದಿನ**

**ಸಾವು**

**ಅದೇ ನನ್ನ 'ನಿಜ'ದ । ನಿತ್ಯ ಬದುಕು**

**('ಸಾವ ಪದ್ಯಗಳು'-ಶಬರಿಯ ಅವಸರ - ಪುಟ ೬೨)**

ಪ್ರೀತಿಗೂ ಸಾವಿಗೂ ಇರುವ ಸಂಬಂಧವೇನು? ಪ್ರೀತಿಸತೊಡಗಿದರೆ ಯಾಕೆ ಸಾವು ಬಂದಪ್ಪಬೇಕು. ಆ ಸಾವಿನೊಂದಿಗೆ ನಿಜದ ಬದುಕು ತೆರೆಯುತ್ತದೆ ಎಂಬ ವಿಶ್ವಾಸದಿಂದ ಕವಯಿತ್ರಿ ಇರಬೇಕಾದರೆ ಇದು ದೇಹಕ್ಕೆ ಬರುವ ಸಾವಂತೂ ಖಂಡಿತಾ ಅಲ್ಲ. ಬದಲಿಗೆ ಜಾಡ್ಯಕ್ಕೆ, ಜಡತನಕ್ಕೆ, ಸ್ವಾರ್ಥಕ್ಕೆ ಬರುವ ಸಾವು, ಪ್ರೀತಿಯಲ್ಲಿ ಸ್ವಾರ್ಥಕ್ಕೆ ಆಸ್ಪದವಿಲ್ಲ. ಸ್ವಾರ್ಥಪ್ರೇರಿತವಾಗಿದ್ದರೆ ಅದು ಪ್ರೀತಿಯೇ ಅಲ್ಲ. ಈ ಅರ್ಥದಲ್ಲಿ ಪ್ರೀತಿಯ ಆರಂಭ ಸ್ವಾರ್ಥದ ಸಾವು. ಈ ಅರ್ಥದಲ್ಲಿ ಎಲ್ಲರೂ ಬಯಸುವ ಸಾವೇ ಆಗಿದೆ. ಇದೇ ರೀತಿ ಸಾವು ಮತ್ತು ಪ್ರೀತಿಗೆ ಅಭೇದ ಕಲ್ಪಿಸಿ ಸಂಧ್ಯಾದೇವಿಯವರು ಬರೆಯುತ್ತಾರೆ.

ನಿಜವಾದ ಜೀವನ ಸಂಗಾತಿ
ಸಾವಿನ ಸಮೀಪದಲ್ಲಿ | ಬರುತ್ತಾನೆ
.....................
ನಮಗೆ ಸುಲಭವಾಗಲು ಸಾವೇ | ಪ್ರೇಮದ ವೇಷ ಧರಿಸಿ
ಬಂದಿರಬಹುದು. | ಬಂದರೆ ಆ ಪ್ರೀತಿ
ನಮ್ಮ ಎಲ್ಲ ಪ್ರಶ್ನೆಗಳಿಗೆ ಉತ್ತರವಾಗುತ್ತದೆ.
(ಸಾವಿನ ಪ್ರೀತಿ - ಪದ್ಯದ ಮಾತು ಬೇರೆ - ಅಕ್ಷರ ಕೆ.ವಿ. (ಸಂ.) - ಪುಟ ೭೮)

ಇಲ್ಲಿ ಸಾವು ಮತ್ತು ಪ್ರೀತಿ ಎರಡೂ ಕೂಡ ಅಮೂರ್ತವಾದದ್ದೆ. ಪರಸ್ಪರ ವಸ್ತುಗಳ ಅರ್ಥಗ್ರಹಿಕೆ ಉಂಟಾಗಬೇಕಾದರೆ ಒಂದಕ್ಕೊಂದು ಪೂರಕ. ಸಾವನ್ನು ಅರ್ಥೈಸುವಲ್ಲಿನ ಕ್ಲಿಷ್ಟತೆಯೇ ಪ್ರೀತಿಯನ್ನು ಅರ್ಥೈಸುವಾಗಲೂ ಎದುರಾಗುತ್ತದೆ. ಈ ಸಂದಿಗ್ಧತೆಯಿಂದ ಪಾರಾಗಲು ಎರಡು ಅಮೂರ್ತ ಸಂಗತಿಗಳ ಮುಖಾಮುಖಿಯೇ ಸೂಕ್ತವೆಂದು ಈ ಕವಿ ಭಾವಿಸಿದಂತಿದೆ.

ಸಾವು ನಿಶ್ಚಿತವೆಂದು ಗೊತ್ತಿದ್ದರೂ ಮಾನವರ ದೈನಿಕ ಚಟುವಟಿಕೆಗಳ ನಡುವೆ ಅದರ ನೆನಪು ಸದಾ ಕಾಡುತ್ತಿರುವ ಸಂಗತಿಯೇನೂ ಆಗಿರುವುದಿಲ್ಲ. ಆದರೂ ನಿತ್ಯ ನಡೆಯುವ ಸಾವಿನ ಸಂತೆಯಲ್ಲಿ ಬೇರೆಯರ ಸಾವು ಏನೊಂದು ಪರಿಣಾಮವನ್ನೂ ಬೀರಿರದಂತೆ ಸಂವೇದನಾ ರಹಿತವಾಗಿ ನಡೆದುಕೊಳ್ಳುವುದು ಉಂಟು. ಕವಿಯೊಬ್ಬ ಸತ್ತಾಗ ಇತರರ ಪ್ರತಿಕ್ರಿಯೆಯನ್ನು ತಾರಿಣಿ ಶುಭದಾಯಿನಿಯವರು ಹೀಗೆ ವಿವರಿಸುತ್ತಾರೆ :

ಕವಿ ಸತ್ತಿದ್ದು ಮೂರು ಸಾಲಿನ ಸುದ್ದಿ
ಸಾವೆಂದರೇನು? ಬದುಕೆಂದರೇನು?
ಚರ್ಚೆಯಲಿ ತೊಡಗಿ | ಜಗುಲಿಯಲಿ ಮುದುರಿ
ಮಲಗಲು ಸಿದ್ಧರಾಗುವರು
('ಕವಿಗೆ ವಿದಾಯ' - ಚಿತ್ತಗ್ಲಾನಿಯ ಮಾತು - ಪುಟ ೬೧)

ಸಾವು ಎಂದಿಗೂ ಜಿಜ್ಞಾಸೆಯಾಗಿಯೇ ಉಳಿಯುವ ಸಂಗತಿ. ಸಾವು ತರುವ ನೋವು ಕೂಡ ತಾತ್ಕಾಲಿಕವಾದುದೇ ಹೊರತು, ದೀರ್ಘಕಾಲೀನದ್ದಲ್ಲ. ಬದುಕು ಎಂತಹ ನೋವನ್ನೂ ಕೂಡ ಮರೆಸುತ್ತದೆ. ಎಲ್ಲಾ ಸಮಯದಲ್ಲೂ ಇಷ್ಟೇ ನಿರಾಳವಾಗಿರಲು ಸಾಧ್ಯವಿಲ್ಲ. ಸಾವನ್ನು ಅದರ ಅಮೂರ್ತ ನೆಲೆಯಲ್ಲಿ ಆಧ್ಯಾತ್ಮಿಕವಾಗಿಯೂ ಪರಿಶೀಲಿಸಲಾಗಿದೆ. ಡಾ. ವಿನಯಾ ಅವರು ವಿಷಾದದ ದನಿಯಲ್ಲಿ ಸಾವಿನ ನೆನಪು ಮಾಡುವುದು ಹೀಗೆ :

ಮೊಲೆ ಬಿಡುವ ಹೊತ್ತಾಯ್ತು, ಏಳು ಮಗುವೆ
.............................
ಯಾಕೆ ಕಂಗಾಲಾಗಿ ಕನವರಿಸಿ ಅಳುತಿರುವೆ?
ಮೊಲೆಯೊಂದಿಗಿನ ನಂಟು ಅನುಕಾಲವೇ?
(ಮೊಲೆ ಬಿಡುವ ಹೊತ್ತಾಯ್ತು, ಏಳು ಮಗುವೆ - ನೂರುಗೋರಿಯ ದೀಪ - ಪುಟ ೨೪)

ಬದುಕನ್ನು ಒಂದು ಆಟವೆಂದೂ, ಸಾವನ್ನು ಅದರ ಕೊನೆಯೆಂದೂ, ಜೀವಿಯನ್ನು ಆಟಗಾರನೆಂದೂ, ಇದನ್ನೆಲ್ಲ ನಿರ್ವಹಿಸುವ ಶಕ್ತಿಯನ್ನು ಸೂತ್ರಧಾರನೆಂದೂ ರೂಪಕವಾಗಿ ಹೇಳುವ ಪರಿಪಾಟ ತಾತ್ವಿಕ ನೆಲೆಯಲ್ಲಿದೆ. ಈ ಸೃಷ್ಟಿಗೆ ಮನುಷ್ಯ ಎಷ್ಟೇ ಪ್ರಸಿದ್ಧನಾಗಿದ್ದರೂ, ಧನಿಕನಾಗಿದ್ದರೂ, ಅಧಿಕಾರವುಳ್ಳವನಾಗಿದ್ದರೂ ಮಗು ಸಮಾನ. ಸಾವು ಬಂದು ಕದ ತಟ್ಟಿದಾಗ ಬರುವುದಿಲ್ಲವೆಂಬುದಕ್ಕೆ ಆಸ್ಪದವೇ ಇಲ್ಲ. ಭೂಮಿಯೊಂದಿಗಿನ ನಂಟನ್ನು ಕಳಚಿಕೊಳ್ಳುವುದನ್ನು ಮಗು ಮೊಲೆ ಹಾಲನ್ನು ಬಿಡುವ ಕ್ರಿಯೆಗೆ ರೂಪಕವಾಗಿಸಿ ಸಾವಿನ ಸನ್ನಿಹಿತವನ್ನು ಸೂಚಿಸಲಾಗಿದೆ.

**ಇ. ಅಸ್ಮಿತೆಯ ಶೋಧ**

ಭೂಮಂಡಲದಲ್ಲಿರುವ ಪ್ರತಿ ವಸ್ತು, ಜೀವಿಗೂ ಕೂಡ ತನ್ನದೇ ಆದ ಗುರುತಿಸಿಕೊಳ್ಳುವಿಕೆ ಇರುತ್ತದೆ. 'ಹೆಣ್ಣು' ಒಂದು ಜೀವಿಯಾಗಿ, ಲಿಂಗವಾಗಿ, ಸಮಾಜದ ಭಾಗವಾಗಿ ಯಾವ ರೀತಿಯ ಗುರುತಿಸುವಿಕೆಯನ್ನು ಹೊಂದಿದ್ದಾಳೆ ಎಂಬುದರ ಹಿನ್ನೆಲೆಯಲ್ಲಿ 'ಅಸ್ಮಿತೆ' ಅರ್ಥ ಕಂಡುಕೊಳ್ಳುತ್ತದೆ. ಈಗಾಗಲೇ ಜೀವಶಾಸ್ತ್ರೀಯವಾಗಿ ಗಂಡು-ಹೆಣ್ಣುಗಳೆಂಬ ಎರಡು ವರ್ಗಗಳಿದ್ದು, ಅದರಲ್ಲಿ ಸಂತಾನಕ್ರಿಯೆಯ ಸಂಚಾಲಕಿಯಾಗಿ ಹೆಣ್ಣನ್ನು ಗುರುತಿಸಲಾಗಿದೆ. 'ಲಿಂಗ'ದ ದೃಷ್ಟಿಯಿಂದಲೂ ಹೆಣ್ಣಿನ ದೇಹರಚನೆ ಗಂಡಿಗಿಂತ ಭಿನ್ನವಾಗಿರುವುದು ಮಾತ್ರವಲ್ಲದೆ, ಹೊರನೋಟಕ್ಕೆ ಈ ಭಿನ್ನತೆಯನ್ನು ಗುರುತಿಸಬಹುದು. ಇದನ್ನೇ ವಚನಕಾರರು ಸರಳವಾಗಿ "ಮೊಲೆ, ಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು; ಒಳಗಿರುವ ಆತ್ಮ ಗಂಡೂ ಅಲ್ಲ, ಹೆಣ್ಣೂ ಅಲ್ಲ" ಎಂದಿದ್ದಾರೆ. ಈ ದೈಹಿಕ ಭಿನ್ನತೆಯ ಮೂಲ ಕಾರಣವೇ ಆಕೆ ಸಂತಾನವನ್ನು ಪಡೆಯುವವಳು ಎಂಬುದಾಗಿದೆ. ಉಳಿದಂತೆ ಉಸಿರಾಟ, ಚಯಾಪಚಯ ಕ್ರಿಯೆಗಳಲ್ಲಿ ಗಂಡಿಗಿಂತ ಭಿನ್ನವೇನೂ ಇಲ್ಲ. 'ಅಸ್ಮಿತೆ'ಯ ವಿಷಯ ಬಂದಾಗ ಸಾಮಾಜಿಕವಾಗಿ ಆಕೆಯ ಸ್ಥಾನವೇನು ಎಂಬುದೇ ಎಲ್ಲ ಬಗೆಯ ಚಿಂತನೆಗಳಿಗೆ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದಿಗಳು, ಸ್ತ್ರೀವಾದ ಸಾಮಾಜಿಕವಾಗಿ ಹೆಣ್ಣಿನ ಸ್ಥಾನಮಾನವನ್ನು ಕುರಿತು ನಡೆಸಿದ ಚಿಂತನೆಗಳು ಎಲ್ಲ ವಿಷಯಗಳಲ್ಲೂ ಹೆಣ್ಣನ್ನು ಎರಡನೇ ದರ್ಜೆಯ ವರ್ಗವಾಗಿ ನೋಡಲಾಗಿದೆ ಎಂಬುದನ್ನು ಗುರುತಿಸಿವೆ. ಸಾಹಿತ್ಯಕವಾಗಿಯೂ ಕಾಣಿಸಿಕೊಳ್ಳುವ ಈ ಭೇದವನ್ನು ಖಂಡಿಸಲಾಗಿದೆ, ವಿಷಾದಿಸಲಾಗಿದೆ. ಆಧುನಿಕ ಮಹಿಳಾಕಾವ್ಯ ದನಿ ಎತ್ತಿದಂತೆ ಪ್ರತಿಯೊಬ್ಬ ಕವಯಿತ್ರಿಯು ಒಂದಲ್ಲ ಒಂದು ಸಂದರ್ಭದಲ್ಲಿ ತನ್ನ 'ಅಸ್ಮಿತೆ'ಯನ್ನು ವಿವರಿಸುವ, ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಭಾರತೀಯ ಸಮಾಜದಲ್ಲಿ ಸಾಂಪ್ರದಾಯಿಕವಾಗಿ ಹೆಣ್ಣಿನ 'ಅಸ್ಮಿತೆ'ಯನ್ನು ಪ್ರತಿಭಾ ನಂದಕುಮಾರ್ ಗುರುತಿಸಿರುವ, ಈಗಾಗಲೇ ಸಾಕಷ್ಟು ಚರ್ಚೆಗೂ ಒಳಗಾಗಿರುವ ಕವನ ಹೀಗಿದೆ :

> ನಾನೊಬ್ಬನ ಪತ್ನಿ,
> ಮೂರು ಮಕ್ಕಳ ತಾಯಿ
> ಇನ್ನೂ ನನ್ನ ಸೀರೆ ಕುಪ್ಪಸ

ಬಟ್ಟು, ಬೈತಲೆ ಎಲ್ಲ

ನನ್ನ ಅತ್ತೆ ಮಾವಂದಿರ ಮರ್ಜಿ

(ನಾನು - ಪ್ರತಿಭಾ ನಂದಕುಮಾರ್ ಆಯ್ದ ಕವಿತೆಗಳು - ಪುಟ ೯)

ಮದುವೆ ನಂತರದ ಹೆಣ್ಣಿನ ಜೀವನ ಪರಾಧೀನವಾಗಿರುವುದನ್ನು ಇದು ವ್ಯಂಗ್ಯದ ನೆಲೆಯಲ್ಲಿ ಹಿಡಿದಿಟ್ಟಿದೆ. ಇದೇ ವಾಸ್ತವವನ್ನು ವೈದೇಹಿ ನಿರೂಪಿಸುವುದು ಹೀಗೆ -

'ಮನೆಯೊಳಗೇ ಇರುವ ಮನೆಯೊಡತಿ ನಾನು'

(ಸಂಸಾರಿಪದ - ವೈದೇಹಿ ಅವರ ಆಯ್ದ ಕವಿತೆಗಳು - ಪುಟ ೬೬)

ಇಲ್ಲಿ ಯಾವುದಕ್ಕೆ ಒಡತಿ! ಮನೆಯೊಳಗಿನ ಎಲ್ಲ ಕೆಲಸ, ಕಾವ್ಯ, ವೃದ್ಧರ ಸೇವೆ, ಮಕ್ಕಳ ಲಾಲನೆ, ಪಾಲನೆ, ಗಂಡನ ಸೇವೆ, ಅಡುಗೆ ಮನೆ ಇತ್ಯಾದಿಗಳಿಗೆ ಕವಿತಾ ರೈ ಹೇಳುವ ಒಲೆ ಬದಲಾದರೂ ಉರಿ ಬದಲಾಗಿಲ್ಲ ಎನ್ನುವಂತೆ ಯಾವ ಶಿಕ್ಷಣ, ಉದ್ಯೋಗಗಳಿಂದ ತನಗೆ ವ್ಯಕ್ತಿ ಸ್ವಾತಂತ್ರ್ಯ ಲಭ್ಯವಾಗುತ್ತದೆ ಎಂದು ಹೆಣ್ಣು ಬಯಸಿದ್ದಳೋ ಅದು ಕೂಡ ಆಕೆಯ ಶ್ರಮವನ್ನು ಇನ್ನಷ್ಟು ಹೆಚ್ಚಿಸಿದೆ ಎಂಬುದನ್ನು ವಾಸ್ತವದ ನೆಲೆಯಲ್ಲಿ ಪ್ರತಿಭಾ ತೆರೆದಿಡುತ್ತಾರೆ.

ಕಂಕುಳಲ್ಲಿ ಬೆವರು ಬಯಸದ ಗಂಡನಿಗೆ ಸೆಂಟು

ದಯಾಬಿಟಿಸಿನ ಅತ್ತೆಗೆ ಔಷಧ

ಗೆಳತಿಯ ಮಗಳ ಹುಟ್ಟು ಹಬ್ಬಕ್ಕೆ ಫ್ರಾಕು

ಚೈನಾ ಸಿಲ್ಕಿನ ನಾಲ್ಕನೇ ಕಂತು,

.........................................

ಸೂಪರ್ ಬಜಾರಿನ ಸಾಲುಗಳ ನಡುವೆ

ಕೇರ್ ಫ್ರೀ ಮಹಿಳೆಯರು ಕಳೆದು ಹೋಗುತ್ತಾರೆ

(ಕೇರ್ ಫ್ರೀ ಮಹಿಳೆಯರು - ಅದೇ - ಪುಟ ೪೬)

ಉದ್ಯೋಗ ವರವಾಗುವ ಬದಲಿಗೆ 'ಹೊರೆ'ಯಾಗುವ ವಾಸ್ತವವನ್ನು ಸಹಜವಾಗಿಯೇ ತೆರೆದಿಡುತ್ತಾರೆ. ಇಲ್ಲಿ ಬದಲಾಗದ ಜವಾಬ್ದಾರಿ, ಕೈಂಕರ್ಯಗಳು ಬದಲಾಗದ ಮನಸ್ಥಿತಿಯನ್ನೇ ಬಿಂಬಿಸುತ್ತಿವೆ. ಇಷ್ಟೆಲ್ಲ ಬವಣೆಗಳ ನಡುವೆಯೂ ಗಂಡಿನ ಸರಿಸಮಾನವಾಗಿ ಹೆಣ್ಣನ್ನು ಪರಿಗಣಿಸುವ ಪರಿಪಾಟ ಬೆಳೆಯದಿರುವುದಕ್ಕೆ 'ಗಂಡು' ಕುಲಕ್ಕೆ ಈಗಾಗಲೇ ದೊರೆತಿರುವ ಸ್ಥಾನಮಾನಗಳೇ ಕಾರಣ. ಅರ್ಹತೆಗಿಂತಲೂ ಹೆಚ್ಚಿನ ಮಾನ ಗಳಿಸಿರುವ ಈ ಪರಿಯನ್ನು ರೂಪ ಹಾಸನ ಅವರು ವ್ಯಂಗ್ಯಗೊಳಿಸುತ್ತಾರೆ :

ಕ್ಷಮಿಸಿಬಿಡು ಪ್ರಭುವೆ

ನಾವು ಅವರಂತಲ್ಲ

ಅವರಂತಿಲ್ಲದ್ದಕ್ಕೆ ಖೇದವೂ ಇಲ್ಲ

ನಾವು ಚದುರಂಗವಾಡುವುದಿಲ್ಲ
ನಮಗಾಟ ಬರುವುದಿಲ್ಲ

(ನಾವು ಅವರಂತಲ್ಲ - ಕಡಲಿಗೆಷ್ಟೊಂದು ಬಾಗಿಲು - ಪುಟ ೫೫)

ಇಲ್ಲಿನ ಚದುರಂಗದಾಟ ಮೋಸದಾಟವೂ ಆಗಿರಬಹುದು. ಆಟದೊಳಗಿನ ರಾಜ, ಮಂತ್ರಿಯರನ್ನು ಕಾಪಾಡುವ ಕಾಲಾಳು, ಇತ್ಯಾದಿಗಳು ತರಗೆಲೆಯಂತೆ ಉದುರುವುದನ್ನು ನೋಡಿಯೂ ಗೆಲ್ಲುವುದೊಂದೇ ಗುರಿಯಾಗಿಸಿಕೊಂಡ ಮನಸ್ಸಿನ ಸ್ವಾರ್ಥವನ್ನೂ ಸಹ ಇದು ಕಟ್ಟಿಕೊಡುತ್ತಿದೆ. ಈ ದಮನಕಾರಿ ಅಂಶಗಳಿಂದ ಹೆಣ್ಣು ತನ್ನ ಎಂದಿನ ಧೀಶಕ್ತಿಯನ್ನು ಕಳೆದುಕೊಂಡಿಲ್ಲ. ಡಾ. ವಿಜಯಾ ಸುಬ್ಬರಾಜ್ ಅವರ ಈ ಕವನ ಅದನ್ನು ಸಾರುತ್ತದೆ.

ನನ್ನಂತಲ್ಲ ನನ್ನವರು
ನೊಂದರು ನೆಮ್ಮದಿ ಬಿಡದವರು
ನೀಲಿಯ ಬಾನಿನ ಹರಹಿನ ಆಳದಿ
ರೆಕ್ಕೆಯಿಲ್ಲದೆಯೂ ಹಾರುವರು

(ನನ್ನಂತಲ್ಲ ನನ್ನವರು - ಸಖಬಾ ಸಂಚಾರಕೆ - ಪುಟ ೧೩)

ಇದೊಂದು ಮಾನಸಿಕ ಹಾರಾಟ. ಈ ಹಾರಾಟದಲ್ಲಿ ತಮ್ಮನ್ನು ತಾವೇ ಕಳೆದುಕೊಂಡಿಲ್ಲ. ಕ್ಷಮೆಯ ಅಸ್ತ್ರದಿಂದ ತಮ್ಮ ನೋವಿನಿಂದ ತಾವೇ ರಕ್ಷಿಸಿಕೊಂಡಿದ್ದಾರೆ ಎಂಬುದನ್ನೂ ಕವನ ಸೂಚಿಸುತ್ತದೆ. 'ನಾನು ಯಾರು?' ಎಂಬ ಪ್ರಶ್ನೆ ಹೆಣ್ಣಿನೆದುರು ನಿಂತಾಗ ದೊರೆಯುವ ಉತ್ತರವನ್ನು ಒಂದು ನಾಟಕೀಯ ಸನ್ನಿವೇಶದಲ್ಲಿ ವೈದೇಹಿಯವರು ಹೀಗೆ ಹಿಡಿದಿಡುತ್ತಾರೆ. ಯಮನ ಕರೆ ಬಂದಾಗ ತನ್ನನ್ನು ಯಾರು ಎಂದು ನಿರೂಪಕಿ ವಿವರಿಸುವುದು ಹೀಗೆ -

ನಾನಿಂಥವರ ಮಗಳು - ಏಕೆ ಒಯ್ಯುವೆನನ್ನ?
ಇಂಥವರು... ನನ್ನತ್ತೆ ನಮ್ಮಾವ ನನ್ನತ್ತಿಗೆ
.............................
ಇವರೆನ್ನ ಪತಿ, ನಾ ತಾಯಿ ಈ ಮಕ್ಕಳಿಗೆ
ಅಜ್ಜಿ ಕಣೋ ನಾಕು ಮೊಮ್ಮಕ್ಕಳಿಗೆ
ಬರಲೆಂತು ಬಿಟ್ಟು ಈ ಎಲ್ಲರ?
ನಕ್ಕನೀಗ ಯಮ, ಮುರಿದ ಮೌನ
ಸರಿಯೆ ಸರಿ, ನೀನು? ನೀನು, ನೀನೇನು?
ಹೇಳಿ ಬಿಡು ಪ್ರವರ | ತೆಗೆವೆ ಕುಣಿಕೆ
.............................
ಮೌನವಾಂತಳು ಆಕೆ | ಮೂಕಾಂಬಿಕೆ

(ಯಮನ ಪ್ರಶ್ನೆ - ಹೂವ ಕಟ್ಟುವ ಕಾಯಕ - ಪುಟ ೫೯)

ಈ ನಾಟಕೀಯ ಸನ್ನಿವೇಶ ಸ್ವತಃ ತಾನು ಯಾರೆಂದು ವಿವರಿಸಲಾಗದ ಇಬ್ಬಂದಿತನದಲ್ಲಿ ಹೆಣ್ಣು ಇರುವುದನ್ನು ಕಣ್ಣಿಗೆ ಕಟ್ಟಿದಂತೆ ಬಿಚ್ಚಿಡುತ್ತದೆ. ಹೆಣ್ಣೆಂಬ ಕೇಂದ್ರದ ಪರಿಧಿಯಲ್ಲಿ ಸುತ್ತಲೂ ಸಂಬಂಧಗಳ ಸರಮಾಲೆಯೇ. ಮಗಳು, ಸೊಸೆ, ಹೆಂಡತಿ, ತಾಯಿ, ಅಜ್ಜಿ ಹೀಗೆ ಎಲ್ಲವೂ ಆಗುವ ಆ ಜೀವಕ್ಕೆ ತನ್ನದೇ ಆದ ಅಸ್ಮಿತೆ ಇಲ್ಲದಿರುವ ಅಸಂಗತತೆಯ ಚಿತ್ರಣವಿದು. ಈ ಉಸಿರು ಕಟ್ಟಿಸುವ ಮೂಗುಬ್ಬಸದ ರೀತಿಯನ್ನು ರೂಪ ಹಾಸನ ಅವರು ಕಣ್ಣಾಕಪು ಕಟ್ಟಿದ ಕುದುರೆಯ ರೂಪಕದಲ್ಲಿ ಹಿಡಿದಿಡುತ್ತಾರೆ.

**‘ದಾರಿಯಾಚೆಗಿನ ಬದುಕು ಕದ್ದವರೇ**
**ನನ್ನ ಕನಸು ಕದಿಯುವಿರೇ?’**
**ಬಡಬಡಿಸಿ ಕೆನೆಕೆನೆದು ನಕ್ಕಿತ್ತು**
**ಕಣ್ಣಾಕಪು ಬಿಗಿದ ಕುದುರೆ ಸದ್ದಿಲ್ಲದೇ ಬಿಕ್ಕಿತ್ತು!**

**(ಕಣ್ಣಾಕಪು ಬಿಗಿದ ಕುದುರೆ - ಒಂದಿಷ್ಟು ಹಸಿಮಣ್ಣು - ಪುಟ ೬)**

ಬದುಕು ಕದ್ದವರು ಕನಸು ಕದಿಯಲಾರರು ಎನ್ನುವುದೇನೋ ಸತ್ಯ. ಆದರೆ ಕನಸು ಬದುಕಿನ ಬಗ್ಗೆಯೇ ಇರಬೇಕಾದರೆ ‘ಬದುಕು’ ಕಳೆದುಕೊಂಡು ಉಳಿದ ಕನಸುಗಳಿಗೆ ಅರ್ಥವೇನು? ‘ಲಿಂಗ’ಸಂಬಂಧಿ ದಮನಗಳೊಂದಿಗೆ ವರ್ಗ-ವರ್ಣ ಸಂಬಂಧಿ ಕಾರಣಗಳೂ ಸೇರಿಕೊಂಡಾಗ ಶೋಷಣೆಯ ತೀವ್ರತೆ ಇನ್ನೂ ಹೆಚ್ಚು. ದಮನಿತವಾದ ವರ್ಗವೊಂದು ಎಚ್ಚೆತ್ತುಕೊಂಡಾಗ ಅವರು ತಮ್ಮ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಬಗೆಯನ್ನು ಬಿ.ಟಿ. ಲಲಿತಾನಾಯಕ್ ಅವರ ಕವನದಲ್ಲಿ ಕಾಣಬಹುದು.

**ಈಗ ಹಕ್ಕಿ ಪಕ್ಷಿಗಳೆಲ್ಲ ಕೂಗಿ ಎಚ್ಚರಿಸುತಿವೆ ನಮ್ಮನ್ನು**
**ಮುಂಜಾವಿನ ಬೆಳಕು ಕಣ್ಣ ತೆರೆಸುತಿದೆ**
**ದೀರ್ಘ ರಾತ್ರಿಯ ಮೌನ ದೂರವಾಗಿದೆ ಇನ್ನು**
**ಬಾಯಿ ಬಂದಿದೆ ನಮಗೆ ಹೊಸ ದೃಷ್ಟಿ ಕೂಡ**

**(ಮುಂಜಾವು - ನಂ ರೂಪ್ಲಿ - ಪುಟ ೧)**

ಕವನ ಘೋಷಣೆಯ ರೂಪದಲ್ಲಿದ್ದು, ವಾಚ್ಯವೆನ್ನಿಸಿದರೂ ದಮನಿತ ವರ್ಗವೊಂದು ಪಡೆದ ಸ್ವಾಭಿಮಾನ, ಜಾಗೃತಿಗಳನ್ನು ಹೇಳುತ್ತಿರುವುದಿಂದ ಉಳಿದ ಬಹುಪಾಲು ಗೀತೆಗಳಂತೆ ಇದೂ ಘೋಷಣೆಯ ರೂಪದಲ್ಲಿಯೇ ಭಾಸವಾಗುತ್ತದೆ.

ಇದೇ ಬಗೆಯ ಎಚ್ಚರಿಕೆಯ ದನಿ ಸವಿತಾ ನಾಗಭೂಷಣ ಅವರ ಒಂದು ಕವಿತೆಯಲ್ಲೂ ಕಂಡುಬರುತ್ತದೆ.

ಒಂದಲ್ಲ ಒಂದು ದಿನ ನಿನ್ನ
ಕನಸಿನಲ್ಲಿ ಸದ್ದಿಲ್ಲದೆ ಸುಳಿದು
ಬರುವವಳೇ...... ನಾನು

(ನಾ.... ಬರುತ್ತೇನೆ ಕೇಳು - ಆಕಾಶಮಲ್ಲಿಗೆ - ಪುಟ ೧೨)

ವಾಸ್ತವದಲ್ಲಿ ನಡೆಯದಿದ್ದುದನ್ನು ಕನಸಿನಲ್ಲಿ ಕಲ್ಪಿಸಿಕೊಳ್ಳುವುದು ಮನುಷ್ಯ ಸ್ವಭಾವ. ಈ ದಿಸೆಯಲ್ಲಿ ಕವಿಗಳದ್ದು ಇನ್ನೂ ಒಂದು ಹೆಜ್ಜೆ ಮುಂದಿನ ನಡೆ. ಈ ಕವಿಗೆ ತನ್ನನ್ನು ಯಾವ ರೀತಿ ನಡೆಸಿಕೊಂಡರೂ ಇನ್ನಿಲ್ಲದ ಜೀವನ ಪ್ರೀತಿ. ಹಾಗಾಗಿ ಕನಸಿನಲ್ಲಾದರೂ ಹೋಗಿ ತನಗೆ ಬೇಕಾದ ಪ್ರೀತಿಯನ್ನು ಪಡೆಯುವ ಹಂಬಲ. ವಾಸ್ತವದಲ್ಲಿ ಅದು ದುರ್ಲಭ ಎನಿಸಿದ್ದೇ ಅದರ ಕಾರಣವಿರಬಹುದು.

ಕೆಲವು ಸಾಮಾಜಿಕ ನಡವಳಿಕೆಗಳಿಗೆ ಕಾರಣ, ಫಲಾನುಭವಿ ತಾವಾಗಿದ್ದರೂ, ಮನ್ನಣೆ ಮಾತ್ರ ದೊರೆಯದು. ಹೀಗೆ ಮನ್ನಣೆಯಿಂದ ದೂರವಿರುವ ಸಂಬಂಧಗಳಲ್ಲಿ ವೇಶ್ಯಾವಾಟಿಕೆ ಕೂಡ ಒಂದು. ಸ್ವತಃ ಬಯಸಿ ಯಾರೂ ಇಂತಹ ಸಂಬಂಧವನ್ನು ಅಪ್ಪಿಕೊಳ್ಳುವುದಿಲ್ಲ. ಇದರ ಹಿಂದಿನ ಸಾಮಾಜಿಕ, ಆರ್ಥಿಕ ಕಾರಣಗಳು ಹಲವು. ಸಾಮಾಜಿಕ ಸ್ತರವ್ಯವಸ್ಥೆಯ ಕೆಳಹಂತದಲ್ಲಿದ್ದವರಿಗೆ ಅಥವಾ ಹೊರಗಿದ್ದವರಿಗೆ ಇದೊಂದು ಸಹಿಸಿಕೊಳ್ಳಲೇಬೇಕಾದ ಅನಿವಾರ್ಯ ಸ್ಥಿತಿಯಾಗಿರುತ್ತದೆ. 'ಬೇಡತಿಯರು' ಎಂಬ ರೂಪಕದಲ್ಲಿ ಗಿರಿಜನರ ಅಸ್ಮಿತೆಯನ್ನು ಸುಕನ್ಯಾ ಮಾರುತಿ ಗುರುತಿಸುವುದು ಹೀಗೆ :

**ನಾವು ಬೇಡತಿಯರು ಸ್ವಾಮಿ । ಬೇಡತಿಯರು,**
**ಗುಡ್ಡಗಾಡಿನಿಂದ । ಹರಿದು ಬಂದ ನೀರೆಯರು**
**ನಾವು ವೇಶ್ಯೆಯರು । ನಿಮ್ಮ ದಾಸಿಯರು**
**ಆಗಿದ್ದ ಕಾಲ**
**ಈಗಿಲ್ಲ ಎನ್ನುವಂತಿಲ್ಲ, । ಆದರೂ ಅಲ್ಲಲ್ಲಿ**
**ಕಾಸುತ್ತಿದ್ದೇವೆ । ನಿಮ್ಮ ಬುರುಡೆಗೆ । ಬಿಸಿನೀರು**

**(ಬೇಡತಿಯರು - ನಾನೆಂಬ ಮಾಯೆ - ಪುಟ ೮೯)**

ಇಲ್ಲಿ ಪ್ರತೀಕಾರ ಕವನದ ಆಶಯವಾಗಿ ಕಾಣಿಸಿಕೊಳ್ಳುತ್ತಿದೆ. ಅದಕ್ಕೆ ಕಾರಣಗಳನ್ನು ಕವನವೇ ಪಟ್ಟಿ ಮಾಡುತ್ತದೆ. ಒಟ್ಟಾರೆ ಸ್ತ್ರೀಕುಲದ ಅಸ್ತಿತ್ವದ ಧ್ವನಿಯಾಗಿಯೂ ಇದು ಕೇಳಿಸುತ್ತದೆ. ಎಂತಹ ದಮನ, ಒತ್ತಡಗಳ ಮಧ್ಯೆಯೂ ಮಾನವಸಹಜವಾದ ಔನ್ನತ್ಯ ಸಾಧಿಸಬೇಕೆನ್ನುವ ಗುಣ ಹೆಣ್ಣಿಗೂ ಸಹಜವಾಗಿಯೇ ಇರುತ್ತದೆ. ತನ್ಮೂಲಕ ತನ್ನ ಸಾಮಾಜಿಕ ಅಸ್ಮಿತೆಯನ್ನು ಉನ್ನತೀಕರಿಸಿಕೊಳ್ಳುವ ಬಯಕೆ. ಎಂ.ಆರ್. ಭಗವತಿ ಇಂತಹ ತುಡಿತವನ್ನು ತೆರೆದಿಡುವುದು ಹೀಗೆ :

**ಎತ್ತರಕ್ಕೆ ಏರಬೇಕು ನಾನು;**
**ಅಷ್ಟರೊಳಗೆ**
**ಒಂದು ಪುಟ್ಟ ಗಿಡವಾಗಬೇಕು.**

**(ಕಾಂಕ್ಷೆ - ಏಕಾಂತದ ಮಳೆ - ಪುಟ ೪೨)**

'ಬೀಜದಿಂದ ವೃಕ್ಷ' ಎನ್ನುವಂತೆ ಎತ್ತರದ ಕನಸಿರುವ ಪ್ರತಿಯೊಬ್ಬರಿಗೂ ಪುಟ್ಟ ಗಿಡವಾಗುವ ವಿನಯವಿರಬೇಕು. ಮಹಾತ್ವಾಕಾಂಕ್ಷೆ ಮತ್ತು ವಿಧೇಯತೆ ಎರಡನ್ನೂ ಕವನ ಏಕಕಾಲದಲ್ಲಿ ಹೇಳುವ ಮೂಲಕ ಬೇರೆಯವರನ್ನು ಹತ್ತಿಕ್ಕಿ ಮೇಲೆ ಬರುವ ಕನಸು ಕಾಣುತ್ತಿಲ್ಲ. ಎಲ್ಲರೊಂದಿಗೂ ಬೆರೆತು, ಸಹಜೀವಿಗಳನ್ನೂ ತನ್ನ ತೆಕ್ಕೆಗೆ ತಂದುಕೊಂಡು ಔನ್ನತ್ಯ ಸಾಧಿಸುವ ಹಂಬಲ. ಆದರೆ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ತನ್ನ ಸಹಜೀವಿಯಾದ 'ಹೆಣ್ಣ'ನ್ನು ಹೀಗೆ ತಕ್ಕೈಸಿಕೊಂಡು ಹೋಗುವ ಸಹಬಾಳ್ವೆಯ ನೆಲೆಗಳು ಕಡಿಮೆ ಇವೆ. ಆದ್ದರಿಂದಲೇ ತಾರಿಣಿ ಶುಭದಾಯಿನಿಯವರು ಹೆಣ್ಣಿನ ಅಸ್ಮಿತೆಯನ್ನು ಚರಮಗೀತೆಯೊಂದಿಗೆ ಪ್ರಾರಂಭಿಸುತ್ತಾರೆ.

**ಹಾಡೆವು ನಾವು**

**ಏನನ್ನೂ**

**ಗಂಟಲು ಬತ್ತಿದೆ, ಕ್ಷಮಿಸಿ**

**ನಾವೀಗ ಮೌನಿಗಳು | ಹಾಡಿನ ಗುಂಗ ಮರೆತವರು**

**('ಚರಮಗೀತೆ' - ತೋಡೀರಾಗ - ಪುಟ ೧)**

ಈ ಮೌನಕ್ಕೆ ಕಾರಣಗಳನ್ನೂ ಕವನವೇ ಅಂತರ್ಗತಗೊಳಿಸಿಕೊಂಡಿದೆ. ಯಾರ್‍ಯಾರೋ ಬಂದು ತನ್ನದು, ತನ್ನದು ಎಂದು ಅಧಿಕಾರ ಸ್ಥಾಪಿಸುತ್ತಿರುವಾಗ ಅಸಹಾಯಕತೆಯಿಂದ ಈ ಮೌನ ಆವರಿಸಿರಬಹುದು ಅಥವಾ ಯಾವುದೇ ಅನಾಹುತವೂ ಜರುಗುವ ಮುನ್ನ ಪ್ರಕೃತಿ ಮೌನ ವಹಿಸುವಂತೆ ಇದೂ ಕೂಡ ಮುಂದಿನ ಬದಲಾವಣೆಯನ್ನು ಸೂಚಿಸುವ ಮೌನವೂ ಆಗಿರಬಹುದು. ವಾಸ್ತವವಾಗಿ ಹೆಣ್ಣಿಗೆ ಬೇಕಾಗಿರುವುದೇನು. ಜೀವಿಸಹಜವಾದ ಬದುಕು. ಆದರ್ಶಗಳ ಆವರಣದಲ್ಲಿನ ಬದುಕು ಆಕೆಗೆ ಬೇಡವಾದ ಅಂಶವನ್ನು ಈಗಾಗಲೇ 'ನಿರಾಕರಣೆಯ ನೆಲೆ'ಯಲ್ಲಿ ಚರ್ಚಿಸಲಾಗಿದೆ. ಅದರ ಮುಂದುವರಿದ ಭಾಗವಾಗಿ ತನಗೆ ಏನು ಬೇಕು ಎಂಬುದನ್ನು ತಾನೇ ಸ್ಪಷ್ಟವಾಗಿ ಹೇಳುತ್ತಾರೆ.

**ಅಯ್ಯಾ ನನಗೆ ಬೇಕು!**

**ಕ್ಷಣ ತಿಕ್ಕಾಟದಲ್ಲಿ ಹೇಸಿಗೆ ನಡುವೆ**

**ಹುಟ್ಟಿ ಅಲ್ಲಿಯೇ ಇನ್ನೂ ಗಿರಗಿಟ್ಲೆ**

**ಆಡುತ್ತಿರುವ ನನ್ನ ನಾನೇ ಅರಿವುದಯ್ಯಾ**

**(ನಾನು ನಾನೇ - ಅಮ್ಮನಗುಡ್ಡ - ಪುಟ ೧)**

ಸಾಹಿತ್ಯಕ - ವಿಮರ್ಶಾ ವಲಯದಲ್ಲಿ ಈಗಾಗಲೇ ಸಾಕಷ್ಟು ಚರ್ಚಿತವಾಗಿರುವ ಕವನವಿದು. ಇಲ್ಲಿರುವುದು ಬದುಕಿನ ವಾಸ್ತವದ ಹಂಬಲ; ಹಾಗೆಯೇ ಈಗಾಗಲೇ ಇತರರು ಗುರುತಿಸಿದ ಅಸ್ಮಿತೆಯನ್ನು ಸ್ವತಃ ತಾನೇ ಕಂಡುಕೊಳ್ಳುವುದು ಆರೋಪಿತ ಅಸ್ಮಿತೆಗಿಂತ ಸ್ವತಃ ನಿರ್ಮಾಣ ಮಾಡಿಕೊಳ್ಳುವ ವ್ಯಕ್ತಿತ್ವ ಹೆಣ್ಣಿನ ನೈಜ ಬಯಕೆ ಎನ್ನುವುದನ್ನು ಘಂಟಾಘೋಷವಾಗಿ

ಹೇಳಿಕೊಂಡಿದ್ದಾಳೆ. ನನಗಿದು ಬೇಕು ಎನ್ನುವ ಖಚಿತ ನಿರ್ಧಾರವನ್ನು ಘೋಷಿಸುವಾಗಲೂ ಸಂಬೋಧನೆ 'ಅಯ್ಯಾ' ಎಂದಿರುವುದರಿಂದ ಮಾತಿನಲ್ಲಿ ಸೌಜನ್ಯವನ್ನು ಗುರುತಿಸಬಹುದು. ಈ 'ಅಯ್ಯಾ' ವ್ಯಂಗ್ಯವಾಗಿಯೂ ಬಳಕೆಯಾಗಿರಬಹುದು. ಶತಶತಮಾನಗಳಿಂದ ಹೆಣ್ಣಿನ ಮೇಲಾದ ಅಸಮಾನತೆಯ ಗದಾಪ್ರಹಾರದ ಪರಿಹಾರ ರೂಪವಾಗಿಯೂ, ಸ್ತ್ರೀ ವಿಮೋಚನಾ, ಸ್ತ್ರೀವಾದಿ ಚಳವಳಿಗಳ ಕಾರಣದಿಂದಲೂ ರಾಜಕೀಯವಾಗಿ ಮಹಿಳೆಯ ಸ್ಥಾನಮಾನ ಹೆಚ್ಚಿಸಲು 'ಮೀಸಲಾತಿ' ನೀಡಲಾಗಿದೆ. ಈ ಮೀಸಲಾತಿಯ ಮೇಲೂ ಗಂಡಸಿನ ಪ್ರಭಾವ ಮಾಡುವ ಆಕ್ರಮಣವನ್ನು ಮಾಧವಿ ಭಂಡಾರಿಯವರು ಹೀಗೆ ವಿವರಿಸುತ್ತಾರೆ :

**ಜೋಡಿ ಮಂಚದ ಮೇಲೂ**

**ಮನಸ್ತಾಪವೇಕೆಂದು ಮೆಚ್ಚಿನ**

**ಮಡದಿ ಆದಳು ರಬ್ಬರ್ ಸ್ಟ್ಯಾಂಪು**

**(ಪ್ರಮೀಳಾ - ಮೀಸಲಾತಿ - ಹರಿದ ಸ್ಕರ್ಟಿನ ಹುಡುಗಿ - ಪುಟ ೪೪)**

ತನಗೆ ದೊರೆತ ಅವಕಾಶ, ಅಧಿಕಾರವನ್ನೂ ಕೂಡ ಬಳಸಲಾಗದ ಅಸಹಾಯಕತೆ ಹೆಣ್ಣಿನದು. ಕಾರಣ ತನ್ನ ಸಾಂಪ್ರದಾಯಿಕ ಜೀವನಕ್ರಮದಲ್ಲಿ ವ್ಯತ್ಯಾಸ ಮಾಡಿಕೊಳ್ಳಲು ಇಷ್ಟವಿಲ್ಲದಿರುವುದು, ಕೌಟುಂಬಿಕವಾಗಿ ಎದುರಾಗುವ ತಲ್ಲಣಗಳ ಭಯ, ಸಾಂಪ್ರದಾಯಿಕ ಸಮಾಜದಲ್ಲಿ ಸಂಬಂಧಗಳಿಗಿರುವ ಮಾನ್ಯತೆಯೇ ಇದಕ್ಕೆ ಕಾರಣ. ಈ ಹಿಂದೆಯೇ ಚರ್ಚಿಸಿರುವಂತೆ ಹೆಣ್ಣಿನ ಸುತ್ತ ಸಂಬಂಧಗಳ ಕೋಟೆಯೇ ಇದೆ. ಅವೆಲ್ಲವನ್ನೂ ಕಾಪಿಡುವ ಹೊಣೆಗಾರಿಕೆ ಅಲಿಖಿತವಾಗಿಯೇ ಹೆಣ್ಣಿಗೆ ವರ್ಗಾವಣೆಗೊಂಡಿದೆ. ಈ ರೀತಿಯ ಸಂಬಂಧಗಳ ಉಸಿರು ಕಟ್ಟಿಸುವಿಕೆಯಿಂದ ಹೊರಬರುವ ಪ್ರಯತ್ನವೇ ಹೆಣ್ಣು ತನ್ನ ಅಸ್ಮಿತೆಯನ್ನು ತಾನು ಕಂಡುಕೊಳ್ಳುವ ಮೊದಲ ಹಾಗೂ ದೃಢವಾದ ಹೆಜ್ಜೆ. ಇದನ್ನು ಮನಗಂಡಿರುವುದರಿಂದ ಎಚ್.ಎಲ್. ಪುಷ್ಪ ಹೆಣ್ಣಿನ ಅಸ್ಮಿತೆಯನ್ನು ಹೀಗೆ ಘೋಷಿಸುತ್ತಾರೆ.

**ಅಪ್ಪಳಿಸುವ ಅಲೆಯೆದುರು**

**ವಿಳಾಸವಿಲ್ಲದ ನಾನು ತಬ್ಬಿಬ್ಬಾಗಿದ್ದೇನೆ**

**ಮಗಳು, ಹೆಂಡತಿ, ತಾಯಿ ನಾನಲ್ಲ ಶಿವನೇ**

**ಕಳೆದು ಹೋಗಲಿಕ್ಕೆಂದೇ ಬಂದ**

**ಮಾರ್ದನಿಯಿಲ್ಲದ ಪುಟ್ಟ ಹಕ್ಕಿ**

**(ಉಗಾದಿಯ ಪುಟ್ಟ ಹಕ್ಕಿ ಹಾಗೂ ಒಗರು - ಲೋಹದ ಕಣ್ಣು - ಪುಟ ೪೨)**

ಆರ್ತವಾಗಿ ಕೇಳಿಸುವ ಭಾವಮಾಧುರ್ಯದಿಂದ ಕೂಡಿರುವ ಈ ಕವನದಲ್ಲಿ 'ಪುಟ್ಟ ಹಕ್ಕಿಯ ರೂಪಕ ಅದರಲ್ಲೂ ಉಗಾದಿಯ ಒಗರು ಕುಡಿದ ಪುಟ್ಟ ಹಕ್ಕಿಯ ರೂಪಕ ಹೆಣ್ಣಿನ ಮನಸ್ಥಿತಿ,

ಪರಿಸ್ಥಿತಿಗಳೆರಡನ್ನೂ ತನ್ನೆಲ್ಲ ಅರ್ಥಸಾಧ್ಯತೆಗಳೊಡನೆ ಹಿಡಿದಿಟ್ಟಿದೆ. 'ಅಸ್ಮಿತೆ'ಯ ತಹತಹಿಕೆಯನ್ನು ಇಷ್ಟು ಧ್ವನಿಪೂರ್ಣವಾಗಿ ಹೇಳಲು ಬೇರೆ ಪರ್ಯಾಯಗಳಿಲ್ಲವೇನೋ ಎಂಬಷ್ಟು ಸಹಜತೆಯಿಂದ ಕವನ ಮೂಡಿ ಬಂದಿದೆ. ಎಲ್ಲ ಕಾಲಕ್ಕೂ ಹೆಣ್ಣಿನ ಅಂತರಾಳದ ಕೂಗಿದು. ಇದನ್ನು ಸುಳ್ಳು ಮಾಡಲೆಂದೇ ಲೋಕದಲ್ಲಿ ಹೆಣ್ಣಿನ ಪ್ರಯತ್ನ ಇನ್ನಿಲ್ಲದಂತೆ ಸಾಗಿದೆ. ಪೂರಕವಾಗಿ ಮಹಿಳಾಕಾವ್ಯವೂ ಸ್ಪಂದಿಸುತ್ತಲೇ ಬರುತ್ತಿದೆ.

**ಟಿಪ್ಪಣಿಗಳು**

೧. ಪ್ರೊ. ಟಿ. ಕೇಶವಭಟ್ಟ, **ಸುವರ್ಣಕೋಶ,** ಪು ೨೨೬.

೨. ಓ.ಎಲ್. ನಾಗಭೂಷಣ ಸ್ವಾಮಿ, **ವಿಮರ್ಶೆಯ ಪರಿಭಾಷೆ,** ಪು. ೩೩೧, ೩೩೨,



# ಅಧ್ಯಾಯ : ಐದು

## ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಭಾಷಿಕ ನೆಲೆಯಲ್ಲಿ

೫.೧. ವರ್ಣನೆಯ ನೆಲೆ

೫.೨. ಪ್ರತಿಮೆಗಳ ನೆಲೆ

೫.೩. ರೂಪಕಗಳ ನೆಲೆ

೫.೪. ಉಪಮೆಗಳ ನೆಲೆ

೫.೫. ವ್ಯಂಗ್ಯದ ನೆಲೆ

ಅಧ್ಯಾಯ : ಐದು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಭಾಷಿಕ ನೆಲೆಯಲ್ಲಿ

'ಅಭಿವ್ಯಕ್ತಿ' ಎನ್ನುವುದು ಸಾಕಷ್ಟು ಯೋಚನೆ ಮಾಡುವುದರ ಫಲವಾಗಿ ಉಂಟಾಗಿರುವಂತಹದು. ಭಾಷೆ ಕೂಡಾ ಅಭಿವ್ಯಕ್ತಿಯ ಒಂದು ವಿಧಾನ. ಭಾಷೆ ಅರ್ಥವನ್ನು ಸೃಷ್ಟಿಸುವುದಕ್ಕಿಂತಲೂ ನಿರ್ದೇಶಿಸುವ ಕಾರ್ಯ ಮಾಡುತ್ತದೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ 'ಕೃತಿ ರಚನೆಯಾದ ಕ್ಷಣದಲ್ಲಿಯೇ ಅದರ ಲೇಖಕನು ಸಾಯುತ್ತಾನೆ' ಎಂಬ ರೋಲಾನ್ ಬಾರ್ಥ್‌ನ ಮಾತಿನಂತೆ ಲೇಖಕರ ಉದ್ದೇಶಿತ ಅರ್ಥಕ್ಕಿಂತಲೂ ನಮ್ಮಿಂದ ಸೃಷ್ಟಿಯಾದ ಅರ್ಥವೇ ಹೆಚ್ಚು ಮುಖ್ಯವಾಗುತ್ತದೆ.

ಈ ಭಾಷೆಯೆಂಬ ಧ್ವನಿಸಂಕೇತವ್ಯವಸ್ಥೆ ಜಾಗತಿಕವಾಗಿ, ಅದರಲ್ಲೂ ಸ್ತ್ರೀವಾದಿ ಬರಹಗಾರರನ್ನು ಹಲವು ಬಗೆಯಲ್ಲಿ ಕಾಡಿದೆ. ಅನೇಕ ಸ್ತ್ರೀವಾದಿ ಚಿಂತಕರು ಭಾಷೆಯ ಒಳಗಿರುವ ಲಿಂಗತಾರತಮ್ಯದ ಕುರಿತು ಧ್ವನಿ ಎತ್ತಿದ್ದಾರೆ. ಸುಧಾರಣೆಗೆ ಯತ್ನಿಸಿದ್ದಾರೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮಹಿಳಾ ಕವಿಗಳು ಈ ಕುರಿತು ತಮ್ಮದೇ ಆದ ಸ್ವಂತಿಕೆಯೊಂದಿಗೆ ಪ್ರತಿಕ್ರಿಯಿಸಿದ್ದು ಕಂಡುಬರುತ್ತದೆ. ಮೀಮಾಂಸಕಾರರು ಗುರುತಿಸಿರುವ ವಾಚ್ಯಾರ್ಥ, ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳೆಂಬ ಶಬ್ದಸಂಬಂಧಿ ಅರ್ಥವಿವರಣೆಗಳು ತಮ್ಮಷ್ಟಕ್ಕೆ ತಾವೇ ಸಮಯ ಸಂದರ್ಭೋಚಿತವಾಗಿ, ಓದುಗರ ಗ್ರಹಿಕೆಗನುಗುಣವಾಗಿ ಬಳಕೆಯಾಗುವುದು ಕಂಡುಬರುತ್ತದೆ.

ಮಹಿಳಾ ಕಾವ್ಯಭಾಷೆಯನ್ನು ಕುರಿತಂತೆ ಎಚ್.ಎಸ್. ರಾಘವೇಂದ್ರರಾವ್ ಅವರು "ಕನ್ನಡವನ್ನು ಕವಯಿತ್ರಿಯರು ಹೇಗೆ ಬಳಸಬೇಕು ಎನ್ನುವುದು ನಿಜವಾಗಿಯೂ ಮಿಲಿಯನ್ ಡಾಲರ್ ಪ್ರಶ್ನೆ. ಅವರಿಗೆ ಎಲ್ಲ ಕಡೆಯೂ ದಕ್ಕುವ ಕನ್ನಡ ಗಂಡಸರು ಕಟ್ಟಿಕೊಟ್ಟ ಕನ್ನಡವೇ. ಶೃಂಗಾರವಾದರೂ ಅಷ್ಟೆ, ವಾತ್ಸಲ್ಯವಾದರೂ ಅಷ್ಟೆ, ಕೋಪತಾಪಗಳಾದರೂ ಅಷ್ಟೆ. ಅವರಿಗೆ ಸಹಜವಾದ ಭಾಷೆಯು ಬಹುಮಟ್ಟಿಗೆ ಬಾಲ್ಯದಲ್ಲಿಯೇ ಕೊಲೆಯಾಗುತ್ತದೆ.... ಓದುವ ಮಾದರಿಗಳಾಗಿ, ಕಲಿಸುವ ಗುರುಗಳಾಗಿ, ಮೆಚ್ಚುವ ಪಂಚೇಂದ್ರಿಯಗಳಾಗಿ ಎಲ್ಲ ಕಡೆಯೂ ಪುರುಷನಿರ್ಮಿತ ಭಾಷೆಗಳ ದಬ್ಬಾಳಿಕೆಯೆ..... ನಾವು ಕೊಂಚ ಮುಕ್ತವಾಗಿ ಯೋಚಿಸಬೇಕು. ನಮ್ಮದು ಪದಗಳಲ್ಲ. ಅವು ದೃಷ್ಟಿಕೋನಗಳು."[೧]

ಹೀಗೆ ಮಹಿಳೆಗೊಂದು ಪ್ರತ್ಯೇಕ ಭಾಷೆ ಇದೆಯೇ ಎಂಬ ಬಗ್ಗೆಯೇ ಜಾಗತಿಕ ವಲಯದಲ್ಲಿ ಸಾಕಷ್ಟು ಚರ್ಚೆಗಳು ನಡೆದಿದ್ದು ಸ್ತ್ರೀಯ ನುಡಿಗಟ್ಟು ಆಕೆ ಪಡೆಯುವ ಶಿಕ್ಷಣ ಮತ್ತು

ಸಾಮಾಜಿಕ ಅನುಸರಣೆಯ ವಿವಿಧ ಹಂತಗಳಲ್ಲಿಯೇ ಮರೆಯಾಗಿ ಬೇರೊಬ್ಬರ ಭಾಷೆಯಲ್ಲಿ ಬರೆಯುವ ಅನಿವಾರ್ಯತೆಯನ್ನು ಕುರಿತು ಸ್ತ್ರೀವಾದಿ ಚಿಂತಕರು ವಿವರವಾದ ಅಧ್ಯಯನ ನಡೆಸಿದ್ದಾರೆ. ಕನ್ನಡ ಮಹಿಳಾಕಾವ್ಯ ಸಂದರ್ಭಕ್ಕೆ ಬಂದರೆ ಎಚ್.ಎಸ್.ಆರ್. ಅವರು ಅನೇಕ ಬಗೆಯ ಬರವಣಿಗೆಯ ಮಾದರಿಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ,

* ಅನುಭವಲೋಕ ಮತ್ತು ಧೋರಣೆಗಳ ದೃಷ್ಟಿಯಿಂದ ಸ್ತ್ರೀಪರನೆಲೆಗಳನ್ನು ಉಳಿಸಿಕೊಂಡರೂ, ರೂಪದಲ್ಲಿ ಸ್ತ್ರೀ ವಿಶಿಷ್ಟವಾದ ಆಕೃತಿಗಳ ಬದಲಾಗಿ ಪುರುಷರು ಬರೆಯುವ ಬಗೆಯಲ್ಲಿಯೇ ಯಶಸ್ವಿಯಾಗುವ ಆಸಕ್ತಿ ಮತ್ತು ಪ್ರತಿಭೆಗಳನ್ನು ತೋರಿಸುವುದು. ಇದಕ್ಕೆ ಅವರು ಸರ್ವಮಂಗಳ ಕಾವ್ಯಕ್ರಮವನ್ನು ಉದಾಹರಿಸುತ್ತಾರೆ. ಇಲ್ಲಿ ಲಿಂಗಾಧಾರಿತ ಪಕ್ಷಪಾತವನ್ನು ಸಹಿಸಲಾಗುವುದಿಲ್ಲ. ಇದು ಲೇಖಕಿಯರ ವೈಚಾರಿಕ ಮಿತಿಗಳ ಬಗ್ಗೆ ಇದ್ದ ತಪ್ಪುಕಲ್ಪನೆಗಳನ್ನು ಹೊಡೆದು ಹಾಕುವ ಪ್ರಯತ್ನವಾಗಿ ಕಾಣುತ್ತದೆ.

* ಹೆಣ್ಣುತನದ ವಿಶಿಷ್ಟ ನೆಲೆಗಳನ್ನು ವೈಭವೀಕರಿಸುವ, ಲಿಂಗಸಂಬಂಧಿ ವಿಶೇಷತೆಯನ್ನು ಅನುಭವಿಸುವ ಪ್ರಕಟಸುವ ಕ್ರಮವನ್ನು ಗುರುತಿಸಲಾಗಿದೆ. ಇದಕ್ಕೆ ಅವರು ಹೇಮಾ ಪಟ್ಟಣಶೆಟ್ಟಿಯವರ ಕಾವ್ಯಕ್ರಮವನ್ನು ಉದಾಹರಿಸುತ್ತಾರೆ. ಸುಕನ್ಯಾ ಮಾರುತಿ ಸೇರಿದಂತೆ ಅನೇಕ ಮಹಿಳಾಕವಿಗಳ ಕಾವ್ಯದಲ್ಲಿ ಈ ಕ್ರಮವನ್ನು ಗುರುತಿಸಬಹುದಾಗಿದೆ. ಇಲ್ಲಿ ಲೈಂಗಿಕ ಅನುಭವದ ಉತ್ಸವೀಕರಣದ ಮೂಲಕ ತನ್ನ ವ್ಯಕ್ತಿತ್ವವನ್ನು ಪುನರ್‌ರಚಿಸುವ ವಿಧಾನವೊಂದು ಗೋಚರವಾಗುತ್ತದೆ.

* ಹೆಣ್ಣಿನ ಬದುಕಿನ 'ಸಾರ್ಥಕ' ಕ್ಷಣಗಳನ್ನು ಹಾಗೆಯೇ ಅದರಲ್ಲಿ ಮಡುಗಟ್ಟಿರುವ ಒಂಟಿತನ, ವಿಷಾದಗಳನ್ನು ತನ್ನದೇ ವಿಶಿಷ್ಟವಾದ ನುಡಿಗಟ್ಟಿನಲ್ಲಿ ಹಿಡಿದಿಡುವ ಕ್ರಮ. ಇದಕ್ಕೆ ಪ್ರತಿಭಾ ನಂದಕುಮಾರ್ ಅವರ ಕಾವ್ಯಕ್ರಮವನ್ನು ಉದಾಹರಿಸುತ್ತಾರೆ. ಇಲ್ಲಿ ತನ್ನ ಸ್ತ್ರೀ ವಿಶಿಷ್ಟ ನೆಲೆಗಳನ್ನು ನಿರ್ಲಕ್ಷಿಸದೆ ಅದರಾಚೆಗಿನ ಲೋಕವನ್ನು ಹಿಡಿದಿಡಲು ಅವರು ನಿರ್ಮಿಸುವ ರೂಪಕಗಳು, ಚಿತ್ರಮಾಲೆಗಳು ಪುರುಷನ ಲೋಕದ ಆಚೆಗಿರುವುದನ್ನು ಸದಾ ಹಿಡಿಯುತ್ತವೆ ಎನ್ನುವುದು ಅವರ ಅಭಿಪ್ರಾಯ. ವಸ್ತುಸ್ಥಿತಿಯನ್ನು ಸಾಮಾಜಿಕ ಸಂಗತಿಗಳ ಫಲಿತವೆಂದು ತಿಳಿಯುವ ಬದಲು 'ಮನುಷ್ಯನ ಸನ್ನಿವೇಶ'ದ ಒಂದು ಅವತಾರವೆಂದು ತಿಳಿದಾಗ ವಿಷಾದ, ಛಲಗಳು ಕಂಡುಬರುತ್ತವೆ. ಆದರೆ ಇವರ ಭಾಷೆಯು ದೈಹಿಕ ವಿಶಿಷ್ಟತೆಯ ಸೆರೆಮನೆಯಿಂದ ಒಂದು ಹೆಜ್ಜೆ ಮುಂದಿಟ್ಟು ಕೌಟುಂಬಿಕ ಮತ್ತು ಅಂತರ್ಮಾನುಷ್ಯ ಸಂಬಂಧಗಳ ಅರ್ಥವನ್ನೇ ಶೋಧಿಸುತ್ತವೆ ಎಂದೂ ಗುರುತಿಸಿದ್ದಾರೆ.

* ಸವಿತಾ ನಾಗಭೂಷಣ ಅವರ ಕಾವ್ಯಕ್ರಮವನ್ನು ಗುರುತಿಸುವಾಗ ಭಾವಗೀತಾತ್ಮಕವಾದ ಮಾನವತಾವಾದದ ಮೇಲೆ ಒತ್ತು ನೀಡುವ ಕ್ರಮವೆಂದು ಗುರುತಿಸುತ್ತಾರೆ. ವ್ಯಕ್ತಿಯ ಅನುಭವಗಳ, ನೆನಪುಗಳ, ಕನಸುಗಳ ಪಾವಿತ್ರ್ಯವನ್ನು ಎತ್ತಿ ಹಿಡಿಯುವ ಈ ಕವಿತೆಗಳಲ್ಲಿಯೂ ಹೆಣ್ಣಿನ ಅನುಭವಲೋಕವು ಕೇಂದ್ರಸ್ಥಾನ ಪಡೆಯದಿರುವ ಕುರಿತು ಪ್ರಸ್ತಾಪಿಸುತ್ತಾರೆ. ಬದಲಾಗಿ

ಮನುಷ್ಯಸಹಜವಾದ ಆದರ್ಶವಾದ, ಸಂವೇದನಾಶೀಲತೆ ಹಾಗೂ ಪ್ರೀತಿಗಳನ್ನು ಎತ್ತಿಹಿಡಿಯುವ ಇವರ ಕಾವ್ಯದಲ್ಲೂ ತಾಳ್ಮೆ ಮತ್ತು ನಿರ್ಲಿಪ್ತತೆಗಳು ಔಷಧೀಯ ಗುಣಗಳನ್ನು ಪಡೆದುಕೊಳ್ಳುತ್ತವೆ ಎಂಬುದು ಅವರ ಅನಿಸಿಕೆ.

* ಸ. ಉಷಾ ಅವರ ಬರವಣಿಗೆಯನ್ನು ಇನ್ನೊಂದು ಪ್ರಾತಿನಿಧಿಕ ಮಾದರಿಯಾಗಿ ಗುರುತಿಸುತ್ತಾರೆ. ಮಹಿಳೆಯರ ನೋವನ್ನು ಅದರ ಐತಿಹಾಸಿಕ ಪೌರಾಣಿಕ ಆಯಾಮಗಳಲ್ಲಿ ಕೂಡ ಇಟ್ಟು ಗ್ರಹಿಸುವ ಅವರ ಪ್ರಯತ್ನವನ್ನು ಗುರುತಿಸುತ್ತಾ ಭಾವನಾತ್ಮಕತೆ ಮತ್ತು ವೈಚಾರಿಕ ಎಚ್ಚರಗಳನ್ನು ಸಂಯೋಜನ ಮಾಡುವುದರಿಂದ ಕವಿತೆಗೊಂದು ವ್ಯಾಪ್ತಿಯೂ ಬರುತ್ತದೆಂಬುದು ಅವರ ಅಭಿಪ್ರಾಯ.೨

ಈ ಮೇಲೆ ಗುರುತಿಸಲಾದ ಮಾದರಿಗಳು ಆಧುನಿಕ ಮಹಿಳಾಕಾವ್ಯ ಕಣ್ತೆರೆದ ಪ್ರಾರಂಭದ ದಶಕಗಳಿಗೇ ಹೆಚ್ಚು ಅನ್ವಯಿಸುತ್ತವೆ. ಆದರೆ ಇಂದು ಮಹಿಳಾಕಾವ್ಯದ ವಿಸ್ತಾರ ವ್ಯಾಪಕವಾಗಿ ಚಾಚಿಕೊಳ್ಳುತ್ತದೆ. ಆದ್ದರಿಂದ ಪ್ರತಿ ಕವಯಿತ್ರಿಯೂ ತನ್ನದೇ ವಿಶಿಷ್ಟ ಕ್ರಮದಲ್ಲಿ ಬರೆಯುವುದನ್ನು ಗುರುತಿಸುಬಹುದಾಗಿದೆ. ಹಾಗೆಯೇ ತನ್ನದೇ ರಚನಾಕ್ರಮವನ್ನು ಆಗಾಗ ಬದಲಿಸುತ್ತಾ, ವಿಸ್ತರಿಸುತ್ತಾ ಬರೆಯುವ ಪ್ರಯತ್ನಗಳೂ ಸಹ ಸಿಗುತ್ತವೆ. ಆದ್ದರಿಂದ ಒಟ್ಟಾರೆಯಾಗಿ ಮಹಿಳಾಕಾವ್ಯದಲ್ಲಿ ಬಳಕೆಯಾಗಿರುವ ಭಾಷಾವೈಶಿಷ್ಟ್ಯತೆಗಳನ್ನು ಗುರುತಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಭಾಷಾಬಳಕೆಗೆ ಸಂಬಂಧಿಸಿದಂತೆ ಪ್ರತಿ ಕವಯಿತ್ರಿಗೂ ಒಂದು ಬಗೆಯ ಆತಂಕ ಅಥವಾ ಹಿಂದಿನ ಕ್ರಮಗಳನ್ನು ಮುರಿಯುವ, ಮೀರುವ ಹಂಬಲ ಇದ್ದೇ ಇರುತ್ತದೆ. ಇದಕ್ಕೆ ಮಹಿಳಾ ಕಾವ್ಯವೇನೂ ಹೊರತಲ್ಲ. ಭಾಷಾಬಳಕೆಯ ಕುರಿತಂತೆಯೇ ಕವಯಿತ್ರಿಗಳಲ್ಲೊಂದು ಜಿಜ್ಞಾಸೆ ನಡೆಯುತ್ತಿರುವುದನ್ನು ಮಹಿಳಾಕಾವ್ಯದಲ್ಲಿಯೇ ಕಾಣಬಹುದಾಗಿದೆ. ಮಹಿಳಾ ಕಾವ್ಯಕ್ರಮವನ್ನು ಕಡೆಗಣಿಸುವವರನ್ನು ಕುರಿತು ವೈದೇಹಿಯವರು ಪ್ರತಿಕ್ರಿಯಿಸುವುದು ಹೀಗೆ :

> **ಕಾವ್ಯ ತಿಳಿದವರೇ**
> **ಹೇಳಿ ನನಗೆ ಕಾವ್ಯ ಗೊತ್ತಿಲ್ಲ**
> **ತಿಳಿಸಾರು ಗೊತ್ತು**
> ..............................
> **ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ**
> **('ತಿಳಿದವರೇ ಹೇಳಿ'– ವೈದೇಹಿಯವರ ಆಯ್ದ ಕವನಗಳು – ಪುಟ ೧೦)**

ಅಡುಗೆಮನೆಯ ಸಾಮಾನ್ಯವೆಂದು ಪರಿಗಣಿಸಲ್ಪಡುವ ಸಂಗತಿಯೊಂದನ್ನು ಬಳಸಿಕೊಂಡು ತಮ್ಮ ಕಾವ್ಯಮೀಮಾಂಸೆಯನ್ನು ತೆರೆದಿಡುವ ಅವರು ಬಳಸಿರುವ ನುಡಿಗಟ್ಟು ಸ್ತ್ರೀ ಪ್ರಪಂಚದ

ಅನುಭವಪ್ರೇರಿತವಾದವುಗಳೇ ಆಗಿವೆ. ಕವಿ ಮನಸ್ಸಿನೊಳಗೆ ನಡೆಯುವ ಸಂಘರ್ಷವನ್ನು ಗೀತಾ ಹೆಗಡೆ ಎಂಬ ಕವಯಿತ್ರಿ ತೆರೆದಿಡುವುದು ಹೀಗೆ :

**ಪದಗಳೊಂದಿಗೆ ಬೇಕು**
**ಪದಗಳ ಸಂಘರ್ಷ**
**ತಮ್ಮದೇ ಕಿಡಿ ಕುಡಿಯೊಡೆಯಲು**
**ಮತ್ತೆ ಬೇಕು ಮನದ ತುಡಿತ ಕೂಡ**

**(ರುಬ್ರೊವನ್ ಕವನ : ೨ – ಅಕ್ಷರ ಚೈತನ್ಯ – ಗೀತಾ ಹೆಗಡೆ – ಪುಟ ೨೩)**

ಹೀಗೆ ಪದಗಳ ಸಂಘರ್ಷ ಕವಿತೆ ಕಟ್ಟಬಹುದಾದರೂ, ಕವಿತೆ ಹುಟ್ಟುವಾಗ ಮಾತ್ರ ಕವಯಿತ್ರಿಯ ಅಂತರಾಳದ ತುಡಿತ ಅತೀ ಅವಶ್ಯ ಎನ್ನುವುದನ್ನು ಒತ್ತಿ ಹೇಳುತ್ತಿದೆ. ಮಹಿಳಾ ಕಾವ್ಯವು ಬಹುಪಾಲು ನೆನಪುಗಳು, ಅನುಭವಗಳು, ವಿಚಾರಗಳ ನಿರೂಪಣೆಗೆ ಆದ್ಯತೆ ನೀಡಿದ್ದು, ಕಲ್ಪಕತೆಯ ಮಿತಿಯಲ್ಲಿದೆ ಎಂಬುದು ಎಚ್‌ಎಸ್‌ಆರ್ ಅಭಿಪ್ರಾಯ. ಇದಕ್ಕೆ ಕಾರಣವಾಗಿರುವ ಮೇಲ್ನೋಟದ ಸಂಗತಿಯೆಂದರೆ ಮಹಿಳಾಕಾವ್ಯ ತನ್ನ ಅಸ್ಮಿತೆಯ ಹುಡುಕಾಟಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದರಿಂದ, ತನ್ನನ್ನು ತಾನು ಕಂಡುಕೊಳ್ಳದೆ ಕೇವಲ ಕನಸು ಕಾಣಲು ಹಿಂಜರಿಯುತ್ತಿರಬಹುದೆಂಬ ಊಹೆಯನ್ನು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಮಾಡಬಹುದಾಗಿದೆ. ಹಾಗೆಯೇ ಗೇಯತೆಯತ್ತಲೂ ಮಹಿಳಾಕಾವ್ಯ ತಣ್ಣನೆಯ ನಿರಾಕರಣೆ ತೋರಿರುವುದನ್ನೂ ಸಹ ಈ ಅಧ್ಯಯನ ವ್ಯಾಪ್ತಿಯಲ್ಲಿಯೇ ಗುರುತಿಸಲಾಗಿದೆ. ಇದಕ್ಕೆ ತಾರಿಣಿ ಶುಭದಾಯಿನಿಯವರ ಪ್ರತಿಕ್ರಿಯೆ :

ಹಾಡೆವು । ಏನನ್ನು
**ಗಂಟಲು ಬತ್ತಿದೆ ಕ್ಷಮಿಸಿ**
**ಈ ನೆಲಜಲ ಗಾಳಿಯೊಲುಮೆ**
**ಬೆಸೆದಿತ್ತು ಮನದ ಮಾತು**
**ಯಾರೋ ಬಂದರು। ನಮ್ಮದು ನಮ್ಮದು ಎಂದರು**
**ಉಳಿಯಿತು ಹಾಡು ಎದೆಯೊಳಗೆ**
**ಇಳಿಯಿತು ನೀರು ಕಣ್ಣೊಳಗೆ**
**..........................................**
**ನಾವೀಗ ಮೌನಿಗಳು/ಹಾಡಿನ ಗುಂಗಮರೆತವರು**

**(ಚರಮಗೀತೆ – ತೋಡಿರಾಗ – ಪುಟ ೧)**

ಈ ಹಾಡಿನ ಗುಂಗು ಮರೆತುಹೋಗಲು ಕಾರಣಗಳನ್ನು ಬೇರೆಲ್ಲಿಂದಲೋ ತಂದು ಪಟ್ಟಿ ಮಾಡಬೇಕಾಗಿಲ್ಲ. ಅವು ನಮ್ಮ ಪರಂಪರೆಯೊಳಗೇ ಹಾಸುಹೊಕ್ಕಾಗಿವೆ. ನಿರ್ಲಕ್ಷಿತ ಧ್ವನಿಯೊಂದರ

ತಲ್ಲಣ ಇದಾಗಿದ್ದರೆ, ಮಹಿಳಾಕಾವ್ಯ ಆಡಿದ್ದೆಲ್ಲಾ ಹಾಡೇ ಆಗುವ ಸಾಧ್ಯತೆಯೂ ಸಹ ಇದೆ. ಇದಕ್ಕೆ ವೈದೇಹಿಯವರು ಕೊಡುವ ಕಾರಣ :

**ಹಾಡು ಹೇಳಲು ಏಕೆ ಶಬ್ದಾಲಂಕಾರ**
**ಹಾಡುವುದೆ ಹಕ್ಕಿ ರಾಗ ಪ್ರಸ್ತಾರದನುಸಾರ?**
**ಭಾವಕೋಶವ ಒಡೆದು ಸ್ವರ ಹೊಮ್ಮಿದಾಗ**
**ಅದುವೆ ಹಾಡಾಗುವುದು, ತನ್ನ ತನ್ನಂತೆ**

**(ಹಾಡುವುದೆಂದರೆ – ಪಾರಿಜಾತ – ಪುಟ ೪೧)**

ಹೀಗೆ ಹೆಣ್ಣು ಹಾಡನ್ನು ಸೃಷ್ಟಿಸಬೇಕಾಗಿಲ್ಲ. ಅವಳ ಪಾಡೇ ಹಾಡಾಗುವ ಪರಿಯನ್ನು ಜನಪದದಲ್ಲಿಯೇ ಗುರುತಿಸಲಾಗಿದೆ.

ಆಧುನಿಕ ಮಹಿಳಾಕಾವ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ನವೋದಯದ ಪ್ರಭಾವಳಿಯಿದ್ದ ಕಾಲಘಟ್ಟದಲ್ಲಿ ವರ್ಣನೆಯ ನೆಲೆಯಲ್ಲಿದ್ದು, ಓದುಗರಿಗೆ ತಕ್ಷಣದಲ್ಲಿಯೇ ಅರ್ಥಗ್ರಹಿಕೆಯನ್ನೂ, ರಸೋತ್ಪತ್ತಿಯನ್ನೂ ಉಂಟುಮಾಡುವಂತಿತ್ತು. ನವ್ಯದ ಪ್ರಭಾವಕ್ಕೊಳಗಾಗುತ್ತಲೇ ವಾಚ್ಯವಾಗಿರುವುದೆಲ್ಲ ಸೂಚ್ಯಗೊಳ್ಳುತ್ತಾ, ಯಾವುದನ್ನೂ ನೇರವಾಗಿ ಹೇಳದೆ ಪ್ರತಿಮೆ, ರೂಪಕಗಳ ಮೂಲಕ ಹಿಡಿದಿಡುವ ಕ್ರಮ ರೂಢಿಯಾಗಿರುತ್ತದೆ. ಕೇವಲ ಪದಸಂಯೋಜನೆಗಳ ಮೂಲಕವೇ ಹೇಳಬೇಕಾದ್ದನ್ನು ಹೇಳುವ ಕ್ರಮವೂ ಅನುಸರಣೆಗೊಂಡಿದೆ. ಪುರುಷಪಾರಮ್ಯವನ್ನು ಮೀರುವ, ಸ್ತ್ರೀ ವಿಶಿಷ್ಟ ಅನುಭವಗಳಿಗೆ ಪೂರಕವಾದ ತಮ್ಮದೇ ನುಡಿಗಟ್ಟನ್ನು ಕಟ್ಟಿಕೊಳ್ಳುವ ಪ್ರಯತ್ನ ನಿರಂತರ ಸಾಗಿಬಂದಿರುವುದೂ ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಭಾಷಿಕನೆಲೆಯಲ್ಲಿ ಮಹಿಳಾ ಕಾವ್ಯಾಭಿವ್ಯಕ್ತಿಯನ್ನು ಐದು ಉಪಶೀರ್ಷಿಕೆಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ

೫.೧. ವರ್ಣನೆಯ ನೆಲೆ
೫.೨. ಪ್ರತಿಮೆಗಳ ನೆಲೆ
೫.೩. ರೂಪಕಗಳ ನೆಲೆ
೫.೪. ಉಪಮೆಗಳ ನೆಲೆ
೫.೫. ವ್ಯಂಗ್ಯದ ನೆಲೆ

### ೫.೧. ವರ್ಣನೆಯ ನೆಲೆ

'ರವಿ ಕಾಣದ್ದನ್ನು ಕವಿ ಕಂಡ' ಎಂಬುದು ಕವಿಶಕ್ತಿಗಿರುವ ಅಗಾಧತೆಯನ್ನು ಸೂಚಿಸಿದರೆ, 'ಕವಿ ಕಾಣದ್ದನ್ನು ಓದುಗ ಕಂಡ' ಎಂಬ ಮಾತನ್ನು ಸೇರಿಸಿ, ರವಿ, ಕವಿಗಳಿಗಿಂತ ಓದುಗ ಒಂದು ಹೆಜ್ಜೆ ಮುಂದೆ ಇದ್ದಾನೆ ಎಂಬುದನ್ನು ದೃಢೀಕರಿಸಲಾಗುತ್ತದೆ. 'ವರ್ಣನೆ'ಯೆಂಬುದನ್ನು ಕೇವಲ ಹೊಗಳಿಕೆ, ಸ್ತುತಿಗಳಿಗೆ ಮಾತ್ರ ಸೀಮಿತವಾಗಿರದೆ ವಸ್ತು, ವಿಷಯ, ಸನ್ನಿವೇಶ, ಭಾವವೊಂದನ್ನು ವಿವರಿಸುವಾಗ ನೇರವಾಗಿ ಓದುಗರಿಗೆ ಅರ್ಥಗ್ರಹಿಕೆ ಉಂಟುಮಾಡುವಂತಿರುವುದು

ಎಂಬರ್ಥದಲ್ಲಿ ಪ್ರಸ್ತುತ ಅಧ್ಯಯನ ಗ್ರಹಿಸುತ್ತದೆ. ಆರಂಭಕಾಲದ ಆಧುನಿಕ ಮಹಿಳಾಕಾವ್ಯದ ಭಾಷಿಕ ವಿನ್ಯಾಸವನ್ನು ಗುರುತಿಸುವಾಗ ನವೋದಯಕಾಲದ ಮಾದರಿಗಳು ಗೋಚರವಾಗುತ್ತವೆ. ಕವನದ ಶೀರ್ಷಿಕೆಯೇ ಅದರಲ್ಲಿ ಅಡಗಿರುವ ವಸ್ತು, ಆಶಯವನ್ನು ಸೂಚಿಸುವಂತಿರುತ್ತದೆ. ಇಲ್ಲಿ ವಿಷಯ ಭಾವವೊಂದರ ನಿವೇದನೆಯೇ ಮುಖ್ಯ ಗುರಿಯಾಗಿರುತ್ತದೆ. ತಿರುಮಲಾಂಬ, ಬೆಳಗೆರೆ ಜಾನಕಮ್ಮ ಮುಂತಾದ ಪ್ರಾರಂಭದ ಮಹಿಳಾಕವಿಗಳ ಕವನಗಳು ಇದೇ ನೆಲೆಯಲ್ಲಿ ರಚಿತವಾದವುಗಳು. ಈ ನೆಲೆಯಲ್ಲಿ ಸಾಮಾನ್ಯವಾಗಿ ಗುರುತಿಸಬಹುದಾದ ಅಂಶಗಳೆಂದರೆ ರಾಷ್ಟ್ರೀಯವಾದಿ ಚರಿತ್ರೆಯ ಪರಿಭಾಷೆಗಳು, ಮನದ ಭಾವಗಳನ್ನು ತೇಲಿಬಿಡುವ ಸಹಜತೆ, ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳುವಂತಹ ಸ್ವಗತದ ಪರಿ, ದೈವದ ಮೊರೆ ಹೋಗುವುದು, ಪಿತೃಪ್ರಧಾನ ಆಶಯಗಳ ಅನುಸರಣೆಗೆ ಮನವೊಲಿಕೆ, ತಪ್ಪಿದರೆ ಶಿಕ್ಷೆಯಾಗುವುದೆಂಬ ಎಚ್ಚರಿಕೆ, ತೀರಾ ವಾಚ್ಯವೆನ್ನಿಸುವಷ್ಟು ನೇರ ಸಂವಹನಕ್ಕೆ ಒಳಗಾಗುವ ಭಾಷಾಬಳಕೆ ಇರುತ್ತದೆ. ಬಹುಪಾಲು ಪ್ರಾಸ ಅನುಸರಣೆಯಾಗಿರುತ್ತದೆ. ಲಯಬದ್ಧತೆ, ಪ್ರಾಸಬದ್ಧತೆ, ಗೇಯತೆ, ನಾದಮಾಧುರ್ಯಗಳೊಂದಿಗೆ, ದೇಸೀ ಸೊಗಡನ್ನು ಕಾಣಬಹುದಾಗಿದೆ. ಭಾಷಾಬಳಕೆ ಸರಳವಾಗಿರುತ್ತದೆ. ಚಿಕ್ಕ ಚಿಕ್ಕ ಸಾಲುಗಳೂ ಕೂಡ ಈ ನೆಲೆಯಲ್ಲಿನ ವಿಶಿಷ್ಟ ಅಂಶಗಳಾಗಿವೆ.

ಅದು ಅನನಯವೇ ಇರಲಿ, ಎಚ್ಚರಿಕೆಯೇ ಇರಲಿ, ವಿಡಂಬನೆಯೇ ಇರಲಿ ತತ್‌ಕ್ಷಣದ ಗ್ರಹಿಕೆಗೆ ಸಿಗಬಹುದಾದ ಭಾಷಾಬಳಕೆ ಕಂಡುಬರುತ್ತದೆ. ಬೆಳಗೆರೆ ಜಾನಕಮ್ಮನವರ ಸ್ತ್ರೀಪರ ಕಾಳಜಿ ಹೊಂದಿರುವ ಕವನವೊಂದು ಹೀಗಿರುತ್ತದೆ:

**ಹೆಣ್ಣು ಗಂಡೆಂಬೆರಡು । ಗೊಂಬೆಗಳ ಆಟದೊಳು**
**ಎನ್ನೊಡಲು ಕುದಿಯುತಿದೆ । ಹೆಣ್ಣಾಟವ ಕಂಡು**

........................ ..................................................

**ಗೂಡಿನೊಳಗೇನಿಹುದು । ಕಾಡಹಾಗಲಕಾಯಿ**
**ತಿರುಳಿಲ್ಲ ಸಿಹಿಯಿಲ್ಲ ಸವಿಗಂಧವಿಲ್ಲ**

**(ಹೆಣ್ಣಾಟ – ಕಲ್ಯಾಣ – ಪುಟ ೧೨೬)**

ಹೀಗೆ ಸಮಾಜದಲ್ಲಿರುವ ಲಿಂಗತಾರತಮ್ಯ, ಕೌಟುಂಬಿಕ ಜೀವನವು ಮಹಿಳೆಗೆ ಆಹ್ಲಾದಕರವಾಗಿಲ್ಲದ ಸ್ಥಿತಿಯನ್ನು ಈ ಕವನದ ಮೂಲಕ ಅರ್ಥ ಮಾಡಿಕೊಳ್ಳಲು ಪ್ರಯಾಸ ಪಡಬೇಕಾಗಿಲ್ಲ. ಆದರೆ ವಾಚಿಸಿದಾಗ ಒಂದು ಬಗೆಯ ಹಿತವಾದ ಭಾವವಂತೂ ಉಂಟಾಗುತ್ತದೆ. ಹೆಣ್ಣುಮಕ್ಕಳನ್ನು ಎಚ್ಚರಿಸುವ ಸಂದರ್ಭದಲ್ಲಿ ಇವರ ಭಾಷೆ ಹೀಗೆ ಮುಂದುವರಿಯುತ್ತದೆ.

**ಗಂಡನೆಂದರೆ ಪ್ರಾಣಗಂಡ–ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ**
**ನೋಡು ಮಂಡೂಕ ಸರ್ಪದ ನೆಳಲಿಗೆ ಹೋದಂತೆ**
**ಬಂಡೀಗೆ ಬಸವನ ಶಿರಬಾಗಿ ಕೊಂಬಂತೆ**

**(ಗಂಡ – ಕಲ್ಯಾಣ – ಪುಟ ೧೧೯)**

ಗಂಡನನ್ನೇ ಪರಮದೈವವೆಂದು ನಂಬಿಕೊಳ್ಳುವ ಮುಗ್ಧ ಹೆಣ್ಣುಗಳು ಅನುಭವಿಸಬೇಕಾಗುವ ಬವಣೆಯನ್ನು ವಿವರಿಸಲು ಈ ಕವಯಿತ್ರಿ ಬಳಸುವ ಉಪಮೆಗಳು ಪರಿಣಾಮದ ತೀವ್ರತೆಯನ್ನು ಹೆಚ್ಚಿಸಿವೆ. ಜಾನಪದ ಸೊಗಡಿನಲ್ಲಿರುವ ಈ ಕವನವನ್ನು ಅರ್ಥ ಮಾಡಿಕೊಳ್ಳುವಾಗಲೂ ವಿಶೇಷ ತಯಾರಿಯ ಅಗತ್ಯವೇನೂ ಕಂಡುಬರುವುದಿಲ್ಲ.

ಲೈಂಗಿಕ ಅನುಭವಗಳ ವರ್ಣನೆಯ ಸಂದರ್ಭದಲ್ಲೂ ಮಹಿಳಾಕವಿಗಳು ಈ ನೆಲೆಗೆ ಸರಿಯುತ್ತಾರೆ. ಇದಕ್ಕೆ ಸುಕನ್ಯಾ ಮಾರುತಿಯವರ ಕವನವೊಂದನ್ನು ಉದಾಹರಣೆಯಾಗಿ ಎತ್ತಿಕೊಳ್ಳಬಹುದು.

**ನಿನ್ನ ಸ್ಪರ್ಶಕೆ ಮನವು। ವರ್ಣ ಪುಲಕಿತವಾಯ್ತು**
**ಸಿಂಹನಾದವು ನನ್ನ ನನವರತ ಮಿಡಿದು**
**ನವರಸ ಕಾವ್ಯ ಹೊಮ್ಮಿಸಿದೆ.**

**(ನನ್ನ ಹೊನ್ನ ಕಳಸ – ನಾನೆಂಬ ಮಾಯೆ – ಪುಟ ೧೫೭)**

ಲೈಂಗಿಕತೆಯೊಂದು ಜೀವಿಸಹಜ ಪ್ರಕ್ರಿಯೆಯಾಗಿದ್ದು, ಅದನ್ನು ಜೀವಸಂಬಂಧಿ ಅನುಭವವಾಗಿ ಲೈಂಗಿಕತೆಯನ್ನು ಸ್ವೀಕರಿಸುವ ಈ ಮನಸ್ಥಿತಿ – ವೈಭವೀಕರಿಸುವ ಮೂಲಕ ಜೀವಿಯಾಗಿ ಕೆಲವು ಅನುಭವಗಳಿಂದ ಪಕ್ವಾಗಬೇಕಾಗುವ ಅನಿವಾರ್ಯವನ್ನೂ, ಅವಶ್ಯಕತೆಯನ್ನೂ ಒತ್ತಿ ಹೇಳಿದಂತೆನಿಸುತ್ತದೆ.

ಆಧುನಿಕ ಮಹಿಳಾಕಾವ್ಯಕ್ಕೆ ಸಂಬಂಧಿಸಿದಂತೆ ಕವನ ಬರೆಯಲು ಪ್ರಾರಂಭಿಸಿದ ಮೊದಲ ಹಂತದಲ್ಲಿ ಹಾಗೆಯೇ ಬಾಲ್ಯದ ನೆನಪುಗಳು, ಅನುಭಗಳನ್ನು ವಿವರಿಸುವಾಗ, ವ್ಯಕ್ತಿಗಳ ಸ್ಮರಣೆಯ ಸಂದರ್ಭದಲ್ಲಿ, ಸಂಬಂಧಗಳ ಮೌಲ್ಯವನ್ನು ವಿವರಿಸುವಾಗ ಈ ಕ್ರಮ ಹೆಚ್ಚಾಗಿ ಬಳಕೆಯಾಗಿದೆ. ವೈದೇಹಿಯವರ ಅಮ್ಮನ ಪದ್ಯಗಳು, ಮಗಳನ್ನು ಕುರಿತು ಬರೆದ ಕವನಗಳು, ಬಹುಪಾಲು ಕವಯಿತ್ರಿಯರಿಂದ ಸ್ಮರಿಸಲ್ಪಟ್ಟಿರುವ ವ್ಯಕ್ತಿಗಳ ವಿವರಣೆಗಳನ್ನು ಇಲ್ಲಿ ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ನಿರಾಯಾಸವಾದ ಗ್ರಹಿಕೆ, ಮನರಂಜನೆಗಾಗಿ ಕಾವ್ಯ ಓದುವ ಅಭ್ಯಾಸವುಳ್ಳವರಿಗೆ ಇಷ್ಟವಾಗುವ ಈ ವಿಧಾನವು ವಿಮರ್ಶೆಯ ಹರಿತಕ್ಕೆ ಹೆಚ್ಚಿನ ಅವಕಾಶ ನೀಡಲಾರದು.

### ೫.೨. ಪ್ರತಿಮೆಗಳ ನೆಲೆ

'ಬದಲಾದ ಸಂವೇದನೆಯು ಬದಲಾದ ಅಭಿವ್ಯಕ್ತಿ ಮಾಧ್ಯಮವನ್ನೇ ಹುಡುಕುತ್ತದೆ'.[೩] ಹಾಗೆಯೇ ಸಾಧಾರಣವಾದದ್ದರ ಮೂಲಕವೇ ಅಸಾಧಾರಣವಾದದ್ದನ್ನು ಧ್ವನಿಸುವುದನ್ನು ಅತ್ಯುತ್ತಮ ಕಾವ್ಯದ ಮಾದರಿ ಎಂದು ಒಪ್ಪಿಕೊಳ್ಳಲಾಗುವುದು. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಜಾಗತಿಕವಾಗಿ ಹಾಗೂ ಸ್ಥಳೀಯವಾಗಿ ಉಂಟಾದ ರಾಜಕೀಯ, ಸಾಮಾಜಿಕ ಸ್ಥಿತ್ಯಂತರಗಳಿಂದಾಗಿ ಕಾವ್ಯ ಕೂಡ ಬದಲಾವಣೆಯ ಪ್ರಭಾವಕ್ಕೊಳಗಾಯಿತು. ಮನರಂಜನೆ, ಭಾವಪ್ರಧಾನತೆ, ಆದರ್ಶವಾದಗಳ ಅನುಸರಣೆ ಮುಂತಾದ ಜನಪ್ರಿಯ ಅಂಶಗಳು ಕ್ಲೀಷೆಯಾಗಿ ಕಾಣಿಸತೊಡಗಿದವು.

ಶಿಕ್ಷಣ ಪಡೆದ ಅನೇಕ ಮಹಿಳೆಯರು ೧೯೭೦ರ ದಶಕದಲ್ಲಿ ಕಾವ್ಯಕೃಷಿಯಲ್ಲಿ ತೊಡಗಿದರು. 'ಸ್ತ್ರೀವಾದ' ಮಹಿಳಾ ಸಂವೇದನೆಗಳನ್ನು ತೀವ್ರಗೊಳಿಸಿದರೆ, ನವ್ಯಸಾಹಿತ್ಯದ ಪ್ರಭಾವ ಕಾವ್ಯರೂಪದಲ್ಲಿ ಬದಲಾವಣೆಗೆ ಕಾರಣವಾಯಿತು. ವಾಚ್ಯವಾಗಿರುವುದನ್ನು ಸೂಚ್ಯಗೊಳಿಸುವತ್ತ ಆದ್ಯತೆ ನೀಡಲಾಯಿತು. ಪದ್ಯದ ಸ್ವರೂಪದಲ್ಲೂ ಸಾಕಷ್ಟು ಬದಲಾವಣೆ ಉಂಟಾಯಿತು. ಇಂತಹ ಪ್ರಧಾನ ಬದಲಾವಣೆಯಲ್ಲಿ ಕಾವ್ಯದ ಗೇಯರೂಪ ದೂರವಾಗಿ, ಗದ್ಯರೂಪ ಅಥವಾ ಗದ್ಯರೂಪೀ ಪದ್ಯಗಳು ರಚನೆಯಾದವು. ಹಾಗೆಯೇ ಪದ್ಯದ ಒಳಮೈ ಮತ್ತು ಹೊರಮೈಗಳು ಬೇರೆಯಾಗಿಯೇ ಕಾಣಿಸುತ್ತಾ, ಹೊರನೋಟದ ಅರ್ಥ ಒಳನೋಟದ ಅರ್ಥಕ್ಕಿಂತ ಭಿನ್ನವಾಗುವ ಸಾಧ್ಯತೆ ಕಾಣಿಸಿಕೊಳ್ಳತೊಡಗಿತು. ಕವಿತೆ ಓದಿ ಮನರಂಜನೆಗೊಂಡು ಎತ್ತಿಡುವ ಮಾಧ್ಯಮವಾಗದೆ, ಧ್ಯಾನಿಸಿ ಗ್ರಹಿಸಿಕೊಳ್ಳಬೇಕಾದ, ಚಿಂತಿಸಿದಷ್ಟೂ ಅರ್ಥ ವಿಸ್ತಾರವನ್ನು ಪಡೆದುಕೊಳ್ಳುವ ಸಾಮರ್ಥ್ಯ ಪಡೆಯಿತು.

'ಪ್ರತಿಮೆ' ಎಂಬ ಪರಿಭಾಷೆಯನ್ನು ವಿವರಿಸುವಾಗ 'ವಿಮರ್ಶೆಯ ಪರಿಭಾಷೆ'ಯಲ್ಲಿ ನೀಡಲಾಗಿರುವ ವಿವರಣೆಯನ್ನು ಗಮನಿಸಬಹುದಾಗಿದೆ :

* ಕಣ್ಣಿಗೆ ಕಟ್ಟುವಂತಿರುವ ಶಬ್ದಚಿತ್ರಗಳು, ವಸ್ತು, ಕ್ರಿಯೆ ಮತ್ತು ಅಮೂರ್ತ ಆಲೋಚನೆ, ಭಾವನೆಗಳನ್ನು, ವಿವರಣಾತ್ಮಕವಾಗಿ, ಮೂರ್ತವಾಗಿ ಭಾಷೆಯಲ್ಲಿ ವಿವರಿಸುವುದು.[೪]

* "ಇಂದ್ರಿಯಗಳ ಗ್ರಹಿಕೆಯನ್ನು ಅಭಿವ್ಯಕ್ತಿಸುವ ಯಾವುದೇ ಪದ ಅಥವಾ ಪದಗಳ ಸಮೂಹ".[೫]

* "ಅನೇಕ ಪ್ರತಿಮಗಳ ಸಂಯೋಜನೆಯಿಂದ ರೂಪ ತಳೆಯುವ ಕವನ ತಾನೇ ಒಂದು ಪ್ರತಿಮೆಯಾಗುತ್ತದೆ."[೬]

* "ಕವನದ ನುಡಿಗಟ್ಟಿನಲ್ಲಿ ಹಲವಾರು ಪದಗಳು ಬೆಸೆದುಕೊಂಡಿರುತ್ತವೆ. ಸಂಬಂಧ ಸ್ಥಾಪಿಸಿಕೊಂಡಿರುತ್ತವೆ. ನುಡಿಗಟ್ಟೊಂದರಲ್ಲಿ ಬರುವ ಎಲ್ಲ ಪದಗಳು ಅಥವಾ ಕೆಲವು ಪದಗಳು ಅಥವಾ ಯಾವುದಾದರೊಂದು ಪದ ಮಾತ್ರ ಪ್ರತಿಮೆಯಾಗಿರಬಹುದು."[೭]

ಅಮೂರ್ತವಾದದ್ದನ್ನು ಮೂರ್ತಗೊಳಿಸುವಷ್ಟರಮಟ್ಟಿಗೆ ಪ್ರತಿಮೆಗಳು ಕಾವ್ಯಕ್ಕೆ ಅನಿವಾರ್ಯ. ದಿನಬಳಕೆಯ ಭಾಷೆಯ ಮಿತಿಗಳನ್ನು ಮೀರಲು ಅವು ಸಹಾಯಕಗಳೂ ಆಗುತ್ತವೆ. ಪ್ರತಿಮೆಗಳು ಬದುಕಿನ ನೇರ ಪ್ರತಿಫಲನಗಳಾಗಿದ್ದರಿಂದ ಕವಿಯು ಬದುಕಿನಿಂದ ಆಯ್ದ ಸಂಗತಿಗಳನ್ನು ಕಾವ್ಯದ ಚೌಕಟ್ಟಿನಲ್ಲಿ ಸಾಮಾನ್ಯೀಕರಣಗೊಳಿಸಿ ಅವುಗಳ ಸತ್ಯವನ್ನು ತೆರೆದಿಡುವಂಥವೂ ಆಗುತ್ತವೆ.[೮]

ಹೀಗೆ 'ಪ್ರತಿಮೆ' ಎಂಬ ಪರಿಭಾಷೆ ವ್ಯಾಪಕ ಅರ್ಥಸಾಧ್ಯತೆಗಳನ್ನು ಹೊಂದಿದ್ದು, ವಿಮರ್ಶೆಯಲ್ಲಿ ಅತಿ ಅನಿವಾರ್ಯ ಅಂಶವಾಗಿ ಪರಿಗಣಿಸಲ್ಪಟ್ಟಿದೆ. ಪ್ರಸ್ತುತ ಅಧ್ಯಯನದ ಮಿತಿಯಲ್ಲಿ ಮಹಿಳಾಕಾವ್ಯದಲ್ಲಿ ಅಡಗಿರುವ ಪ್ರತಿಮೆಗಳೆಲ್ಲವನ್ನೂ ಆಳವಾದ ವಿಶ್ಲೇಷಣೆಗೆ ಒಳಪಡಿಸಲಾಗುತ್ತಿಲ್ಲ.

ಕಾವ್ಯದಲ್ಲಿ ಎದ್ದುಕಾಣುವ, ಹೆಚ್ಚು ಬಳಕೆಯಾಗಿರುವ ಪ್ರತಿಮೆಗಳನ್ನು ಮಾತ್ರ ಆಯ್ದುಕೊಳ್ಳಲಾಗಿದೆ. ಆಧುನಿಕ ಮಹಿಳಾಕಾವ್ಯದಲ್ಲಿ ಬಳಕೆಯಾಗಿರುವ ಪ್ರತಿಮೆಗಳನ್ನು ಅಧ್ಯಯನದ ಅನುಕೂಲಕ್ಕಾಗಿ ನಾಲ್ಕು ಬಗೆಗಳಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ. ಅವುಗಳೆಂದರೆ,

ಅ. ಪ್ರಕೃತಿಸಂಬಂಧಿತ ಪ್ರತಿಮೆಗಳು

ಆ. ಪುರಾಣಸಂಬಂಧಿತ ಪ್ರತಿಮೆಗಳು

ಇ. ಅಡುಗೆಮನೆ ಮತ್ತು ಕುಟುಂಬಸಂಬಂಧಿತ ಪ್ರತಿಮೆಗಳು

ಈ. ಅಮೂರ್ತ ಪ್ರತಿಮೆಗಳು

**ಅ.** ಆಧುನಿಕ ಮಹಿಳಾಕಾವ್ಯದಲ್ಲಿ ಪ್ರಕೃತಿ ಸಂಬಂಧಿತ ಸಂಗತಿಗಳಾದ ಸೂರ್ಯ, ಚಂದ್ರ, ನಕ್ಷತ್ರ, ಹೂವು, ಬೆಳಕು, ನೆರಳು, ಕತ್ತಲು... ಹೀಗೆ ಪ್ರತಿಮೆಯಾಗದ ವಸ್ತುವೇ ಇಲ್ಲ ಎನ್ನುವಷ್ಟು ವ್ಯಾಪಕವಾಗಿ ಬಳಕೆಯಾಗಿವೆ. ಕೆಲವು ಧನಾತ್ಮಕ ಭಾವಗಳನ್ನು ಹೇಳಲು ಬಳಕೆಯಾಗಿದ್ದರೆ ಇನ್ನು ಕೆಲವು ನೇತ್ಯಾತ್ಮಕ ಭಾವವನ್ನು ಪ್ರತಿನಿಧಿಸುತ್ತವೆ.

**ಕ್ಷಣಮಾತ್ರ ಹೊಳೆದ । ಬೆಳದಿಂಗಳು**
**ನರನಾಡಿಗಳಲ್ಲಿ । ಮಿಂಚಾಗಿ ಸಂಚರಿಸಿದಾಗ**
**ಹೌಹಾರಿದ ಎದೆ ಬಡಿತವನ್ನು**
**ಕಂಗೆಡಿಸಿ । ಕರೆಂಟು ಹೋದಾಗ**
**ಕಣ್ಣುಕಾಣದೆ । ತಡಕಾಡುವಂತಾಗುತ್ತದೆ**

**('ಬೆಳದಿಂಗಳು' ನಾನೆಂಬ ಮಾಯೆ – ಸುಕನ್ಯಾ ಮಾರುತಿ – ಪುಟ ೧೨೫)**

ಇಲ್ಲಿ 'ಬೆಳದಿಂಗಳು' ಕವಿಮನಸ್ಸಿನ ಪುಲಕಕ್ಕೆ ಸ್ಪಂದಿಸಿದೆ. ಬೆಳದಿಂಗಳು ಹಗಲಿನಂತಲ್ಲ. ಅದು ಸಿಗುವುದೇ ಅಪರೂಪ. ಕಾರಣ ಭೂಮಿಯ ದೈನಂದಿನ ಚಲನೆ ಹಾಗೆಯೇ ಮೋಡಗಳ ಓಡಾಟ, ಹೆಣ್ಣು ಮನಸ್ಸಿನ ಪುಲಕ ಕೂಡಾ ಬೆಳದಿಂಗಳಿನಷ್ಟೇ ಆಯಸ್ಸನ್ನು ಹೊಂದಿರುವುದು. ಇಲ್ಲಿ ಆಹ್ಲಾದ ಮತ್ತು ಕ್ಷಣಿಕತೆ, ಕಳೆದುಹೋಗುವುದೆಂಬ ಆತಂಕ ಒಟ್ಟೊಟ್ಟಿಗೆ ಉಂಟಾಗಿದೆ.

ಹೆಣ್ಣಿನ ಮೇಲಾಗುವ ಸಾಮಾಜಿಕ ಪ್ರಹಾರವನ್ನು ವಿವರಿಸುವಾಗ ಮೀನಾಸದಾಶಿವ ಬೋನ್ಸಾಯ್ ಗಿಡದ ಪ್ರತಿಮೆಯನ್ನು ಬಳಸುವುದು ಹೀಗೆ,

**ಚಿಗುರುವ ನಿನ್ನ ಕುಡಿಗಳ ಚಿವುಟಿದರೂ । ನಳನಳಿಸುವಿ**
**ನೆಲದಾಳದಲ್ಲಿ ಹರಡಲೆತ್ನಿಸುವ ಬೇರುಗಳ**
**ಕತ್ತರಿಸಿದಾಗ ನೀ ತತ್ತರಿಸಿದರೂ**
**ಉತ್ತರಿಸಲಾಗದ ಪ್ರಶ್ನೆಗೆ। ತಲೆಬಾಗುವಿ**

**(ಬೋನ್ಸಾಯ್ – ಕೋಗಿಲೆಗೆ ಕಲಿಸಲಾರೆ – ಪುಟ ೪೦)**

ಇಲ್ಲಿ ಬೋನ್ಸಾಯ್ ಗಿಡವನ್ನು ಎಷ್ಟು ಬಾರಿ ಕತ್ತರಿಸಿದರೂ ಮತ್ತೆ ಮತ್ತೆ ಚಿಗುರಿ ತನ್ನ ಅಸ್ತಿತ್ವ ಅಂತಃಸ್ಸತ್ವವನ್ನು ಸಾರುತ್ತದೆ. ಹಾಗೆಯೇ ಹೆಣ್ಣನ್ನು ಸಮಾಜ ಯಾವೆಲ್ಲ ಸಂಕೋಲೆಗಳಿಂದ ಬಂಧಿಸಿದರೂ ಆಕೆಯ ಪೊರೆಯುವ, ಕ್ಷಮಿಸುವ, ಚೇತೋಹಾರಿಯಾಗಿರುವ ಗುಣವನ್ನು ನಿಯಂತ್ರಿಸಲಾಗದು ಎಂಬ ಭಾವ ವ್ಯಕ್ತವಾಗಿದೆ.

'ಬೆಳಗು' ಕನ್ನಡ ಕವಿಗಳಲ್ಲಿ ತನ್ನೆಲ್ಲ ವಿಭಿನ್ನ ಅರ್ಥಸಾಧ್ಯತೆಗಳೊಂದಿಗೆ ಬಳಕೆಯಾಗಿದೆ. ಮಹಿಳಾಕಾವ್ಯ ಕೂಡ ಬೆಳಗು, ಬೆಳಕನ್ನು ಸಾಕಷ್ಟು ಬಳಸಿಕೊಂಡಿದೆ. ಸವಿತಾ ನಾಗಭೂಷಣ ಬೆಳಗಿನ ಪ್ರಕ್ರಿಯೆಯನ್ನು ಬದುಕು ತೆರೆದುಕೊಳ್ಳುವ ಕ್ರಿಯೆಯಾಗಿ ನೋಡುವುದು ಹೀಗೆ:

**ಮತ್ತೆ ಬೆಳಗಾಗಿದೆ । ಬೆಳಕಿನ ಸಮುದ್ರದಲ್ಲಿ**
**ಜಗತ್ತು ಮುಖ । ತೊಳೆಯುತ್ತಿದೆ**
**ಸೂರ್ಯ ಮೈಮುರಿಯುತ್ತಿದ್ದಾನೆ.**

**(ಮತ್ತೆ ಬೆಳಗಾಗಿದೆ – ಆಕಾಶಮಲ್ಲಿಗೆ – ಪುಟ ೫೯)**

ಇಲ್ಲಿ ಬೆಳಗು ಮನುಷ್ಯನಿಗೆ ಮಾತ್ರವಲ್ಲದೆ ಪ್ರಕೃತಿಯೇ ಎಚ್ಚರಗೊಳ್ಳುವ ಪ್ರಕ್ರಿಯೆಯಾಗಿ ಗೋಚರಿಸುತ್ತಿದೆ. ಬದುಕಿನಲ್ಲಿ ಯಾವ್ಯಾವಾಗ ಕತ್ತಲು ಆವರಿಸುತ್ತದೆ ಆಗೆಲ್ಲ ಮೈಕೊಡವಿಕೊಂಡು ಬೆಳಗನ್ನು ಕಂಡುಕೊಳ್ಳಬೇಕಾಗುತ್ತದೆ ಎಂಬ ಸೂಚ್ಯಾರ್ಥ ಕೂಡ ಗೋಚರಿಸುತ್ತದೆ. ಹೊರನೋಟಕ್ಕೆ ಹಿತವೆಂದು ಕಾಣಿಸಿಕೊಂಡು ಅಂತರ್ಯದಲ್ಲಿ ಕೆಡಕನ್ನು ತುಂಬಿಕೊಂಡಿರುವ ಆಷಾಢಭೂತಿತನವನ್ನು ಹೋಗಲಾಡಿಸಲೂ ಕೂಡ ಬೆಳಕಿನ ಜ್ವಾಲೆಯನ್ನು ಆಹ್ವಾನಿಸಲಾಗಿದೆ. ಇದಕ್ಕೆ ರೂಪ ಹಾಸನ ಅವರ ಪದ್ಯವನ್ನು ತೆಗೆದುಕೊಳ್ಳಬಹುದು.

**ಯಾರಿಗೆ ಬೇಕು ಷಂಡ**
**ಬೂದಿ ಮುಚ್ಚಿದ ಕೆಂಡ**
**ಬೇಕೀಗ ಪ್ರಜ್ವಲಿಸುತ**
**ಬೆಳಗುವಾ ಜ್ವಾಲೆ ಬೆಳಕು ಬೇಕು – ಒಂದಿಷ್ಟು ಹಸಿಮಣ್ಣು**

**(ಒಂದಿಷ್ಟು ಹಸಿಮಣ್ಣು – ಪುಟ ೭೩)**

ಬಹುಪಾಲು ಸಂದರ್ಭದಲ್ಲಿ ಬೆಳಕು ಆಹ್ವಾನ. ಜ್ಞಾನದ, ಹೊಸತನದ ಪ್ರತೀಕ. ಜ್ಞಾನದೆದುರು ಅಜ್ಞಾನ, ಬೆಳಕಿನೆದುರು ಕತ್ತಲೆ ತಲೆಬಾಗಬೇಕು. ಆಗ ಎಲ್ಲ ಕ್ರಿಯೆಗಳೂ ಸರಾಗವಾಗಿ ನಡೆಯಬಲ್ಲವು ಎಂಬ ಆಶಯವನ್ನು ಜ.ನಾ. ತೇಜಶ್ರೀ ಅವರು ಬಳಸುವ ಈ ಪ್ರತಿಮಾ ಸನ್ನಿವೇಶ ಬಿತ್ತರಿಸುತ್ತದೆ.

**"ಬಾ ಗೆಳೆಯ, । ನೀನಿಲ್ಲದಿದ್ದರೆ ನನಗೆ**
**ವಿಶ್ರಾಂತಿಯೇ ಇಲ್ಲ" ಎಂದು**
**ಬೆಳಕಿನೆದುರು ಕತ್ತಲೆ ಮಂಡಿಯೂರಿ**
**ಪ್ರತಿ ಗಳಿಗೆ ಪಿಸುಗುಡುವ ದನಿ**

**ನಮ್ಮೆದೆಗೆ ಕೇಳುವ ದಿನ**
**ಪ್ರಶ್ನೆಗಳು ಪ್ರಶ್ನೆಗಳಾಗುವುದಿಲ್ಲ.**
**ಹುಡುಕಾಟದಾರಿ ತಪ್ಪುವುದಿಲ್ಲ.**
**(ಕಣ್ಣಾಮುಚ್ಚೆ ಕಾಡಿಗೆಗೂಡೆ.... ಉಸ್ರುಬಂಡೆ – ಪುಟ ೩೭)**

ಅಜ್ಞಾನ, ಅನ್ಯಾಯಗಳೇ ವಿಜೃಂಭಿಸುವಾಗ ಉತ್ತರವಿಲ್ಲದ ನೂರಾರು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಮನಸ್ಸಿನ ಅಶಾಂತಿ ಹೆಚ್ಚುತ್ತದೆ. ಅಜ್ಞಾನ, ಅನ್ಯಾಯಗಳೆದುರು ವಿಜೃಂಭಿಸುವ ಶಕ್ತಿಯಾಗಿ ಬೆಳಕನ್ನು ಆಹ್ವಾನಿಸಲಾಗಿದೆ. ಹೀಗೆ ಮುಖಾಮುಖಿಯಾಗುವ ಜೋಡಿ ಪ್ರತಿಮೆಗಳಲ್ಲಿ ಸಮುದ್ರ–ನದಿಗಳೂ ಇವೆ. ಗಂಡುಹೆಣ್ಣುಗಳ ಪಾರಮ್ಯವನ್ನು ಗುರುತಿಸುವ ಮಾನಕಗಳಾಗಿ ಡಾ.ಎಸ್.ವಿ. ಪ್ರಭಾವತಿಯವರು ಇವನ್ನು ಬಳಸಿಕೊಂಡಿದ್ದಾರೆ.

**ಸಿಹಿನದಿಗೆ ಉಪ್ಪು ತೆರೆದ ಎದೆ**
**ಉಪ್ಪಿನ ಕಡಲಿಗೆ ಸಿಹಿ ನುಂಗುವ ಬೆದೆ**
**ಕೊನೆಗೆ ಉಳಿದದ್ದು ಉಪ್ಪೇ ಉಪ್ಪು**
**(ಸಮುದ್ರನದಿ – ಉಳಿದದ್ದು ಆಕಾಶ – ಪುಟ ೨೬)**

ಇದೇ ಅರ್ಥದಲ್ಲಿ ಸೂರ್ಯ–ಭೂಮಿಯರನ್ನೂ ಕೂಡ ಈ ಕವಿ ಬಳಸಿಕೊಳ್ಳುತ್ತಾರೆ. ಇಲ್ಲಿ ಸಮುದ್ರ–ಸೂರ್ಯರು ಗಂಡಿನ ಆಕ್ರಮಣಕಾರಿ ಸ್ವಭಾವವನ್ನೂ, ಸಮಸ್ತ ಚಟುವಟಿಕೆಗಳ ಮೇಲೆ ಪಾರಮ್ಯವನ್ನು ಸಾಧಿಸುವ ಪುರುಷ ಅಹಂಕಾರವನ್ನು ಪ್ರತಿಮಿಸುತ್ತಿವೆ. ಈ ಅಹಂಕಾರವನ್ನು ಧಿಕ್ಕರಿಸಲು ಮಹಿಳೆಗಿರುವ ಸಿದ್ಧಸೂತ್ರವೆಂದರೆ ತನ್ನ ಮನಸ್ಸನ್ನು ಹಕ್ಕಿಯಂತೆ ಮುಕ್ತವಾಗಿಟ್ಟುಕೊಳ್ಳುವುದು. ಹಾಗಾಗಿ 'ಹಕ್ಕಿ' ಮಹಿಳಾಕಾವ್ಯದಲ್ಲಿ ಮನಸ್ಸಿನ ಸ್ವಾತಂತ್ರ್ಯವನ್ನು ಪ್ರತಿನಿಧಿಸುತ್ತದೆ.

**ಏಕಾಂತ ಒಂದು ಹಕ್ಕಿ!**
**ಹಕ್ಕಿಯೆಂದರೆ ಹಕ್ಕಿಯಲ್ಲ, ಹಕ್ಕಿಯ ಏಕಾಗ್ರತೆ**
**ಅಂತನ್ನಬಹುದೇನೋ...**
**(ಕಾಯಬೇಕು – ಝಳಕ್ಕೆ ಮುಖ ಬೆಳಗುತ್ತದೆ – ಸಂಧ್ಯಾದೇವಿ – ಪುಟ ೨೭)**

ಆದರೆ ಎಲ್ಲ ಸಂದರ್ಭದಲ್ಲೂ ಅಂದುಕೊಂಡಷ್ಟು ಸ್ವತಂತ್ರತೆ ಅದಕ್ಕೆ ಲಭ್ಯವಾಗುವುದಿಲ್ಲ. ಅದು ಕಳೆದುಹೋದ ಹಾಡನ್ನು ಹುಡುಕಿ ಪರದಾಡಬೇಕಾದ ಉಸಿರುಕಟ್ಟುವ ವಾತಾವರಣ ಕೂಡ ಇಲ್ಲಿದೆ. ಇಲ್ಲಿ ಹಕ್ಕಿ ಹಾಡನರಸುವ ಹೋರಾಟವನ್ನು ಡಾ. ವಿನಯಾ ಅವರು,

**ಹಾಡೇ ಹಾಡೇ, ನನ್ನ ಹಾಡೇ। ಎಲ್ಲಿ, ಎಲ್ಲಿ, ಹೋದೆಯೇ?**
**ಸುರಿದ ಕಂಬನಿ ಲೆಕ್ಕ ಇಡಲು ಬಾ ಹಾಡೇ**
**ಸರಿದ ಕಾಲದ ಬದುಕ ಕೊಡಲು ಬಾ ಹಾಡೇ**
**ಹಕ್ಕಿ ನಡಿಗೆಯ ಒನಪ ನೋಡ ಬಾ ಹಾಡೇ**
**ಹಕ್ಕಿ ಕತ್ತಿನ ಕೊಂಕ ಚಿತ್ತಾರ ತಾ ಹಾಡೇ**
**('ಬಾಯಾರಿಕೆ' – ಪುಟ ೪೫)**

ತಾವು ಕಳಕೊಂಡದ್ದನ್ನು ಹುಡುಕುವ ಆರ್ತತೆ, ತನ್ನ ಅಸ್ತಿತ್ವವನ್ನು ಪುನರ್‌ಸ್ಥಾಪಿಸಿಕೊಳ್ಳುವ ತಹತಹಿಕೆಗಳು ಈ ಕವಿಯ ಬಾಯಾರಿಕೆಯನ್ನು ಹೆಚ್ಚಿಸಿವೆ. ಇಲ್ಲಿ ಬಾಯಾರಿಕೆ ಎಂಬುದೇ ಒಂದು ಅಮೂರ್ತ ಪ್ರತಿಮೆಯಾಗಿ ಕಾಣುತ್ತದೆ. ವೈಯಕ್ತಿಕವಾದ ಈ ಹುಡುಕಾಟ ಸಾಮೂಹಿಕವೂ ಆಗುತ್ತಾ ವಿಸ್ತರಿಸಿಕೊಳ್ಳುತ್ತದೆ. ದು. ಸರಸ್ವತಿಯವರ 'ತಬ್ಬಲಿಗಳ ಜೋಗುಳ' ಕವಿತೆಯಲ್ಲಿ ಹೆಣ್ಣು ನವಿಲು, ಗಂಡುನವಿಲಿನ ನಿರ್ಲಕ್ಷ್ಯವನ್ನು ಧಿಕ್ಕರಿಸುತ್ತದೆ. "ತಾನು ಗಂಡನ ಹೆಂಡತಿಯಲ್ಲ, ಪ್ರಿಯನ ಪ್ರೇಯಸಿಯಲ್ಲ, ಬಸಿರಿನ ತಾಯಲ್ಲ, ತಬ್ಬಲಿಗಳ ಜೋಗುಳ" ಎಂದು ಘೋಷಿಸುತ್ತದೆ. ಇದರ ನಿರ್ಗಮನ ಮಾತ್ರದಿಂದಾಗಿ ಗಂಡುನವಿಲು ಎಚ್ಚೆತ್ತುಕೊಳ್ಳುತ್ತದೆ. ಸಾಂಪ್ರದಾಯಿಕವಾಗಿ ಹೆಣ್ಣಿಗೆ ನೀಡಲಾದ ಪಾತ್ರಗಳ ನಿರಾಕರಣೆಯ ಮೂಲಕವೇ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಕಂಪನ ಉಂಟುಮಾಡುವ ಸಾಧ್ಯತೆಯಿರುವುದನ್ನು ಈ ಕವಿತೆ ಸೂಚಿಸುತ್ತದೆ. ಡಾ. ಎಚ್.ಎಲ್. ಪುಷ್ಪ ಅವರಲ್ಲಿ 'ನವಿಲು' ಅಧ್ಯಾತ್ಮದ ಹುಡುಕಾಟಕ್ಕೆ ಗರಿಗೆದರಿದ ಭಾವನೆಯಾಗಿ ಕಾಣಿಸಿಕೊಳ್ಳುತ್ತದೆ:

**ಎದೆಯೊಳಗೆ ಕುಣಿವ ಆ ನವಿಲನ್ನು**
**ಹಿಡಿದಿಡಲಾಗುವುದಿಲ್ಲ ಬಹಳ ಹೊತ್ತು**
**ನನ್ನೆದೆಯ ಗುಟುಕ ಬಯಸಿ**
**ಪ್ರಶ್ನಿಸುತ್ತದೆ ಆ ಹಕ್ಕಿ ಆರ್ದ್ರತೆಯಿಂದ**
**"ಮತ್ತೇನು, ಏನಾದರೂ ಹೇಳು"**

**..................................................**

**ನನ್ನದೇನಿಲ್ಲ. ನೀನೆ ಹೇಳಬೇಕು ಎಲ್ಲಾ".**

**(ಕುಣಿವ ನವಿಲುಗಳು – ಲೋಹದಕಣ್ಣು – ಡಾ. ಎಚ್.ಎಲ್. ಪುಷ್ಪ – ಪುಟ ೫೫)**

ಮನುಷ್ಯನೊಳಗೆ ಅನಾದಿಯಿಂದ ಬೆಳೆದುಬಂದ ವಾಂಛೆಗಳಲ್ಲಿ ಅಮೂರ್ತವಾದುದನ್ನು ಅರಗಿಸಿಕೊಳ್ಳುವ ಪ್ರಯತ್ನವೂ ಒಂದಾಗಿದೆ. ಅದು ಸದಾ ಅಲೌಕಿಕವಾದದ್ದರ ಕಡೆ ತುಡಿಯುತ್ತಿರುತ್ತದೆ. ಮನುಷ್ಯನ ತರ್ಕಕ್ಕೆ ಸಿಗದ ಈ ಹಸಿವು ಸ್ಥಾಯಿಯಾಗಿರುವುದರಿಂದಲೇ ಋಷಿಮುನಿಗಳಿಂದ ಹಿಡಿದು, ಅಲ್ಲಮನನ್ನು ಒಳಗೊಂಡು ಪುಷ್ಪಾರವರೆಗೆ ನಿರಂತರವಾದ ತಹತಹಿಕೆಯನ್ನುಂಟು ಮಾಡುತ್ತಿದೆ.

ಈ ಎಲ್ಲಾ ಪ್ರಾಕೃತಿಕ ಸಂಗತಿಗಳು ಹೆಣ್ಣಿನ ಅಂತರಂಗವನ್ನು ಕಾಪಿಡುವ ಪ್ರಯತ್ನಗಳಾಗಿ ಭಾಗ್ಯ ಜಯಸುದರ್ಶನ ಅವರಿಗೆ ಕಾಣಿಸುತ್ತಿವೆ:

**ಅಲ್ಲಿ ಜಲ ಇಲ್ಲಿ ನೆಲ । ಇಲ್ಲಿ ಝರಿ ಅಲ್ಲಿ ತೊರೆ**
**ಪರ್ವತಕಾನನ ಕಣಿವೆ । ಬಿಸಿಲು ಬೆಳದಿಂಗಳು**
**ಅಂತರಂಗವನ್ನು ಬಚ್ಚಿಡಲು**
**ಎಂತಹ ನಗುಮೊಗದ ಸಾಹಸ!**

**(ಭೂಮಿ ಪದ್ಯಗಳು – ಭಾವ ಸಿಂಚನ – ಪುಟ ೩೯)**

ಭೂಮಿಯ ವಿವಿಧ ವಿದ್ಯಮಾನಗಳನ್ನು ಕವನ ಸೂಚಿಸುತ್ತಿದ್ದರೂ ಈ ಎಲ್ಲ ಪ್ರಕ್ರಿಯೆಗಳು ಹೆಣ್ಣಿನ ಮನಸ್ಸಿನ ವಿವಿಧ ಭಾವಗಳನ್ನೇ ತೋರ್ಪಡಿಸುತ್ತಿವೆ. ತನ್ನೆಲ್ಲ ಬೇಕು-ಬೇಡ, ಬವಣೆ, ದುಮ್ಮಾನಗಳನ್ನು ಹತ್ತಿಕ್ಕಿ ಎಲ್ಲವೂ ಸರಿಯಾಗಿಯೇ ಇದೆ. ಸಿಹಿಯಾಗಿಯೇ ಇದೆ ಎಂದು ತೋರಿಸಿಕೊಳ್ಳುವುದು ಭೂಮಿಯಂತೆಯೇ ಹೆಣ್ಣಿನ ಸಹಜಗುಣ ಎಂಬುದನ್ನೂ ಕವಿತೆ ದೃಢಪಡಿಸುತ್ತಿದೆ.

ಹೊಳೆ, ನದಿ, ಮರ, ಬೆಟ್ಟಗಳು ಕೂಡ ಹೆಣ್ಣಿನ ವ್ಯಕ್ತಿತ್ವವನ್ನು ಪ್ರತಿಮಿಸುತ್ತವೆ. ಪ್ರತಿಭಾ ನಂದಕುಮಾರ್ ಕವನಗಳಲ್ಲಿ ಪದೇ ಪದೇ ಬಳಕೆಯಾಗುವ ಮೀನು, ಕಪ್ಪೆ, ಕವಡೆಯಾಟ, ಹಾವು... ಮುಂತಾದ ಪ್ರಕೃತಿ ಸಂಬಂಧಿತ ಪ್ರತಿಮೆಗಳು ಲೈಂಗಿಕ ಚಟುವಟಿಕೆಯನ್ನು ಪ್ರತಿಮಿಸುವ ಸಂಗತಿಗಳಾಗಿವೆ ಎನ್ನುವುದು ಎಚ್‌ಎಸ್‌ಆರ್ ಅವರ ಅನಿಸಿಕೆಯಾಗಿದೆ. 'ಕಾಳ್ಗಿಚ್ಚು' ದಲಿತರ ಹೋರಾಟದ ದನಿಯಾಗಿ ಸುಕನ್ಯಾರ ಕಾವ್ಯದಲ್ಲಿ ಬಳಕೆಯಾಗಿದೆ. ತೆರೆದ ಕಡೆಯೆಲ್ಲಾ ಬಾಗಿಲುಗಳಿರುವ, ಯಾವ ಕ್ಷಣದಲ್ಲಾದರೂ ತನ್ನನ್ನು ತಾನು ಮುಕ್ತಗೊಳಿಸಿಕೊಳ್ಳಬಲ್ಲ ಶಕ್ತಿ 'ಕಡಲು'. ಇದು ರೂಪ ಅವರ ಕವನಗಳಲ್ಲಿ ಹೆಣ್ಣಿನ ವ್ಯಕ್ತಿತ್ವದ ಅಗಾಧತೆಯನ್ನು ಹೇಳಲು ಬಳಕೆಯಾದ ಪ್ರತಿಮೆ.

**ಆ.** ಪುರಾಣಸಂಬಂಧಿತ ಪ್ರತಿಮೆಗಳ ಕುರಿತು ಬರೆಯುವಾಗ ಇವು ಪುರುಷಪ್ರಧಾನ ಸಮಾಜದ ಆಶಯಗಳನ್ನು ಧಿಕ್ಕರಿಸುವಾಗ ಮಹಿಳಾಕಾವ್ಯಕ್ಕೆ ಒದಗಿಬಂದ ಅದ್ಭುತ ಅವಕಾಶಗಳಾಗಿವೆ. ಎರಡು ಬಗೆಯಲ್ಲಿ ಈ ಪ್ರತಿಮೆಗಳು ವ್ಯಾಪಕವಾಗಿ ಬಳಕೆಯಾಗಿವೆ. ಅಧ್ಯಾಯ-೪ರಲ್ಲಿ ಈಗಾಗಲೇ ಚರ್ಚಿಸಿರುವಂತೆ ಪಾರಂಪರಿಕ ಮೌಲ್ಯಗಳನ್ನು ಧಿಕ್ಕರಿಸುವಾಗ ಬಳಕೆಯಾದ ಪ್ರತಿಮೆಗಳು ಒಂದು ಗುಂಪಿನಲ್ಲಿದ್ದರೆ, ಯಾವುದು ವರ್ಜ್ಯವೆಂದು ತಿರಸ್ಕರಿಸಲಾಗಿತ್ತೋ ಅಂತಹ ಪಾತ್ರಗಳ ಮೌಲ್ಯವನ್ನು, ಹೆಚ್ಚಿಸುವ ಅಥವಾ ನೇತ್ಯಾತ್ಮಕವೆಂದು ಪರಿಗಣಿಸಲ್ಪಟ್ಟಿದ್ದ ಪಾತ್ರಗಳನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡುವ ಪ್ರಯತ್ನ ಎರಡನೆ ಬಗೆಯಲ್ಲಿದೆ.

ಪರಂಪರೆಯ ಆದರ್ಶಗಳೆಂದು ಪೂಜಿಸಲ್ಪಡುವ ಸೀತೆ, ಕುಂತಿ, ಗಾಂಧಾರಿ, ದ್ರೌಪದಿ, ಊರ್ಮಿಳೆ, ಮಂಡೋದರಿ, ತಾರಾ.... ಹೀಗೆ ಅನೇಕ ಪಾತ್ರಗಳು ಮಹಿಳಾಕಾವ್ಯ ಕುಲುಮೆಯಲ್ಲಿ ಉಜ್ಜಲ್ಪಟ್ಟಿವೆ. ಪಿತೃಪ್ರಧಾನ ಸಂಸ್ಕೃತಿ ಹೆಣ್ಣಿನ ಮೇಲೆ ತನ್ನ ಯಜಮಾನಿಕೆಯನ್ನು ಸ್ಥಾಪಿಸಲು ಪೂರಕವಾದ ಪಾತ್ರಗಳಿವು. ಹಾಗೆಯೇ ಶಿವ, ಕೃಷ್ಣ, ರಾಮ, ವಿಷ್ಣು, ಬುದ್ಧ, ಬಸವ...ರು ಸಹ ತಮ್ಮ ಸಾಧನೆಯ ಹಾದಿಯಲ್ಲಿ ಮಹಿಳೆಯ ವ್ಯಕ್ತಿತ್ವಕ್ಕೆ ಆದ್ಯತೆ ನೀಡದ ಪಾತ್ರಗಳೇ ಆಗಿ ಅವುಗಳ ಆದರ್ಶಪ್ರಾಯತೆಯಲ್ಲಿರುವ ಪೊಳ್ಳುತನವನ್ನು ಮಹಿಳಾಕಾವ್ಯ ಘಂಟಾಘೋಷಗೊಳಿಸಿದೆ. ಅವುಗಳತ್ತ ನಿರಾಕರಣೆಯ ನೋಟ ಬೀರಿದೆ. ಪುರಾಣ ಮತ್ತು ಚರಿತ್ರೆಗಳಲ್ಲಿ ಅವಜ್ಞೆಗೊಳಗಾದ ಪಾತ್ರಗಳನ್ನು ಎತ್ತಿಹಿಡಿಯುವ ಪ್ರಯತ್ನವೂ ಜೊತೆಜೊತೆಯಲ್ಲಿಯೇ ಸಾಗಿದೆ. ಶೂರ್ಪನಖಿ, ಅಹಲ್ಯ, ಅಮೃತಮತಿ, ಶಾಂತಲೆ, ಯಶೋಧರ, ಕೃತ್ತಿಕೆ ಪಾತ್ರಗಳನ್ನು ಮನೋವಿಶ್ಲೇಷಣೆಯ ಹಿನ್ನೆಲೆಯಲ್ಲಿ ಪುನರ್‌ರಚಿಸಲಾಗಿದೆ. ಅಹಲ್ಯೆ ಅಮೃತಮತಿ ಪ್ರತೀಕಗಳಂತೂ ಅವಗಣನೆಗೆ ಒಳಗಾಗಿರುವ

ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ಎತ್ತಿ ಹೇಳಲು ಪರಿಣಾಮಕಾರಿಯಾಗಿ ಬಳಕೆಯಾದ ಪ್ರತಿಮೆಗಳಾಗಿವೆ. ಈ ಪ್ರತಿಮೆಗಳ ಮೂಲಕ ಮಹಿಳೆಯರು ತಮ್ಮನ್ನು ತಾವು ವ್ಯಾಖ್ಯಾನಿಸಿಕೊಳ್ಳಲು, ತಮ್ಮ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಪ್ರಯತ್ನ ನಡೆಸಿದ್ದಾರೆ. ಈ ಪ್ರತಿಮೆಗಳು ಕಾವ್ಯಸೌಂದರ್ಯದ ದೃಷ್ಟಿಯಿಂದ ಮಾತ್ರವಲ್ಲ, ಮಹಿಳಾಕಾವ್ಯದ ಉದ್ದೇಶ ಈಡೇರಿಕೆಯಲ್ಲೂ ಮಹತ್ತರ ಪಾತ್ರ ವಹಿಸಿ ಮುಖ್ಯವಾಹಿನಿ ಪರಂಪರೆಯ ಕಾವ್ಯಕ್ಕಿಂತ ಮಹಿಳಾಕಾವ್ಯದ ಸತ್ವ, ಶಕ್ತಿ, ಅನನ್ಯತೆಗಳನ್ನು ಹೆಚ್ಚಿಸಿವೆ.

ಹೊಸತಲೆಮಾರಿನ ಕವಿಗಳೂ ಸಹ ಪುರಾಣ ಸನ್ನಿವೇಶಗಳನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾರೆನ್ನುವುದಕ್ಕೆ ಮಹಿಳಾ ಕಾವ್ಯದಿಂದಲೇ ಅನೇಕ ಉದಾಹರಣೆಗಳನ್ನು ಹೆಕ್ಕಿ ತೆಗೆಯಬಹುದು. ಇದಕ್ಕೆ ನಿದರ್ಶನವಾಗಿ ತಾರಿಣಿಯವರ 'ಚಿತ್ತಗ್ಲಾನಿಯ ಮಾತು' ಎಂಬ ಕವನವನ್ನು ತೆಗೆದುಕೊಳ್ಳಬಹುದು.

**'ಬುಟ್ಟಿ ತುಂಬ ಕರ್ಣ ಸಂತಾನ**
**ಸೀರೆಯಲ್ಲಿ ಸುತ್ತಿಟ್ಟು**
**ತೇಲಿಬಿಟ್ಟವರ ನೋವ ನಲುಗಾಟವನ್ನು ಗುರುತಿಸುತ್ತಾ**
**'ಸೂಜಿ ಮೊನೆಯನೊಯ್ದು**
**ಚುಚ್ಚುವ ಪಾತಕವಾಗಿ**
**ಮೈಕ್ರೋಸ್ಕೋಪಿನಡಿಯಲಿ'**

**(ಜಾತಿಸೂಚಕದ ಮಾತು – ಚಿತ್ತಗ್ಲಾನಿಯ ಮಾತು – ಪುಟ ೨೨)**

ಕೃತಿಗೆ ಮುನ್ನುಡಿ ಬರೆದ ಡಾ. ಬಂಜಗೆರೆ ಜಯಪ್ರಕಾಶ್ ಅವರು ಈ ಪ್ರಸಂಗದ ಪ್ರತಿಮೆಯನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. ಅವರ ಮಾತಲ್ಲೆ ಹೇಳುವುದಾದರೆ "ಕರ್ಣನ ಚಿತ್ತಗ್ಲಾನಿ ಜಾತಿಸೂಚಕದಿಂದ ಹುಟ್ಟಿದ್ದೋ, ಹುಟ್ಟಿನ ಕ್ರಮದಲ್ಲಿ ಲೋಪವಿದೆ ಎಂಬ ಆರೋಪಗಳಿಂದ ಬಂದಿದ್ದೋ, ರಾಜ್ಯದಾಹಕ್ಕಾಗಿ ನಡೆಯುತ್ತಿರುವ ಕದನದಲ್ಲಿ ಬಂಧುಬಳಗದವರ ಜೊತೆ ಸೆಣಸಬೇಕಾಗಿ ಬರುತ್ತದೆಂಬ ಮನೋವೇದನೆಯಿಂದ ಹುಟ್ಟಿದ್ದೋ, ಸಮರ್ಥ ಬಿಲ್ಲುಗಾರನಾಗಿದ್ದೂ ಜಾತಿ ಕಾರಣಕ್ಕೆ ಸ್ಪರ್ಧೆಯಿಂದ ಹೊರಗುಳಿದು 'ಅಗ್ನಿಸಂಭವಿ ದ್ರೌಪದಿ'ಯನ್ನು ಪಡೆಯಲಿಕ್ಕಾಗದೇ ಹೋದ 'ಪುರುಷ ಸೋಲಿನ' ವೈಯಕ್ತಿಕ ನೋವಿನಿಂದ ಹುಟ್ಟಿದ್ದೋ ಅಥವಾ ಸೋದರರೆಂದು ಗೊತ್ತಿದ್ದೂ ಅವರನ್ನು ಸೋದರರೆಂದು ಕರೆಯಲಿಕ್ಕಾಗದ ಸನ್ನಿವೇಶದ ಚೌಕಟ್ಟಿನ ವಿಷಾದಗಳಿಂದ ಹುಟ್ಟಿದ್ದೋ ಇದರಲ್ಲಿ ಯಾವುದೂ ಆಗಬಹುದು. ಇಲ್ಲಿ ಕರ್ಣನ ನೋವು ಜಾತಿ ಸೂತಕದ ಪ್ರಶ್ನೆಯಾಗಿ ಮಾತ್ರವಲ್ಲದೆ 'ಕರ್ಣಸಂತಾನ' ಪಡೆಯುವ, ಅದನ್ನು ಸಲಹಲಾಗದೆ ಬೀದಿಪಾಲು ಮಾಡಬೇಕಾಗಿ ಬರುವ ಕುರಿತ ತಾಯ್ತನದ ಅಸಹಾಯಕತೆಯಾಗಿಯೂ ಧ್ವನಿತಗೊಂಡಿದೆ."[7]

ಹೀಗೆ ಒಂದು ಪ್ರತಿಮಾ ಪ್ರಸಂಗದ ಹಿನ್ನೆಲೆಯಲ್ಲಿ ಎಷ್ಟೆಲ್ಲಾ ಬಗೆಯಲ್ಲಿ ಚಿಂತನೆ ನಡೆಸಲು ಸಾಧ್ಯವಿದೆ ಎನ್ನುವುದು ಇಲ್ಲಿ ಮನನೀಯ. ಹಾಗೆಯೇ ಕಾವ್ಯ ಯಾವಾಗಲೂ

ಅಪಾರವಾದುದನ್ನು ಅಲ್ಪದರಲ್ಲಿ ಕಾಣಿಸುವ ಮೂಲಕ ಬೇರೆ ಬೇರೆ ಅರ್ಥಗ್ರಹಿಕೆಗೆ ಕಾರಣವಾಗುತ್ತದೆಂಬ ಕಾವ್ಯಶಕ್ತಿಯೂ ಇಲ್ಲಿ ಅಡಗಿದೆ. ಇದೇ ಕವಯಿತ್ರಿ ಮೂಲಭೂತವಾದಿ ರಾಜಕಾರಣವನ್ನು ವಿಡಂಬಿಸುವಾಗ ಬಳಸುವ ಒಂದು ಪ್ರತಿಮೆ ಹೀಗೆ ಕಾಣಿಸುತ್ತದೆ.

**'ಇಲ್ಲೆಲ್ಲೋ ಕಳೆದಿದೆ । ರಾಮನ ಪಾದುಕೆ**
**ಮೇಲೆ ರುಗ್ಣಶಯ್ಯೆಯಲಿ । ಮಲಗಿ ಮುಲುಗುವ**
**ದೊರೆಯಿದಾನೆ ದೇಶ। ಆಳುವ ಚಪಲದಲಿ'**

**(ಡಿಸೆಂಬರ್ ಆರು – ಚಿತ್ತಗ್ಲಾನಿಯ ಮಾತು – ಪುಟ ೩೬)**

ತಮ್ಮ ರಾಜಕೀಯ ಅಸ್ತಿತ್ವಕ್ಕಾಗಿ ಜನಹಿತಕಾರಿಯಲ್ಲದ, ಜಡ್ಡುಗಟ್ಟಿ ಮರೆಯಾಗಿರುವ ಪೌರಾಣಿಕ ಪ್ರಸಂಗವೊಂದನ್ನು ಬಳಸಿಕೊಳ್ಳುವ ಚಾಣಾಕ್ಷತನ ತೋರಿಸುವವರ ನಡೆಯನ್ನು ವ್ಯಂಗ್ಯವಾಗಿ ಕಾಣುತ್ತಾರೆ ಈ ಕವಯಿತ್ರಿ. ರಾಮನ ಅಪ್ರಸ್ತುತೆಯಲ್ಲಿ ಭರತನಿಂದ ಸಾಂಕೇತಿಕವಾಗಿ ರಾಜ್ಯಭಾರಕ್ಕೆ ಕಾರಣವಾದ 'ರಾಮನ ಪಾದುಕೆ' ವಾಸ್ತವದಿಂದ ಮರೆಯಾದ ವಸ್ತು. ಆದರೆ ತಮ್ಮ ಅಸ್ತಿತ್ವಕ್ಕೆ ಜನರ ಭಾವನೆಗಳನ್ನು ಸೂರೆಗೊಳ್ಳುವ ವ್ಯರ್ಥ ಪ್ರಯತ್ನವಾಗಿ ಕೋಮುವಾದವನ್ನು ವ್ಯವಸ್ಥಿತವಾಗಿ ಎತ್ತಿಕಟ್ಟಲಾಗುತ್ತಿದೆ. ರುಗ್ಣಶಯ್ಯೆಯಲ್ಲಿ ಮಲಗಿರುವ ದೊರೆಯ ಅಸಾಮರ್ಥ್ಯವನ್ನೇ ಇಂತಹ ಪ್ರಯತ್ನಗಳು ಬಿಂಬಿಸುತ್ತವೆ. ಸಮಕಾಲೀನ ಸಂಗತಿಗಳಿಗೆ ಮಹಿಳಾಕಾವ್ಯದ ಸ್ಪಂದನೆಯನ್ನೂ– ವೈಚಾರಿಕ ವಿಸ್ತಾರವನ್ನೂ ಇಂತಹ ಕವನಗಳು ತಿಳಿಸುತ್ತವೆ.

ಜೀವಿ ಸಹಜವಾದ ಅಭೀಪ್ಸೆಗಳನ್ನು ಕರ್ತವ್ಯದ ನೆಪದಲ್ಲಿ ಹತ್ತಿಕ್ಕುವ ಒತ್ತಡಗಳನ್ನು ನಿರಾಕರಿಸುವ, ಉಲ್ಲಂಘಿಸುವ ಅನೇಕ ಪ್ರಸಂಗಗಳೂ ಪುರಾಣದಲ್ಲಿ ದೊರೆಯುತ್ತವೆ. ಪ್ರಸಂಗ ಪೌರಾಣಿಕವಾದರೂ ಮನೋವೈಜ್ಞಾನಿಕವಾಗಿ ಅವು ವರ್ತಮಾನಕ್ಕೂ ಸಲ್ಲುತ್ತವೆ. ಇಂತಹ ಒಂದು ಪ್ರಸಂಗ ಗಿರಿಜಾಶಾಸ್ತ್ರಿಯವರ ಕವನದಲ್ಲಿ ಹೀಗೆ ಮೂಡಿಬಂದಿದೆ.

**ಪರಂಪರೆಯ ಕಾಳಿಂಗ ತೂಗುತ್ತಿತ್ತು । ಬೆನ್ನಹಿಂದೆ**
**ಮರ್ದನ ಮಾಡಿದ ಶ್ಯಾಮನ । ಹಂಬಲದಿಂದೆ**
**ಓಡೋಡಿದರು ಮಂದೆ ಮಂದೆಯಲಿ । ಹಿಂದುಹಿಂದೇ**
**'ಪಕ್ಕದ ಗಂಡನ ಮರೆತು**
**ತೊಟ್ಟಿಲ ಹಸುಗೂಸ ತೊರೆದು**
**ತ್ವರೆ ತ್ವರೆ ತ್ವರೆ ತ್ವರೆ ಮಾಡಿದರು**

**(ಹೀಗೊಂದು ಸಲ್ಲಾಪ – ಪುಸ್ತಕ ಮತ್ತು ನವಿಲುಗರಿ – ಪುಟ ೧೫೩)**

ಉದ್ಧರಣ ಚಿಹ್ನೆಯಲ್ಲಿರುವ ಎಲ್ಲ ವಾಕ್ಯಗಳು ಮಹಿಳೆ ಪಾಲಿಸಬೇಕಾಗಿರುವ ಆದರ್ಶಗಳು, ಕರ್ತವ್ಯಗಳು. ಇಲ್ಲಿ ಓಟ ಏಕಾಂಗಿಯಲ್ಲ. ಮಂದೆಯದು ಹಾಗೂ ಓಡುವ ಕ್ರಿಯೆ ಸಾಮೂಹಿಕವಾಗಿಯೇ ಅಂತರ್ಗತವಾಗಿರುವುದು ಎಂಬುದನ್ನು ಸೂಚಿಸುತ್ತದೆ. ಇಲ್ಲಿ ಮೇಘ ಶ್ಯಾಮನಿಂದ ಮರ್ದಿಸಲ್ಪಟ್ಟದ್ದು ಪರಂಪರೆಯ ಕಾಳಿಂಗ ದುಷ್ಟಶಕ್ತಿ ನಿಗ್ರಹಿಸುವ ಹೊಸತನವನ್ನು ನಿರ್ಭಿಡೆಯಿಂದ ಸ್ವೀಕರಿಸುವ ಮನಸ್ಥಿತಿಯನ್ನು ಕವಿತೆ ಸೂಚಿಸುತ್ತಿದೆ.

ಇ. ಅಡುಗೆಮನೆ ಮತ್ತು ಕೌಟುಂಬಿಕ ಆವರಣಕ್ಕೆ ಸಂಬಂಧಪಟ್ಟ ಪ್ರತಿಮೆಗಳೂ ಕೂಡ ಮಹಿಳಾಕಾವ್ಯದ ಭಾಷಿಕ ವಿಶೇಷಗಳೇ ಆಗಿವೆ. 'ಅಮ್ಮನ ಸೀರೆ' ಮಹಿಳಾ ಜೀವನದ ಸ್ಮೃತಿಕೋಶವಾಗಿ, ಹೊಸತನದ ಲೇಪವಿಲ್ಲದ ಗೊಡ್ಡು ಸಂಪ್ರದಾಯದ ಅನುಸರಣೆಯ ಪ್ರತೀಕವಾಗಿ ಬಳಕೆಯಾದ ಒಂದು ಪ್ರತಿಮೆ.

**ನನ್ನ ಅಮ್ಮನ ಸೀರೆ । ನೆರಿಗೆ ಅಂಬಡೆಗಂಟು**
**ಖಾಲಿಯಾಗದ ಗೂಢ ಪದಾರ್ಥಕೋಶ**
**ನನ್ನ ಅಮ್ಮನ ಸೀರೆ । ಒಡಲೆಲ್ಲ ನಕ್ಷತ್ರ**
**ಮೋಡದಲಿ ಬಿಸಿಲಿನಲಿ । ನೋಯದಂತಡಗಿ**
**ಮಾಯದಂತೆ ಕಾದು ಸ್ವಂತತನವ**
**ಕತ್ತಲಲ್ಲಿಯೇ ಹೊಳೆದ ಜೀವ**
**ಪಟ್ಟೆ ಸೀರೆಗೆ ಪಟ್ಟ ಪುಟ್ಟಕನಸು । ನನಸಾಗುವಾಗ ಅಪ್ಪಯ್ಯನಿಲ್ಲ**
**ಉಟ್ಟರೂ ಈಗಿಲ್ಲ ಉಡುವ ಮನಸು**
**ಕಳೆದು ಹೋಯ್ತೆನ್ನುವಳು ಉಡುವ ವಯಸೂ**

**(ನನ್ನ ಅಮ್ಮನ ಸೀರೆ – ವೈದೇಹಿ ಆಯ್ದ ಕವಿತೆಗಳು – ಪುಟ ೬೫)**

ಇಲ್ಲಿ ಮೇಲ್ನೋಟಕ್ಕೆ ಅರ್ಥ ಮಾಡಿಕೊಳ್ಳಲಾಗದ ವ್ಯಕ್ತಿತ್ವವಿದೆ. ಸ್ವಾಭಿಮಾನಿ, ಶ್ರಮಜೀವಿಯೊಂದರ ಕನಸು–ನನಸುಗಳಿವೆ. ಕಾಲಗರ್ಭದಲ್ಲಿ ನಿರಂತರ ಸೆಣಸಾಡಿ ಮುನ್ನುಗ್ಗುವ ಹೋರಾಟವಿದೆ. ಗಳಿಸಿದ್ದೆಲ್ಲವನ್ನೂ ಬಳಸಲಾಗದ ಕಾಲಿಕ ಸತ್ಯವಿದೆ. ಹೀಗೆ 'ಅಮ್ಮನ ಸೀರೆ'ಯೆಂಬ ಪ್ರತಿಮೆ ವಿಚಾರಗಳ ಸರಣಿಯನ್ನೇ ಹೆಣೆಯುತ್ತಿದೆ. ಇದೇ ರೀತಿ 'ನೋಡಬಾರದು ಚೀಲದೊಳಗನು' ಎಂಬ ಅವರ ಪ್ರಸಿದ್ಧ ಕವಿತೆಯೊಳಗಿನ 'ಚೀಲ' ಕೂಡ ಮಹಿಳಾ ಜೀವನದ ಖಾಸಗಿತನವನ್ನು ಅದನ್ನು ಕಾಪಿಟ್ಟುಕೊಳ್ಳುವ ಆಕೆಯ ಸ್ವಾತಂತ್ರ್ಯವನ್ನು ದೃಢಪಡಿಸುತ್ತದೆ. 'ನೋಡಬಾರದು' ಹಾಗೆಯೇ 'ನೋಡಲಾಗದು' ಎಂಬ ಗಟ್ಟಿದನಿಯಲ್ಲಿ ಹೆಣ್ಣಿನ ಸ್ಮೃತಿಕೋಶದಲ್ಲಡಗಿರುವ ಹಸಿಹಸಿ ಅನುಭವಗಳನ್ನು ಕೆದಕಿ ನೋಡುವ ಪುರುಷಪಾರಮ್ಯಕ್ಕೆ ಎಚ್ಚರಿಕೆಯ ಸಂದೇಶವನ್ನೂ ರವಾನಿಸುತ್ತದೆ.

'ಮಸಿಬಟ್ಟೆ' ಎಂಬ ಅಡುಗೆಮನೆಯ ಸಾಮಾನ್ಯ ವಸ್ತುವೊಂದು ಹೆಣ್ಣಿನ ಬದುಕನ್ನು ಪ್ರತಿಮಿಸುವ ಅದ್ಭುತ ಕಲ್ಪನೆ ರೂಪ ಹಾಸನ ಅವರದ್ದು.

**ಉಕ್ಕಿದ್ದು ಸೀಟಲು । ಸಿಡಿದಿದ್ದು ಒರೆಸಲು**
**ಬಿಸಿಬಿಸಿಯ ಪಾತ್ರೆ ಪಡಗ**
**ಒಲೆಯಿಂದ ಇಳುಕಲು। ಸದ್ದಿಲ್ಲದೇ ಸಹಕರಿಸುವವಳು**
**ಸದ್ದುಗಳ ಒಳಗೇ ಅಡಗಿಸಿಟ್ಟವಳು**
**ಚಿಂದಿಯಡಿಯಲ್ಲೇ ನಕ್ಕವಳು ಅತ್ತವಳು।**
**ಎಷ್ಟೆಲ್ಲ ಉಜ್ಜಿ ತೊಳೆದರೂ । ಹಿಡಿದ ಮುಸುರೆಯ**

**ಹಟದ ಕೊಳಕು ಸವೆಯದೇ । ಸಿಂಡರಿಸಿ ಗೊಣಗಿದರೆ**

**'ಪಾವಿತ್ರ್ಯತೆ ಹೊರಗಿನದಲ್ಲ ಒಳಗಿನದೆಂಬ'**

**ದಿವ್ಯ ನಿರ್ಲಿಪ್ತ ನಗು.**

**ನಿತ್ಯ ಹೊಸತಾಗುತ್ತಲೇ । ಶುದ್ಧವಾಗುವವಳು**

**ಪಾಪನಾಶಿನಿ ಸ್ವಯಂಪಾಪಿ!**

**(ಮಸಿಬಟ್ಟೆ ಎಂಬೋಳು – ಕಡಲಿಗೆಷ್ಟೊಂದು ಬಾಗಿಲು – ಪುಟ ೭೪)**

ಅಡುಗೆಮನೆಯ ದಾಸಿಯಾಗಿ, ಕುಟುಂಬದ ಜವಾಬ್ದಾರಿಯ ವಾರಸುದಾರಳಾಗಿ ಮಹಿಳೆಯ ಎಲ್ಲ ರೀತಿಯ ತ್ಯಾಗ, ಕರ್ತವ್ಯಗಳನ್ನು ಮಸಿಬಟ್ಟೆಯ ಕಾರ್ಯವೈಖರಿ ತನ್ನೆಲ್ಲಾ ನೈಜತೆಯೊಡನೆ ತೆರೆದಿಡುತ್ತದೆ. ಬಾಹ್ಯದಲ್ಲಿ ಕೊಳಕಾಗಿ ಕಾಣಿಸಿಕೊಳ್ಳುವುದೆಲ್ಲವೂ ಆಂತರ್ಯದಲ್ಲಿ ಕೊಳಕಾಗಿರಬೇಕಾಗಿಲ್ಲ. ಹಾಗೆಯೇ ಬಾಹ್ಯದಲ್ಲಿ ಶುಭ್ರವಾಗಿರುವುದೆಲ್ಲ ಆಂತರ್ಯದಲ್ಲಿ ಶುಭ್ರವಾಗಿರುತ್ತದೆ ಎಂಬ ಖಾತ್ರಿ ಏನೂ ಇಲ್ಲ. ತನ್ನ ಅಸ್ಮಿತೆಯನ್ನು ನಗಣ್ಯವಾಗಿಸಿಕೊಂಡು ಸಮಷ್ಟಿಯ ಒಳಿತಿಗಾಗಿ ಶ್ರಮಿಸುವ ಪ್ರತಿ ಜೀವ, ಸೇವೆಯನ್ನೂ ಒಳಗೊಳ್ಳುತ್ತಾ ಕವಿತೆ ಕೇವಲ ಮಹಿಳಾಬದುಕಿನ ಚಿತ್ರಣವಾಗಿ ಮಾತ್ರ ಉಳಿಯದೆ ಸಮಾಜದಲ್ಲಿ ಅವಗಣನೆಗೆ ಒಳಗಾಗುವ ಎಲ್ಲ ದಲಿತ ಸಮುದಾಯಗಳನ್ನೂ ಒಳಗೊಳ್ಳುತ್ತದೆ. ಬೇರೆಯವರ ಪಾಪ ತೊಳೆಯುವ ಈ ಪಾಪನಾಶಿನಿ ಸಮೂಹ ಸ್ವಯಂಪಾಪಿಯಾಗಿರುವುದು ಅದನ್ನು ಬಳಸಿಕೊಳ್ಳುವವರ ದೃಷ್ಟಿಯಲ್ಲಿ ಮಾತ್ರ. ಹಾಗಾಗಿಯೇ ಕವನದ ಸಾಲು ಆಶ್ಚರ್ಯಸೂಚಕ ಚಿಹ್ನೆಯೊಂದಿಗೆ ಕೊನೆಯಾಗುತ್ತದೆ. ಪಾಪನಾಶಿನಿಯಾದ ಶ್ರಮಿಕ ಸಮೂಹ ಸ್ವಯಂಪಾಪಿಯಾಗಲು ಹೇಗೆ ಸಾಧ್ಯ! ಅಡುಗೆ ಮನೆಯಲ್ಲೇ ಅಧ್ಯಾತ್ಮ ಕಾಣುವುದು ಕವಿತಾ ರೈ ಅವರ ಪ್ರಯತ್ನ.

**ಮುಸುರೆಯೊಳಗೂ ಮಿಡಿವ**

**ಅಡುಗೆ ಮನೆಯ ಆಧ್ಯಾತ್ಮ**

**ಎಂಜಲೊಳಗಿದ್ದು ಮೂಡುವ ಮರ್ಮ**

**(ಅಡುಗೆ ಮನೆಯ ಅಧ್ಯಾತ್ಮ – ನೀರತೇರು – ಪುಟ ೧೮)**

'ಕಾಯಕವೇ ಕೈಲಾಸ' ಎಂಬ ಕರ್ಮಸಿದ್ಧಾಂತ ಕೂಡ ಅಡುಗೆ ಮನೆಯ ಕಾಯಕವನ್ನು ಕೈಲಾಸ ಕಾಣುವ ಮಾರ್ಗವೆಂದು ಗುರುತಿಸುವುದಿಲ್ಲ. ಅಧ್ಯಾತ್ಮದ ಹಾದಿಯಲ್ಲಿ ಭೋಗ ತ್ಯಾಗಕ್ಕೆ ಅರ್ಹವಾದುದು. ಆದರೆ ಎಲ್ಲ ಚಯಾಪಚಯ ಕ್ರಿಯೆಗಳಿಗೂ ಅವಶ್ಯವಾದುದು ಆಹಾರ. ಹೀಗೆ ಆಹಾರ ಸಿದ್ಧವಾಗುವ ಅಡುಗೆಮನೆಯು ಮುಖ್ಯವೆಂದು ಪರಿಗಣಿಸಲ್ಪಡದಿರುವುದು ಅದರ ಪ್ರಾಮುಖ್ಯತೆಯನ್ನು ಗುರುತಿಸುವಲ್ಲಿ ಸಮಾಜದ ವೈಫಲ್ಯವನ್ನು ತೋರಿಸುತ್ತದೆ. ಆಹಾರ ಸೇವಿಸುವ ಪ್ರತಿ ಮನುಷ್ಯರೂ ಈ ಅಡುಗೆಮನೆಯ ಅಧ್ಯಾತ್ಮವನ್ನು ಅರ್ಥೈಸಿಕೊಳ್ಳಲೇಬೇಕಾಗಿದೆ. ಮಹಿಳೆಗೆ ಮಾತ್ರ ಸೀಮಿತವಾಗಿರುವ ಈ ಅಡುಗೆಮನೆಯಂತೆಯೇ ಆಕೆಗೆ ಮಾತ್ರ ಮೀಸಲಾದ ಪ್ರತಿಮೆಗಳು ಬಾವಿಕಟ್ಟೆ, ಒಲೆಗಳು, ಕವಿತಾ ರೈ ಬಾವಿಕಟ್ಟೆಯನ್ನು ವಿವರಿಸುವುದು ಹೀಗೆ.

ಎಲ್ಲ ಮನೆಗಳಲ್ಲೂ ಒಂದೊಂದು ಬಾವಿಕಟ್ಟೆ
ಬಾವಿಕಟ್ಟೆಯ ಬದುಕು ತಳಕ್ಕೆ । ತೂತು ಮಾಡಿ ನೀರನ್ನೆಲ್ಲಾ
ಹರಿಯಬಿಡಬೇಕೆನಿಸುತ್ತಿಲ್ಲ
ಹರಿದ್ದರಿದು ಗಂಗೆ ತುಂಗೆ ಯಮುನೆ
ಕಾವೇರಿಯಂತೆ ಸಮುದ್ರ ಸೇರ । ಬೇಕೆನಿಸುತ್ತಿಲ್ಲ

(ಬಾವಿಕಟ್ಟೆ – ಹಕ್ಕಿಹರಿವ ನೀರು – ಪುಟ ೨೪)

ಬದಲಾವಣೆಯಿಲ್ಲದ, ಏಕತಾನತೆಯ ಜೀವನಕ್ರಮ ಸಾಂಪ್ರದಾಯಿಕ ಬದುಕಿನಲ್ಲಿರುವುದನ್ನು ಕವಿ ಬಾವಿಕಟ್ಟೆಯ ಪ್ರತಿಮೆಯಲ್ಲಿ ಹಿಡಿದಿಟ್ಟಿದ್ದಾರೆ. ಹೊಸ ಚಿಂತನೆಗಳಿಗೆ ಹಾಕಿದ ಅಡೆತಡೆಯಾಗಿಯೂ ಇದು ಕಾರ್ಯ ನಿರ್ವಹಿಸುತ್ತದೆ. ಭಾರತೀಯ ಸಾಂಪ್ರದಾಯಿಕ ಜೀವನಕ್ರಮದಲ್ಲಿ ಹೆಣ್ಣಿನ ನಡೆಯನ್ನು ನಿಯಂತ್ರಿಸುವಷ್ಟು ಗಂಡಿನ ನಡೆಯನ್ನು ನಿಯಂತ್ರಿಸಲಾಗುವುದಿಲ್ಲ. ಜೀವನಕ್ರಮದಲ್ಲಿ ಬಾಹ್ಯವಾದ ಏನೇ ಬದಲಾವಣೆಯೂ ಸ್ತ್ರೀ ಜೀವನದ ಆಂತರಿಕ ಒತ್ತಡವನ್ನು ಕಡಿಮೆ ಮಾಡುವುದಿಲ್ಲ. ಅಡುಗೆಮನೆಯ ಕ್ರಿಯೆಯೊಂದರಿಂದಲೇ ಹೆಣ್ಣಿನ ಒತ್ತಡಗಳನ್ನು ಕವಿತಾ ರೈಯವರು ಹೀಗೆ ಕಟ್ಟಿಕೊಡುತ್ತಾರೆ.

ಇಂದು ಇವರು ಹೇಳುತ್ತಾರೆ । ನಾನು ನಿನ್ನ ಜೊತೆಗೆ ಇದ್ದೇನೆ
ಅಡುಗೆ ಮನೆಯಲ್ಲಿ ನಿನ್ನ ಸೆರಗು ಹಿಡಿದಿಲ್ಲ
ಕೈಗೆ ಕಾಲಿಗೆ ಬೇಕು ಬೇಕಾದ್ದು ಇದೆಯಲ್ಲ
ಕೆಲಸಕ್ಕೆ ಜೊತೆ ಸೇರಿದ್ದೇನೆ ಸುಖಿ ನೀನು
ನಮ್ಮಜ್ಜಿ ನಿಮ್ಮಜ್ಜಿ ಅಮ್ಮಂದಿರಿಗಿಂತ
ಒಳಗೆ ಕುಕ್ಕರು ಕೂಗುತ್ತಿದೆ ಒತ್ತಡದಿಂದ
ಒಲೆ ಬದಲಾದರೇನು ಉರಿ ಬದಲಾಗಿದೆಯೇ
ಅಡುಗೆಯ ಅನುಭವ ಇಬ್ಬರಿಗೂ ಇದೆ
ಉಷ್ಣತೆಯ ತಾಪಕ್ಕೆ ಮುಚ್ಚಳ ಹಾರೀತು
ಕುಕ್ಕರಲ್ಲವೇ ತಾನೆ ತಣಿಯಲೆಂದು
ಕಾಯಲಾಗುವುದಿಲ್ಲ
ಆವಿ ಹೋಗಲೇಬೇಕು ಹೊರಗೆ

(ಒಲೆ – ಹಕ್ಕಿಹರಿಯವ ನೀರು – ಪುಟ ೨೬)

ತಲೆಮಾರುಗಳಿಂದ ವರ್ಗಾವಣೆಗೊಂಡಿರುವ ಒತ್ತಡಗಳನ್ನು ಆಧುನಿಕ ಹೆಣ್ಣು ಮೌನವಾಗಿ ಸಹಿಸಲಾರಳೆಂಬುದನ್ನು ಕುಕ್ಕರಿನ ಪ್ರತಿಮೆಯ ಮೂಲಕ ಕಟ್ಟಿಕೊಡಲಾಗಿದೆ. ಬಾಹ್ಯ ಕ್ರಿಯೆಗಳಲ್ಲಿ ಮಾತ್ರ ಬದಲಾವಣೆ ಇದ್ದು, ಅಂತರಂಗದ ತೊಳಲಾಟಗಳು ಬದಲಾಗದ ಸ್ಥಿತಿಯೇ ಒಲೆ ಬದಲಾದರೂ ಉರಿಬದಲಾಗದ ಕ್ರಿಯೆ. ಹೆಣ್ಣಿಗೆ ಬೇಕಾಗಿರುವುದು ಮಾನಸಿಕವಾಗಿ ತನ್ನನ್ನು

ಮುಕ್ತವಾಗಿಟ್ಟುಕೊಳ್ಳುವ ವಾತಾವರಣವೇ ಹೊರತು, ಹೊಸ ಹೊಸ ರೂಪಗಳಲ್ಲಿ ತನ್ನ ಹಿಡಿತವನ್ನು ಬಿಗಿಗೊಳಿಸುವ ಸಮಾಜದ ಕಟ್ಟುಪಾಡುಗಳಲ್ಲ. ಈ ಕಟ್ಟುಪಾಡುಗಳಿಂದ ಮುಕ್ತವಾಗುವ ದಾರಿಯನ್ನು ತಾನೇ ಕಂಡುಕೊಳ್ಳಬೇಕೆ ಹೊರತು ಹೊರಗಿನ ಆಸಕ್ತಿಯನ್ನು ನಿರೀಕ್ಷಿಸುವಂತಿಲ್ಲ. ಹೊರಗಿನ ಆಸರೆಗಳೆಲ್ಲ ಸ್ವಾರ್ಥಪರವಾಗಿರುವವೇ ಆಗಿವೆ. ತನ್ನ ಅಸ್ಮಿತೆಯ ರೂವಾರಿ ತಾನೆ ಆಗಿದ್ದು ಅದನ್ನು ಸ್ಥಾಪಿಸಿಕೊಳ್ಳುವ ಸ್ವಯಂ ಜವಾಬ್ದಾರಿಯನ್ನು ಆಕೆ ವಹಿಸಿಕೊಳ್ಳಬೇಕೆಂಬುದನ್ನು ಇದೇ ಕವಿಯ 'ರುಬ್ಬುಗಲ್ಲು' ಪ್ರತಿಮೆ ಉತ್ತಮವಾಗಿ ಧ್ವನಿಸುತ್ತದೆ:

**ರುಬ್ಬುವುದಾದರೆ ರುಬ್ಬುವುದು । ಕುಟ್ಟುವುದಾದರೆ ಕುಟ್ಟುವುದು**
**ಮೈಮನಗಳ ಕಸುವು । ಫಲಿತವಷ್ಟೇ ಮುಖ್ಯ**
**ಕಣ್ಣಮುಂದೆಯೆ ಸತಿ ಮಾಡಿ । ಇಂದೆಲ್ಲ ಗುಡಿಕಟ್ಟಿ**
**ಕೈ ಮುಗಿಯುವ ಮಂದಿಯನ್ನೆಲ್ಲ**
**ಪತಪತನೆ ರುಬ್ಬುಗಲ್ಲಿಗೆ ಇಕ್ಕಿ**
**ನಾದುವಂತೆ ಕುಟ್ಟಬೇಕು**

**(ರುಬ್ಬುಗಲ್ಲು – ಹಕ್ಕಿಹರಿವ ನೀರು – ಪುಟ ೫೧)**

ಯಾವುದನ್ನೆಲ್ಲ ಸಹಿಸಿಕೊಳ್ಳುವ ಅನಿವಾರ್ಯತೆಯನ್ನು ವ್ಯವಸ್ಥೆ ಸೃಷ್ಟಿ ಮಾಡಿರುತ್ತದೆಯೋ ಅದನ್ನು ಧಿಕ್ಕರಿಸುವುದರಲ್ಲೇ, ಅನ್ಯಾಯವನ್ನು ಎದುರಿಸುವಲ್ಲಿಯೇ ಹೆಣ್ಣು ತನ್ನ ಅಸ್ತಿತ್ವವನ್ನು ಸ್ಥಾಪಿಸುವ ತನ್ನ ಮೇಲಾಗುವ ಆಕ್ರಮಣವನ್ನು ನಿಯಂತ್ರಿಸುವ ಅವಕಾಶಗಳು ಸೃಷ್ಟಿಯಾಗುತ್ತವೆ. ಅಂತಹ ಅವಕಾಶಗಳನ್ನು ಸಾಧ್ಯವಾಗಿಸಿಕೊಳ್ಳಬೇಕಾದ ಜವಾಬ್ದಾರಿ ಹೆಣ್ಣಿನದೇ ಆಗಿದೆ ಎಂಬುದನ್ನು ಕವನ ಒತ್ತಾಯಿಸುತ್ತದೆ. ಇಲ್ಲಿ ವಸ್ತುವಿನ ಮೂಲರೂಪವನ್ನು ಬದಲಿಸುವ ಶಕ್ತಿ ಇರುವುದು ರುಬ್ಬುಗಲ್ಲಿಗೆ. ಇದು ಹೆಣ್ಣಿನ ಬಂಡಾಯ ಮನೋಧರ್ಮವನ್ನೂ ಸಮರ್ಥವಾಗಿ ಪ್ರತಿಮಿಸುತ್ತಿದೆ. ಸುಕನ್ಯಾ ಅವರ ಕವನದಲ್ಲಿ ಹೆಣ್ಣಿನ ಅಂತಃಶಕ್ತಿಯನ್ನು ಹೇಳುವ ಇನ್ನೊಂದು ಪ್ರತಿಮೆ 'ಏಣಿ';

**ನಾನೊಂದು ಏಣಿ**
**ಎಷ್ಟೊಂದು ಜನರನ್ನು**
**ಎತ್ತಿ ಹಿಡಿದಿದ್ದೇನೆ**
**.............................**
**ಆನೆ ಭಾರ ಹೊತ್ತ ಗಟ್ಟಿ ನೆಲದಲ್ಲಿ**
**ಕಾಲೂರಿ ನಿಂತ ನನಗೆ ಬೀಳುವ ಭಯವಿಲ್ಲ**

**(ಏಣಿ – ನಾನೆಂಬ ಮಾಯೆ – ಪುಟ ೧೯೭)**

ನಾವು ಮೇಲೇರಲು ಕಾರಣವಾಗುವ ಏಣಿ ಜಗತ್ತಿನ ಅದಮ್ಯಶಕ್ತಿಯೂ, ಚೇತನವೂ ಆಗಿರುವ 'ಸ್ತ್ರೀ' ಮನುಕುಲದ ಉನ್ನತೀಕರಣದಲ್ಲಿ ತನ್ನೆಲ್ಲಾ ತ್ಯಾಗ, ವಾತ್ಸಲ್ಯಗಳನ್ನು ಧಾರೆಯೆರೆಯುವ ಪ್ರತೀಕ. ಮೇಲೇರಿದವರು ಮಾತ್ರ ಆಕೆಯನ್ನು ಕಡೆಗಣಿಸುವುದು ಇಲ್ಲಿ ಬಿಂಬಿತವಾಗುತ್ತಿದ್ದು,

ಆಕೆಗಿರುವ ಅದಮ್ಯಶಕ್ತಿ ತನ್ನ ಅಸ್ತಿತ್ವ ಅಲುಗಾಡದೆ ಸ್ಥಿರವಾಗಿರುವುದನ್ನು ಧ್ವನಿಸುತ್ತದೆ. ಆದರೆ ಮೇಲೇರಬೇಕಾದ ಪ್ರತಿ ಜೀವಕ್ಕೂ ಏಣಿ ಬೇಕೇ ಬೇಕಾದ ಸತ್ಯವೂ ಈ ಅಂತಃಶಕ್ತಿಯ ಅಗಾಧತೆಯನ್ನು ಹೇಳುತ್ತಿದೆ. ಸಂಸಾರದ, ಕುಟುಂಬದ ಒಡಕುಗಳನ್ನು ಮುಚ್ಚಿಟ್ಟು ಎಲ್ಲವೂ ಸುಸೂತ್ರವಾಗಿ ನಡೆಯುವ ಹಾಗೆ ತೇಪೆ ಹಾಕುವ ಕೆಲಸ ಕೂಡ ಹೆಣ್ಣಿನಿಂದಲೇ ನಡೆಯುತ್ತದೆ. 'ಸೂಜಿ'ಯೆಂಬ ಪ್ರತಿಮೆಯ ಮೂಲಕ ಈ ಕುಸುರಿ ಕಾರ್ಯವನ್ನು ರೂಪ ಹಾಸನ ಅವರು ಹೀಗೆ ತೆರೆದಿಡುತ್ತಾರೆ :

**ಸೂಜಿಯೊಂದಿಗೇ । ರೀಲುಗಟ್ಟಲೆ**
**ಗಟ್ಟಿದಾರ। ಹೊತ್ತು ಸಾಗಿ । ಪಿಸುಗಿ ಹೋದ**
**ಎಲ್ಲ ಎಲ್ಲವನ್ನೂ ಹೊಲಿಯುತ್ತಾಳೆ**

**..........................................................**

**ಹೊಲಿದದ್ದು ಮತ್ತೆ ಮತ್ತೆ । ಹರಿಯದುಳಿದೀತೇ?**
**ಹರಿದದ್ದೆಲ್ಲವ ಶಾಶ್ವತ । ಹೊಲಿಯಲಾದೀತೇ?**

**(ಸೂಜಿ ಮತ್ತು ಅವಳು – ಒಂದಿಷ್ಟು ಹಸಿಮಣ್ಣು – ಪುಟ ೬೬)**

ಪದ್ಯದ ಮೊದಲ ಭಾಗ ಕೌಟುಂಬಿಕ ಹಿತಕ್ಕಾಗಿ ಎಲ್ಲವನ್ನೂ ತೇಪೆಹಾಕುವ ಕೆಲಸವನ್ನು ತಾಯಿಯಾಗಿ, ಮಗಳಾಗಿ, ಹೆಂಡತಿಯಾಗಿ ವಿವಿಧ ಪಾತ್ರಗಳ ಮೂಲಕ ಹೆಣ್ಣು ನಿರ್ವಹಿಸುವ ವಿವರಣೆಯಿದ್ದರೆ ಕೊನೆಯ ಭಾಗ ಅದರ ಕ್ಷಣಿಕತೆಯನ್ನು ಧ್ವನಿಸುತ್ತದೆ. ಪರಂಪರೆಯಿಂದಲೂ ಮುಂದುವರಿದುಕೊಂಡು ಬರುತ್ತಿರುವ ಅಸಮಾನತೆ, ಆಕ್ರಮಣಗಳನ್ನು ತಾತ್ಕಾಲಿಕವಾಗಿ ದೂರ ಮಾಡಿದಂತೆನಿಸಿದರೂ ಅದು ಶಾಶ್ವತ ಪರಿಹಾರವಾಗುವುದಿಲ್ಲ. ಗಂಡು–ಹೆಣ್ಣು ಸೇರಿದಂತೆ ಇಡೀ ಸಮಷ್ಟಿಯೇ ತನ್ನೊಳಗಿನ ತಪ್ಪುಗಳನ್ನು ತಿದ್ದಿಕೊಳ್ಳಲು ಮುಂದಾಗದ ಹೊರತು ದೋಷಗಳು ಹಾಗೆಯೇ ಮುಂದುವರಿಯುತ್ತವೆ ಎಂಬುದನ್ನು ಕವಿತೆ ಧ್ವನಿಸುತ್ತಿದೆ. ಇಲ್ಲಿ ಕವಯಿತ್ರಿ ಕೇಳುವ ಪ್ರಶ್ನೆಯನ್ನೇ ಪ್ರತಿ ಮನಸ್ಸು ಕೇಳಿಕೊಂಡು ಹೆಜ್ಜೆ ಇಡಬೇಕು. ಶಿಕ್ಷಣ, ಸಾಮಾಜಿಕ ಸುಧಾರಣೆಗಳು ಇಂತಹ ಪ್ರಯತ್ನಕ್ಕೆ ಹಚ್ಚುವ ಪ್ರಯತ್ನದಲ್ಲಿ ತೊಡಗಿಸಿಕೊಂಡಿವೆಯಾದರೂ ಸ್ವೀಕರಿಸುವವರು ಸಿದ್ಧರಾಗಿದ್ದಾಗ ಸಫಲತೆ ಕಾಣಬಹುದು. ಸ್ವೀಕರಿಸುವ ಮನಸ್ಸುಗಳೇ ವೈಚಾರಿಕತೆಯಿಂದ, ವೈಜ್ಞಾನಿಕತೆಯಿಂದ ಮಾನವೀಯತೆಯಿಂದ ತಮ್ಮನ್ನು ತಾವು ದೂರವಿಟ್ಟುಕೊಂಡರೆ! ಇಂತಹ ಮನಸ್ಸಿನ ಜಡಸ್ಥಿತಿಯನ್ನು 'ಗೋಡೆ' ಎಂಬ ಪ್ರತಿಮೆಯ ಮೂಲಕ ಕವಯಿತ್ರಿ ನಿರೂಪಿಸುತ್ತಾರೆ.

**ಗೋಡೆ ಮೇಲೊಂದು ಗೋಡೆ**
**ಕಿರಿಗೋಡೆ, ಮರಿಗೋಡೆ**
**ಬಾನಿನೆತ್ತರಕ್ಕೆ ಏರಿನಿಂತ। ಹಿರಿಗೋಡೆಗಳು !**
**ನನಗೆ ನಾನೇ ಕಟ್ಟಿಕೊಂಡ। ಪದರು ಪದರು**
**ರೇಷ್ಮೆ ಗೂಡುಗಳು !**

**(ಗೋಡೆಗಳು – ಒಂದಿಷ್ಟು ಹಸಿಮಣ್ಣು – ಪುಟ ೧೮)**

ಜಾತಿ, ಮತ, ದೇಶ, ಧರ್ಮಗಳ ವಿಷಯದಲ್ಲಿ ಮನಸ್ಸಿನಲ್ಲಿ ಮನೆಕಟ್ಟಬೇಡಿ ಎಂಬ ಕಳಕಳಿ ರಾಷ್ಟ್ರಕವಿ ಕುವೆಂಪು ಅವರದ್ದು. ಈ ಕವಯಿತ್ರಿ ಹೇಳುತ್ತಿರುವುದು ಗೋಡೆಗಳ ಬಗ್ಗೆ. ಗೋಡೆಗಳೆಂದೂ ಪಾರದರ್ಶಕವಲ್ಲ. ಒಮ್ಮೆ ಧುತ್ತೆಂದು ಎದ್ದು ನಿಂತರೆ ಆಚೆ ಏನೂ ಕಾಣಿಸದು. ಈ ಗೋಡೆಯ ನಿರ್ಮಾತೃ ಸ್ವಯಂ ನಾನೆ ಎನ್ನುವಾಗ ಬಯಸಿ ಬಯಸಿ ಯಾರೂ ಈ ಗೋಡೆ ನಿರ್ಮಾಣ ಮಾಡಿಕೊಳ್ಳುವುದಿಲ್ಲ. ತನ್ನನ್ನು ತಾನು ರಕ್ಷಿಸಿಕೊಳ್ಳಲು ಇಷ್ಟೆಲ್ಲಾ ತಯಾರಿ ನಡೆಸಬೇಕಾದರೆ, ತನಗೆ ತಾನೆ ಗೋರಿ ನಿರ್ಮಾಣ ಮಾಡಿಕೊಳ್ಳಬೇಕೆಂದರೆ ಬಾಹ್ಯದಿಂದ ಏನಾದರೂ ತೊಂದರೆ, ಒತ್ತಡಗಳು ಇದ್ದೇ ಇರಬೇಕು. ಬೇರೆ ಬೇರೆ ಸಂಬಂಧಗಳ ರೂಪದಲ್ಲಿ, ಸಂಪ್ರದಾಯಗಳ ರೂಪದಲ್ಲಿ ಅವುಗಳ ಆಕ್ರಮಣ ನಡೆಯುತ್ತಿರಬೇಕು. ಈ ಮಾನಸಿಕವಾದ ತಡೆಗೋಡೆ ತನ್ನ ಉಸಿರನ್ನು, ಸ್ವಂತಿಕೆಯನ್ನು ತಾನು ಕಾಪಿಟ್ಟುಕೊಳ್ಳುವ ಮಹದಾಸೆಯಿಂದ ಕಟ್ಟಲ್ಪಟ್ಟಿದ್ದರೂ ಕ್ರಮೇಣ ಉಸಿರುಗಟ್ಟಿಸುವ ವ್ಯಂಗ್ಯವನ್ನು ಕವಿತೆ ಮುಂದುವರಿಸುತ್ತದೆ. ಗೋಡೆ ಅಪಾರದರ್ಶಕವಾಗಿ ಚಿಂತನೆಗಳಿಂದ ದೂರವಿರಿಸುತ್ತಲೇ, ಬದಲಾವಣೆಗಳಿಂದಲೂ ವಿಮುಖಗೊಳಿಸುತ್ತದೆ. ಆದರೆ ಪಾರದರ್ಶಕವಾದ 'ಕನ್ನಡಿ' ನಮ್ಮೊಳಗನ್ನು ತೆರೆದು ತೋರಿಸಿ ಏನಾದರೂ ಮಾರ್ಪಾಡು ತರಬಲ್ಲ ಶಕ್ತಿಯಾಗಿ ಈ ಕವಿಯ ಆಶಯವನ್ನು ಉದ್ದೀಪನಗೊಳಿಸುತ್ತದೆ.

> **ಸೋಲುಗಳ ಮೆಟ್ಟಿ ಗೆಲುವಿನ ಮೆಟ್ಟಲಾಗಿಸಲು**
> **ಕನ್ನಡಿಗಳು ಬೇಕು !**
> ..............................
> **ಕಾಣುವ ನೂರುಮುಖಗಳ। ಕಾಣದ ಅಸಂಖ್ಯ ಭಾವಗಳ ಅರ್ಥೈಸಲು**
> **ಆತ್ಮೀಯ ಕನ್ನಡಿಗಳು ಬೇಕು !**
> **ಎಲ್ಲ ಎಲ್ಲವುಗಳ ಪ್ರತಿಬಿಂಬಿಸಲು**
>
> **(ಕನ್ನಡಿಗಳು ಬೇಕು – ಒಂದಿಷ್ಟು ಹಸಿಮಣ್ಣು – ಪುಟ ೧೩)**

ಬದುಕು ಎಷ್ಟೇ ಖಾಸಗಿ ಎಂದುಕೊಂಡರೂ ಬದುಕಬೇಕಾಗಿರುವುದು ಮಾತ್ರ ಸಮೂಹದ ನಡುವೆ. ಸಾಮಾಜಿಕವಾದ ಪರಸ್ಪರಾವಲಂಬನೆ ಆತ್ಮೀಯವಾಗಿದ್ದಷ್ಟೂ ಬದುಕು ರಸವತ್ತಾಗಿರುತ್ತದೆ. ಮನಸ್ಸಿಗೆ ತಡೆಗೋಡೆಯನ್ನು ನಾವೇ ನಿರ್ಮಿಸಿಕೊಳ್ಳಬಹುದು. ಆದರೆ 'ಕನ್ನಡಿ' ಬೇರೆಯವರಿಂದ ನಿರೀಕ್ಷಿಸುವ ಪ್ರತಿಕ್ರಿಯೆ. ಜಾಡ್ಯವನ್ನು ಕೊಡವಿಕೊಳ್ಳುವ ಮನಸ್ಸೇ ಇನ್ನೊಂದು ಮನಸ್ಸಿನ ಕನ್ನಡಿಯಾಗಬೇಕು. ಆಗಬಹುದು ಕೂಡ. ನಮ್ಮ ನಡೆ–ನುಡಿ, ಚಿಂತನೆಗಳಲ್ಲಿ ಪಾರದರ್ಶಕತೆಯಿದ್ದಲ್ಲಿ ಎದುರಿಗಿರುವ ಮನಸ್ಸು ತನ್ನಿಂದ ತಾನೇ ಪ್ರತಿಫಲನಗೊಳ್ಳುತ್ತದೆ. ಒಂದು ಕನ್ನಡಿ ಸಾವಿರ ಬಿಂಬಗಳನ್ನು ಸೃಷ್ಟಿಸಬಲ್ಲದು. ಹೀಗೆ ಪ್ರತೀ ಮನಸ್ಸು ಬಿಂಬಗಳನ್ನು ಸೃಷ್ಟಿಸಲು ಸಾಧ್ಯವಾದಾಗ ಕವಿಯ ಆಶಯ ಈಡೇರಬಹುದು. ಈ ಗೋಡೆ, ಕನ್ನಡಿಗಳಾದರೂ ತಲೆಮಾರುಗಳ ಅಂತರದಲ್ಲಿ ಬದಲಾಗುವ ಪ್ರಕ್ರಿಯೆಗಳೆಂಬುದನ್ನು ಜ್ಯೋತಿ ಗುರುಪ್ರಸಾದ್ ಅವರ ಕವಿತೆ ಸ್ಪಷ್ಟಪಡಿಸುತ್ತದೆ.

ನನಗೆ ಇದು ಬರೀಜಡೆ। ಮೂರು ಕಾಲು ಸಿಕ್ಕಿಲ್ಲದೆ ಹೆಣೆದು
ಬಿಚ್ಚದಂತೆ ರಬ್ಬರ್‌ಬ್ಯಾಂಡ್ ಹಾಕಿ। ಹೆಣೆಯುವುದಷ್ಟೇ ಗೊತ್ತು.

.......................................

ನನ್ನ ತಂಗಿಗೆ ಇದು ಕಲೆ!
ಬಿಚ್ಚಿದ ಕೂದಲೆಂದರೆ ಪ್ರಯೋಗಶಾಲೆ;
ಒದ್ದೆ ಕೂದಲಿಗೆ ನೀರು ಜಡೆ ಮದುವೆ ಹೆಣ್ಣಿಗೆ
ಮೊಗ್ಗಿನ ಜಡೆ, ಮುತ್ತಿನ ಜಡೆ। ಬದಲಾವಣೆಗಾಗಿ
ಸ್ಪ್ರಿಂಗ್ ಜಡೆ, ಪರ್ಲ್‌ಪೆಟ್, ತುರುಬು
ಕೊನೆಗೆ ಕತ್ತರಿಸಿದ ಕೂದಲು!

(ಜಡೆ – ಚುಕ್ಕಿ – ಪುಟ ೧೦)

ಒಂದೇ ಸಂಗತಿಯನ್ನು ಎದುರುಗೊಳ್ಳುವ ಎರಡು ಮನಸ್ಥಿತಿಗಳು ಇಲ್ಲಿವೆ. ಒಂದು ಚಾಚೂ ತಪ್ಪದೇ ತಲೆಬಾಗುವ ಸಾಂಪ್ರದಾಯಿಕ ಮನಸ್ಥಿತಿಯಾದರೆ, ಇನ್ನೊಂದು ಅಡೆತಡೆಗಳನ್ನು ನಿವಾರಿಸಿಕೊಂಡು ಹೊಸತನವನ್ನು ತಂದುಕೊಳ್ಳುವ ಮನಸ್ಥಿತಿ. ಆಧುನಿಕವಾದ ಮನಸ್ಸು ಸಮಯ ಬಂದಲ್ಲಿ ಅದರ ಸ್ವರೂಪವನ್ನು ಮಾತ್ರವಲ್ಲ ಮೂಲವನ್ನೇ ಕಿತ್ತೊಗೆಯುವ ಛಾತಿಯುಳ್ಳದ್ದು. ಮೊದಲನೆಯ ಬಗೆಯ ಮನಸ್ಥಿತಿಯಾದರೂ ಬದಲಾವಣೆಯನ್ನು ವಿರೋಧಿಸುವುದಲ್ಲ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಅಥವಾ ಮುನ್ನುಗ್ಗುವ ಸ್ಥೈರ್ಯವಿಲ್ಲದೆ ಹೆದರಿ ಕುಳಿತಿರಬಹುದು. ಆದರೆ ಹೊಸತನವನ್ನು ಬಯಸುವ, ಕಟ್ಟಿಕೊಳ್ಳುವ ಮನಸ್ಥಿತಿ ಅಷ್ಟೊಂದು ನಿರ್ಭಿಡೆಯಿಂದ ಇರಬೇಕಾದರೆ ಸುತ್ತಲಿನಲ್ಲೂ ಏನೋ ಬದಲಾವಣೆಗಳಾಗಿರಲೇಬೇಕು. ಅದು ಕಾನೂನಿನ ರೂಪದಲ್ಲಿರಬಹುದು ಇಲ್ಲವೆ ಒಟ್ಟಾರೆ ಸಮುದಾಯವೇ ತನ್ನನ್ನು ಮಾರ್ಪಡಿಸಿಕೊಳ್ಳುವ ಪ್ರಯತ್ನದಲ್ಲಿರಬಹುದು.

ಹೀಗೆ ಕೌಟುಂಬಿಕ ವಾತಾವರಣಕ್ಕೆ ಸಂಬಂಧಪಟ್ಟ ಪ್ರತಿಮೆಗಳು ಮಹಿಳಾಕಾವ್ಯದಲ್ಲಿ ಪಾರಮ್ಯ ಸಾಧಿಸಿವೆ. ಮತ್ತೆ ಮತ್ತೆ ಹೊಸಹೊಸ ರೂಪದಲ್ಲಿ ಹೊಸಹೊಸ ಅರ್ಥದಲ್ಲಿ ಬಳಸಿಕೊಳ್ಳುವ ಪ್ರಯತ್ನವಂತೂ ನಿರಂತರ ಸಾಗುತ್ತಿದೆ.

ಈ. ಅಮೂರ್ತ ಅನುಭವಗಳನ್ನು ಅಮೂರ್ತ ಪ್ರತಿಮೆಗಳಲ್ಲಿಯೇ ಹಿಡಿದಿಡುವ ಪ್ರಯತ್ನ ಕೂಡ ಮಹಿಳಾಕಾವ್ಯವನ್ನು ಅವಲೋಕಿಸಿದಾಗ ಕಂಡುಬರುತ್ತದೆ. 'ಋಣ'ಸಂದಾಯ ಮಾಡುವುದು ಭಾರತೀಯ ಸನಾತನ ಪರಂಪರೆಯಲ್ಲಿ ನಂಬಿಕೊಂಡು ಬಂದಿರುವ ಒಂದು ಅಮೂರ್ತ ಕಲ್ಪನೆ. ಭಾಗ್ಯ ಜಯಸುದರ್ಶನ ಅವರು ಈ ಕಲ್ಪನೆಯನ್ನು ಹೀಗೆ ಹಿಡಿದಿಡುತ್ತಾರೆ :

ಋಣದ ಮೇಲೆ ನಿಂತ ಬದುಕು
ಬಡ್ಡಿ ಚಕ್ರಬಡ್ಡಿಯ ಚಕ್ರಕ್ಕೆ। ಬಲಿಯಾಗಬೇಕು
ಚಿಗುರು, ಎಲೆ, ಹಸಿರು ಎಲ್ಲವೂ। ವಜವಾಗಬೇಕು

ಬೀಜದೊಳಗೆ ಅಡಗಿ ಕುಳಿತಿದೆ
ಅಸಲು ಮತ್ತೆ ಋಣಸಂದಾಯಕ್ಕೆ

(ಋಣಸಂದಾಯ – ಭಾವಸಿಂಚನ – ಪುಟ ೯೦)

ಈ ಅಮೂರ್ತಭಾವ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ತಳಸಮುದಾಯದ ವರ್ಗವನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಇನ್ನಿಲ್ಲದಂತೆ ದುಡಿಸಿಕೊಂಡಿದೆ. ನಿತ್ರಾಣವನ್ನಾಗಿಸಿದೆ. 'ಋಣಸಂದಾಯ'ವೆಂಬ ಕರ್ಮವನ್ನು ಮೇಲ್ವರ್ಗದ ಜನತೆ ತಮ್ಮ ಹಿತಕ್ಕೆ ಬಳಸಿಕೊಂಡಿದ್ದಾರೆ. ಪ್ರಸ್ತುತ ಕವನ ಈ ಕಲ್ಪನೆಯನ್ನು ಇನ್ನಷ್ಟು ವಿಸ್ತರಿಸಿ ಪ್ರತಿ ಜೀವಿಯೂ ಭೂಮಿಗೆ, ಪ್ರಕೃತಿಗೆ ಸಲ್ಲಿಸಬೇಕಾದ ಋಣಸಂದಾಯದ ಕುರಿತು ಹೇಳುತ್ತಿದೆ. ಭೂಮಿಯನ್ನು ಉಳಿಸಬೇಕಾದರೆ ಇಂದು ಎಲ್ಲರಲ್ಲೂ ಈ ಭಾವನೆ ಇರಲೇಬೇಕಾದ ಅಗತ್ಯವಿದೆ. ಯಾರು ಯಾರಿಗೆ ಋಣಿಯಾಗಿರಬೇಕು! ಪರಸ್ಪರಾವಲಂಬನೆ ಕೂಡ ಪ್ರಕೃತಿಯ ಒಂದು ನಿಯಮ. ಪ್ರತಿಯೊಂದು ಇನ್ನೊಂದನ್ನು ಅವಲಂಬಿಸಿದೆ. ಈ ಅವಲಂಬನೆಯ ಸರಣಿ ಎಲ್ಲೂ ಕಳಚುವಂತಿಲ್ಲ. ಹಾಗೊಮ್ಮೆ ಆದರೆ ಅದು ಪ್ರಕೃತಿಗೆ ವಿರುದ್ಧವಾದದ್ದು. ಜೀವಸಂಕುಲಕ್ಕೆ ಅಪಾಯಕಾರಿಯಾದುದು. ಇದು ಕವಿಯಲ್ಲಿ ಒಂದು ಜಿಜ್ಞಾಸೆಯನ್ನೇ ಹುಟ್ಟುಹಾಕಿದೆ.

ಇದರ ತುದಿ ಎಲ್ಲಿ । ಮೊದಲೆಲ್ಲಿ ದೇವರೇ
ವೃಕ್ಷ ಬೀಜವೆನ್ನುತ್ತದೆ । ಬೀಜವೃಕ್ಷವೆನ್ನುತ್ತದೆ
..................................
ಹಗಲು ರಾತ್ರಿಗೆ ಋಣಿಯಾದರೆ
ರಾತ್ರಿ ಹಗಲಿಗೆ ಋಣಿ ಎನ್ನುತ್ತದೆ.
ಮಾತು ಮೌನಕ್ಕೆ ಋಣಿಯಾಗಿ
ಮೌನ ಮಾತಿಗೆ ಋಣಿ ಎನ್ನುತ್ತದೆ
ಯಾವುದರ ಸೆರಗು ಯಾವುದು ಹಿಡಿದಿದೆಯೋ
ಈ ಜಗತ್ತಿನ ಸೂತ್ರ ಎಲ್ಲಿದೆಯೋ। ಯಾರಿಗೆ ಗೊತ್ತು?

(ಋಣಭಾರ – ಭಾವಸಿಂಚನ – ಪುಟ ೨೭೭)

ಸಚರಾಚರ ಸಂಗತಿಗಳೆಲ್ಲವೂ ಋಣಭಾರದಿಂದ ಪರಸ್ಪರ ವಿನೀತ ಭಾವವನ್ನು ಮೆರೆಯುತ್ತಿದ್ದರೆ ಮನುಷ್ಯ ಮಾತ್ರರು ಪ್ರಕೃತಿಯ ಎಲ್ಲವನ್ನೂ ಸೂರೆಗೊಳ್ಳುವವರು. ಪ್ರಾಕೃತಿಕ ಅಂಶಗಳಿಂದ ಪ್ರಾರಂಭವಾಗುವ ಈ ಜಿಜ್ಞಾಸೆ ಸೃಷ್ಟಿ, ಲಯಗಳತ್ತ ವಿಸ್ತರಿಸುತ್ತದೆ. ತರ್ಕಕ್ಕೆ ನಿಲುಕದ ಈ ವಿಚಾರಸರಣಿ ಪ್ರಶ್ನೆಯಲ್ಲಿಯೇ ಕೊನೆಗೊಳ್ಳುತ್ತದೆ. ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ನಿಟ್ಟಿನಲ್ಲಿ ಮಹಾನ್‌ಪುರುಷರು, ಸಾಧಕರು ಏನೆಲ್ಲಾ ಪರಿಶ್ರಮ ವಹಿಸಿದ್ದಾರೆ. ಆದರೆ ಸಮರ್ಪಕವಾದ ಸಿದ್ಧ ಉತ್ತರವೊಂದು ಲಭ್ಯವಾಗದೆ ಎಲ್ಲವೂ ಪ್ರಶ್ನೆಯಾಗಿಯೇ ಉಳಿದಿರುವುದು ಸೃಷ್ಟಿ–ಸ್ಥಿತಿಗಳ ಕುರಿತು ಮನುಷ್ಯ ಕುತೂಹಲವನ್ನು ಸದಾ ಉಳಿಸುತ್ತವೆ.

'ಪ್ರೀತಿ' ಕೂಡ ಪದಗಳಲ್ಲಿ ಬಿಡಿಸಲಾಗದ ಒಂದು ಮೌಲ್ಯವಾಗಿದೆ. ತಾಯಿ ಮಗುವಿನ ಪ್ರೀತಿ, ಗಂಡು-ಹೆಣ್ಣಿನ ಪ್ರೀತಿ ಹೀಗೆ ಅದು ಯಾವ ಆಯಾಮದ್ದೇ ಇರಲಿ ಅದನ್ನು ವಿವರಿಸುವುದು ಕೂಡಾ ಕಷ್ಟಕರವಾದದ್ದೇ ಆಗಿದೆ. ಈ ಪ್ರೀತಿಯನ್ನು 'ಹಸಿವೆ'ಯ ಪ್ರತಿಮೆಯಲ್ಲಿ ಹಿಡಿದಿಟ್ಟಿದ್ದಾರೆ. ಜ.ನಾ. ತೇಜಶ್ರೀಯವರು.

**ನನ್ನಮ್ಮ ನನಗೆ**
**ನಾನು ನನ್ನ ಮಗಳಿಗೆ ಹಸಿವು;**
**ಈ ತೀರಕ್ಕೆ ಆ ಮೇರೆ। ಆ ಮೇರೆಗೆ ಈ ತೀರ**
**ಸಾಗಲೇಬೇಕು ನಿರಂತರ**
**ಹಸಿವಿನ ಜೀವಜಾತ್ರೆ**

**(ಹಸಿವಿನ ಜೀವಜಾತ್ರೆ – ಉಸ್ರುಬಂಡೆ – ಪುಟ ೧೫)**

'ಪ್ರೀತಿ' ಇಲ್ಲಿ ಹಸಿವಿನ ರೂಪದಲ್ಲಿದೆ. ಅದು ನಮ್ಮನ್ನು ಸದಾ ಜೀವಂತವಾಗಿಡುವ ಶಕ್ತಿ. ಹಾಗಾಗಿಯೇ ನಿರಂತರತೆ ಇರಬೇಕೆನ್ನುವುದು ಕವಿಯ ಆಶಯ. ಹಾಗಾಗಿಯೇ ಇದು ಜೀವಜಾತ್ರೆ, ಜಾತ್ರೆ ಎಲ್ಲರಿಗೂ ಹರ್ಷ ನೀಡುವುದು, ಗೊತ್ತು ಗುರಿಯಿಲ್ಲದೆ ಸುತ್ತುವುದು, ನಮ್ಮನ್ನೇ ನಾವು ಕಳೆದುಕೊಳ್ಳುವ ಭಯವಿರುವುದು. ಈ ಎಲ್ಲ ಮಾನಸಿಕ ತೊಳಲಾಟಗಳಿಗೆ ಹಚ್ಚುವ ಶಕ್ತಿಗಿದೆ. ಇದೇ ಕವಯಿತ್ರಿ ಪ್ರೀತಿಯನ್ನು ಇನ್ನಷ್ಟು ತೀವ್ರವಾಗಿ ಅನುಭವಿಸುವುದು ಹೀಗೆ:

**ಬರೆಯಲು ಕುಳಿತೆ ನಿನ್ನ ನೆಪದಲ್ಲಿ**
**ಎದೆಯುಕ್ಕಿ ಬಂತು, ಕಣ್ಣು ತುಂಬಿ ಬಂತು**
**ಉಸಿರು ತುಂಬಿ ಬಂತು**
**ಲೋಕಲೋಕವೇ ತುಂಬಿ ತಂತು**
**ಆಗಳಿಗೆ ಇಡಿಯಾಗಿ ನನ್ನ ಬದುಕಿದೆ**
**ಕಾಗದದ ತುಂಬೆಲ್ಲ ಬಣ್ಣ ಉಕ್ಕಿ ಬಂತು**

**(ಇರುಳ ಪದ್ಯಗಳು – ಉಸ್ರುಬಂಡೆ – ಪುಟ ೮೭)**

'ಪ್ರೀತಿ'ಯ ನೆನಪು ಪಡೆಯುವ ವಿಸ್ತಾರ ಈ ಕವಿತೆಯ ವಿವರಣೆಯಲ್ಲಿದೆ. ಪ್ರೀತಿಗೂ ಒಂದು ಜಗದ್ವ್ಯಾಪಿ ವಿಸ್ತಾರ ಇದೆ ಎನ್ನುವುದನ್ನು ಕವಿತೆ ಮಂಡಿಸುತ್ತದೆ. ಪ್ರೀತಿಯ ನೆನಪು ಮೊದಲು ವೈಯಕ್ತಿಕವಾಗಿದ್ದು, ದೈಹಿಕ ಕ್ರಿಯೆಗಳಲ್ಲಿ ಕಾಣಿಸಿಕೊಂಡರೆ ಅದರ ಸವಿ ವಿಸ್ತರಿಸುತ್ತಾ ಲೋಕವನ್ನೇ ವ್ಯಾಪಿಸಿ ತನ್ನನ್ನು ತಾನು ಮರೆಯುವಂತೆ ಮಾಡಿದೆ. ಕೇವಲ ಸ್ಮರಣೆಯಿಂದಲೇ ಬದುಕಿನಲ್ಲಿ ಮತ್ತೆ ಬದುಕುವ ಚೈತನ್ಯ ತುಂಬಿದೆ. ಹೀಗೆ ಅಮೂರ್ತವಾದ ಪ್ರೀತಿ, ಮೂರ್ತವಾಗಿ ಬದುಕನ್ನು ಪ್ರಭಾವಿಸುತ್ತಿದೆ.

ಅಸಹಾಯಕ ಜೀವಿ, ಅಸಹಾಯಕ ಸನ್ನಿವೇಶಗಳನ್ನು ಶೋಷಣೆಗೊಳಪಡಿಸುವುದು, ಹಿಂಸಿಸುವುದು ಸರ್ವಸಾಮಾನ್ಯವಾದ ಸಂಗತಿ. ಅಸಹಾಯಕ ಪರಿಸ್ಥಿತಿಯೊಂದರಲ್ಲಿ ಮನಸ್ಸು

ತನ್ನ ಸ್ಥೈರ್ಯವನ್ನು ಉಳಿಸಿಕೊಳ್ಳುವುದೂ ಕೂಡ ಒಂದು ಅಭೌತಿಕ ಶಕ್ತಿಯೇ. ಇಂತಹ ಶಕ್ತಿ ಸವಾಲುಗಳನ್ನು ಮೆಟ್ಟಿ ನಿಲ್ಲುವ ಪರಿಯನ್ನು ದು. ಸರಸ್ವತಿಯವರು ಹೀಗೆ ಕಟ್ಟಿಕೊಡುತ್ತಾರೆ:

**ಕುಟುಕು ಜೀವವ। ಕುಕ್ಕಿ ತಿನ್ನಲು**
**ಎಷ್ಟೊಂದು ರಣಹದ್ದುಗಳು**
**ಬೆಂಗಾಡಿನಲಿ ಹನಿಜೀವ। ಗುದ್ದಾಡಿಕೊಂಡು**
**ಮಿಸುಕಾಡಿದರು ಸಾಕು**
**ಕುಕ್ಕಲು ಸಿದ್ಧವಾಗಿ। ರೆಕ್ಕೆ ಬಿಚ್ಚುತ್ತವೆ**
**ಬೇನೆ ಬಿದ್ದರೇನು। ರಣಹದ್ದುಗಳ ಬೇಲಿ ಇದ್ದರೇನು**
**ಹದ್ದು ಮೀರಿದ। ಜೀವದ ಸದ್ದು**
**(ಜೀವದ ಸದ್ದು– ಜೀವಸಂಪಿಗೆ – ಪುಟ ೪೬)**

'ಹದ್ದು' ಎಂಬ ಪದದ ದ್ವಂದ್ವಾರ್ಥಗಳನ್ನು ಪರಸ್ಪರ ವೈರುದ್ಧ್ಯದ ಕ್ರಿಯೆಗಳಾಗಿ ಬಳಸಿಕೊಳ್ಳಲಾಗಿದೆ. ಒಂದು ಹಿಂಸ್ರಕ ಶಕ್ತಿಯಾದರೆ ಇನ್ನೊಂದು ಅದನ್ನು ಮೀರುವ ಶಕ್ತಿ. 'ಜೀವದ ಸದ್ದು' ಕೂಡ ತನಗಿರುವ ಎಲ್ಲ ಅಡೆತಡೆಗಳನ್ನು ಮೀರುವ ಶಕ್ತಿ. 'ಸಾವು' ಎಂಬ ಅಮೂರ್ತವನ್ನು ಕೂಡ ಮೂರ್ತವಾಗಿ ಹಿಡಿದಿಡುವಾಗ ಕವಿಗಳಿಗೆ ಅಮೂರ್ತ ಪ್ರತಿಮೆಗಳೇ ಸಹಕರಿಸುವುದು. ಇಂತಹ ಸಾವನ್ನು ಡಾ. ವಿನಯಾ ಪ್ರತಿಮೀಕರಿಸುವುದು ಹೀಗೆ:

**ಮೊಲೆ ಬಿಡುವ ಹೊತ್ತಾಯ್ತು, ಏಳು ಮಗುವೆ**
**ಯಾಕೆ ಕಂಗಾಲಾಗಿ ಕನವರಿಸಿ ಅಳುತಿರುವೆ?**
**ಮೊಲೆಯೊಂದಿಗಿನ ನಂಟು ಅನುಕಾಲವೇ?**
**(ಮೊಲೆ ಬಿಡುವ ಹೊತ್ತಾಯ್ತು, ಏಳುಮಗುವೆ – ನೂರು ಗೋರಿಯ ದೀಪ – ಪುಟ ೨೪)**

ತಾಯಿ–ಮಗುವಿನ ನಂಟು ಬೆಸೆದಿರುವುದು ಎದೆಹಾಲು. ಪ್ರಕೃತಿ–ಜೀವಿಗಳ ನಂಟು ಬೆಸೆದಿರುವುದು ಆಯುಷ್ಯ. ಎರಡೂ ಕೂಡ ಯಾವುದೋ ಗಳಿಗೆಯಲ್ಲಿ ತ್ಯಜಿಸಲೇಬೇಕಾದ ನಂಟುಗಳು. ತಾಯಿ–ಪ್ರಕೃತಿಗಳು ಇಲ್ಲಿ ನಿಷ್ಠುರರೆ. ಆದರೆ ಮಗು–ಜೀವಿ ಅದರ ಸವಿಯಲ್ಲೆ ಮುಳುಗಿರುವವರು. ನಂಟು ಕಡಿದುಕೊಳ್ಳಲು ಪರಿತಪಿಸುವವರು. ಈ ಕವನದಲ್ಲಿ ತಾಯಿ ಅನುನಯದಿಂದಲೇ ಸಾವಿನ ಸತ್ಯವನ್ನು ಮನವರಿಕೆ ಮಾಡಿಕೊಡುತ್ತಿದ್ದಾಳೆ. ಸಾವು ಆಕಸ್ಮಿಕವಲ್ಲ. ಅನಿವಾರ್ಯ ಎಂಬ ಸತ್ಯವನ್ನು ತೆರೆದಿಡುತ್ತಿದ್ದಾಳೆ. ಭೂಮಿಯೊಂದಿಗಿನ ನಂಟು ಅನುಗಾಲವಲ್ಲ ಎಂಬ ಕಹಿಸತ್ಯವನ್ನು ಅರಗಿಸಿಕೊಳ್ಳುವುದು ಅಷ್ಟು ಸುಲಭವೂ ಅಲ್ಲ. 'ಸಾವು' ಸಾಯುವವರಿಗೆ ಮಾತ್ರ ನಷ್ಟವಲ್ಲ. ತಾನು ಹಚ್ಚಿಕೊಂಡಿರುವ ಎಲ್ಲ ಸಂಬಂಧಗಳನ್ನೂ ಅದು ಬಾಧಿಸುತ್ತದೆ. ಸಾವಿನ ತೀವ್ರತೆಯನ್ನು ಎದೆ ಹಾಲು ಬಿಡುವ ಮಗುವಿನ ಹಂಬಲದ ತೀವ್ರತೆಯೊಂದಿಗೆ ಸಮೀಕರಿಸಿ ಪರಿಣಾಮಕಾರಿಯಾದ ಪ್ರತಿಮೆಯೊಂದು ಇಲ್ಲಿ ಮೂಡಿಬಂದಿದೆ. ಈ 'ಸಾವು' ಆಧ್ಯಾತ್ಮಿಕ ನೆಲೆಗೆ ಏರುವಾಗ ಗೀತಾ ಹೆಗಡೆ ಹೀಗೆ ಚಿತ್ರಿಸುತ್ತಾರೆ.

ಬದುಕುವುದೇತಕೆ ಗಿಣಿಯೆ? । ತಿನ್ನುವುದಕೆ
ತಿನ್ನುವುದೇತಕೆ ಗಿಣಿಯೆ? । ಹಾಡುವುದಕೆ
ಮರೆತ ನೆನಪಿನ। ಜನರ ಜಾತ್ರೆಯಲಿ
ತೆರೆದ ಬಾಗಿಲ । ಪಂಜರದಿಂದ
ಬೆಕ್ಕುಬಂದು। ಕುತ್ತಿಗೆ ಮುರಿಯುವತನಕ
ರಾಮರಾಮ ಎಂದುಲಿಯುವೆಯ?

(ಅಂತ್ಯದ ಆ(ಹಾ)ದಿಯಲ್ಲಿ – ಅಕ್ಷರ ಚೈತನ್ಯ – ಪುಟ ೧೮)

ಇಲ್ಲಿಯೂ ಕೂಡ ಬದುಕು ಜಾತ್ರೆಯಾಗಿಯೇ ವರ್ಣಿತವಾಗಿದೆ. 'ಗಿಣಿ' ಜೀವವನ್ನು ಪ್ರತಿನಿಧಿಸಿದರೆ 'ಬೆಕ್ಕು' ಸಾವನ್ನು ಪ್ರತಿನಿಧಿಸುವ ಸಾಂಪ್ರದಾಯಿಕ ಸಂಕೇತಗಳೇ ಆಗಿವೆ. 'ರಾಮರಾಮ' ಎಂಬ ಉಲಿ ಇಲ್ಲಿ ಅಗತ್ಯವೋ, ಅನುಕರಣೆಯೋ ಎನ್ನುವುದು ಮಾತ್ರ ಪ್ರಶ್ನಾರ್ಥಕವಾಗಿದೆ. ಉಲಿಯಬೇಕೆಂಬ ಒತ್ತಾಸೆ ಕವಯಿತ್ರಿಗೆ ಇದೆಯೋ, ಇಲ್ಲವೋ ಎಂಬುದನ್ನು ಕೂಡ ಕವಿತೆ ಪ್ರಶ್ನಾರ್ಥಕವಾಗಿಯೇ ಉಳಿಸಿದೆ. ಜನರು ಜಾತ್ರೆಯಲ್ಲಿರುವುದರಿಂದ ಮೈಮರೆಯುವಿಕೆ ಬದುಕಿನ ಅಂತ್ಯವನ್ನು ಮರೆಸಿಬಿಟ್ಟಿದೆ. 'ಕ್ಷಣಿಕತೆ' ಯಾವಾಗಲೂ ಅಥವಾ ಆಗಾಗ ನೆನಪು ಮಾಡಿಕೊಳ್ಳಬೇಕಾದ ಸತ್ಯ ಎಂಬುದನ್ನು ಕವಿತೆ ನೆನಪಿಸುವಂತೆ ಭಾಸವಾಗುತ್ತದೆ.

ಒಂದೇ ಪ್ರತಿಮೆ ಬೇರೆಬೇರೆ ಅರ್ಥ ನಿದರ್ಶನಗಳನ್ನು ಹೊಂದಿರುವ ಉದಾಹರಣೆಗಳೂ ಕೂಡ ಮಹಿಳಾಕಾವ್ಯದಲ್ಲಿ ದೊರೆಯುತ್ತದೆ. ಅಂತಹ 'ಅಮೂರ್ತ' ಪ್ರತಿಮೆಗೆ ಉದಾಹರಣೆಯಾಗಿ 'ಕತ್ತಲು' ಎಂಬ ಪರಿಭಾಷೆ ಬಳಕೆಯಾಗಿರುವುದನ್ನು ಎತ್ತಿಕೊಳ್ಳಬಹುದು. ಸಾಮಾನ್ಯವಾಗಿ ಕತ್ತಲು ಅಜ್ಞಾನದ, ಬಂಧನದ ಪ್ರತೀಕವಾಗಿ ಪ್ರಸಿದ್ಧವಾಗಿದೆ. ವೈದೇಹಿ ಸೇರಿದಂತೆ ಅನೇಕರ ಕವನಗಳಲ್ಲಿ 'ಸಾವ'ನ್ನು ಪ್ರತಿನಿಧಿಸುತ್ತದೆ. ಮಮತಾ ಜಿ. ಸಾಗರ ಅವರು 'ಇವಳು ಕತ್ತಲ ಕನ್ಯೆ' ಎನ್ನುವಾಗ ಅದು ವೇಶ್ಯಾವಾಟಿಕೆಯ ಜಗತ್ತು ತೆರೆದುಕೊಳ್ಳುವ ಬದುಕಿನ ಕರಾಳ ಮುಖಗಳನ್ನು ಪ್ರತಿಮಿಸುತ್ತದೆ. ಡಾ. ವಿನಯಾ ಅವರಲ್ಲಿ ಕತ್ತಲು ವಿರಾಮದ, ಕನಸುಗಳು ಗರಿಗೆದರಿಕೊಳ್ಳುವ ಆಯಾಮವಾಗಿ ಕಾಣಿಸಿಕೊಳ್ಳುತ್ತದೆ.

ಪ್ರೀತಿಸುತ್ತೇನೆ ಕತ್ತಲನ್ನು
ಕತ್ತಲಲ್ಲಿ ಹೊಳೆವ ನನ್ನವನ ಕಣ್ಣನ್ನು
'ಕತ್ತಲೆಂದರೆ ಗುಮ್ಮ
ಹರಿದು ಬೀಳುತ್ತದೆ ಆಕಾಶ ಮಲಗೆ ಸುಮ್ಮ'
..............................
ಬೆಳಕಿನ ರೇಖೆಗಳು ಕರೆವ, ಸಾರುವ
ಸವಾಲುಗಳ ನಡುವೆ

**ಕತ್ತಲೆಯ ತೆಪ್ಪದಲಿ ತೊಯ್ದು । ಪ್ರೀತಿ ಮುತ್ತುಗಳ ಹೆಕ್ಕುತ್ತ**
**ಹೇಗೆ ಪ್ರೀತಿಸದಿರಲಿ ಕತ್ತಲೆಯ?**

**(ಹೇಗೆ ಪ್ರೀತಿಸದಿರಲಿ ಕತ್ತಲೆಯ – ಬಾಯಾರಿಕೆ – ಪುಟ ೫)**

ಇಲ್ಲಿ ಹಗಲೆಲ್ಲಾ ಹಾರಾಡಿ, ಸವಾಲುಗಳ ನಡುವೆ ಜೀಕುವ ಮನಸ್ಸಿಗೆ ಬಿಡುವು ಕೊಡುವ ಗಳಿಗೆ ಕತ್ತಲು, ಕತ್ತಲೆಗೆ ಆಹ್ವಾನವಿದೆ. ಲೋಕಗ್ರಹಿಕೆಯಲ್ಲಿ ಯಾವುದು ಅಹಿತವೋ ಅದು ಹಿತವಾಗುವ ಪರಿ ಇಲ್ಲಿ ತೆರೆದುಕೊಂಡಿದ್ದರೆ, ತಾನು ಮುಟ್ಟಬಾರದ್ದು, ಹೇಳಬಾರದ್ದು ಎಂಬ ನಿಷೇಧಗಳು ಕೇವಲ 'ಗುಮ್ಮ'ದ ಕಲ್ಪನೆಯಷ್ಟೆ ನೈಜತೆಗೆ ದೂರವಾದವುಗಳು. 'ಗುಮ್ಮ'ವೆಂಬ ಅವಾಸ್ತವ ಸದಾ ಆತಂಕ, ಭಯದಲ್ಲಿರಿಸುವ ಉಪಾಯ. ಯಾವುದೆಲ್ಲ ಮಹಿಳೆಗೆ 'ಗುಮ್ಮ'ವಾಗಿ ತೋರಲ್ಪಟ್ಟಿದೆಯೋ ಅದರಲ್ಲಿ ಪ್ರೀತಿ ಈ ಕವಯಿತ್ರಿಗೆ. ಹೀಗೆ ಯೋಚನಾಲಹರಿ ಬಿಚ್ಚಿಕೊಳ್ಳುವ ಅವಕಾಶ ಈ ಕತ್ತಲು.

ಗಿರಿಜಾ ಶಾಸ್ತ್ರಿಯವರ ಕವನಗಳಲ್ಲಿ ಕತ್ತಲು ವಿವಿಧ ಆಯಾಮಗಳಲ್ಲಿ ಬಳಕೆಯಾಗಿದೆ. ಅವರ 'ಪುಸ್ತಕ ಮತ್ತು ನವಿಲುಗರಿ' ಕವನ ಸಂಕಲನಕ್ಕೆ ಮುನ್ನುಡಿ ಬರೆದಿರುವ ಡಿ. ರಾಜಶೇಖರ ಅವರು ಆ ವಿಭಿನ್ನ ಆಯಾಮಗಳನ್ನು ಗುರುತಿಸಿ ವಿವರಿಸಿದ್ದಾರೆ.

**ಹಾಳು ಬೆಕ್ಕು । ಅಡುಗೆ ಮನೆ ಚಿಲಕ**
**ಬಾಗಿಲು ಬಡಿದು ಬಂದಾಗಲೂ**
**ಗೊತ್ತೇ ಆಗಲಿಲ್ಲ. ಹೊಂಚುಹಾಕುತ್ತಾ**
**ಒಳಗೇ ಅವಿತುಕೂತದ್ದು.**

......................

**ಕತ್ತಲು**
**ತನ್ನೆಲ್ಲ ಪೌರುಷವ ಬಸಿದು ಬೆಳಗಿನವರೆಗೆ**
**ಗುರುತೇ ಸಿಗದಂತೆ ಓಡಿಹೋದಾಗ। ಕಿಟಕಿಯೆಡೆಗೆ**
**ಅವಳು ಸಿಹಿ ನಿದ್ದೆ ಚಪ್ಪರಿಸುತ್ತಿದ್ದಳು**

**('ಅವಳು ಮತ್ತು ಬೆಕ್ಕು' – ಪುಸ್ತಕ ಮತ್ತು ನವಿಲುಗರಿ – ಪುಟ ೩೮)**

ರಾಜಕುಮಾರನ ಕನಸಿನಲ್ಲಿರುವ ಹುಡುಗಿ. ಅವಳ ಮಾನಸಿಕ ಗೈರುಹಾಜರಿಯಲ್ಲಿ ತನ್ನ ಕಾರ್ಯ ಸಾಧಿಸಿಕೊಳ್ಳುವ ಕಳ್ಳಬೆಕ್ಕು. ಭವಿಷ್ಯದಲ್ಲಿ ಎದುರಾಗಲಿರುವ ಕರಾಳತೆಯನ್ನು ಕತ್ತಲು ಸಂಕೇತಿಸಿರುವಂತಿದೆ. ಸಮಯಸಾಧಕ ಬೆಕ್ಕು ಕಿಟಕಿಯ ಅಂದರೆ ಕಳ್ಳದಾರಿಯ ಮೂಲಕ ಜಾರಿಕೊಂಡಿದೆ. ಆದರೆ ಸಿಹಿನಿದ್ದೆಯನ್ನು ಚಪ್ಪರಿಸುತ್ತಿರುವ ಹುಡುಗಿ ಕತ್ತಲೆಯ ಕಣ್ಣುಮುಚ್ಚಾಲೆಯ ಪರಿಣಾಮವನ್ನು ಎದುರಿಸಬೇಕಾದ ಪರಿವೆಯಿಲ್ಲದೆ ಇದ್ದಾಳೆ. ಹೀಗೆ ಅಪಾಯ, ಕರಾಳತೆಗಳ ಜೊತೆ ಜೊತೆಗೆ ಕತ್ತಲು ಆಕೆಯ ಕನಸಿನ ಆವರಣವೂ ಆಗಿದೆ.

ಕಿಟಕಿಯಾಚೆ ಕತ್ತಲೆಗೆ ನಿಂತ। ಕಪ್ಪನೆ ಮರ

ಮೇಲೊಂದು ಒಂಟಿ ನಕ್ಷತ್ರ

..............................

ಒಂಟಿಮರದ ಮೇಲೆ ಮತ್ತೆ ಮತ್ತೆ

ದೂರನಿಂತು ಕಣ್ಣು ಮಿಟುಕಿಸಿತಲ್ಲಾ

ಯಾರು ನೋಡಿದರು.......

(ವಿಸ್ಮಯ – ಅದೇ ಕೃತಿ – ಪುಟ ೪೯)

ಬದುಕಿನ ನಿಗೂಢತೆಗಳ, ಉತ್ತರಗಳಿಲ್ಲದ ಎಷ್ಟೋ ಪ್ರಶ್ನೆಗಳ ಪ್ರತೀಕವಾಗಿಯೂ ಕತ್ತಲು ಬಳಕೆಗೊಂಡಿರುವುದು ಹೀಗೆ.

## ೫.೩ ರೂಪಕಗಳ ನೆಲೆ

ಕಾವ್ಯವನ್ನು ಸೂಚ್ಯಗೊಳಿಸಲು ಅನಾದಿಯಿಂದಲೂ ಬಳಸುತ್ತಿರುವ ಭಾಷಾವೈಶಿಷ್ಟ್ಯಗಳಲ್ಲಿ ರೂಪಕಗಳೂ ಒಂದು ಬಗೆಯಾಗಿವೆ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅರ್ಥಾಲಂಕಾರ ಪ್ರಕಾರವಾಗಿರುವ 'ರೂಪಕ' ಮಹಿಳಾಕಾವ್ಯ ಸಂದರ್ಭದಲ್ಲಿ ಅವಿನಾಭಾವ ಸಂಬಂಧದೊಂದಿಗೆ ಬಳಕೆಯಾಗಿದೆ. 'ವಿಮರ್ಶೆಯ ಪರಿಭಾಷೆ'ಯಲ್ಲಿ ನೀಡಿರುವ ರೂಪಕದ ವಿವರಣೆಯನ್ನು ಈ ಮುಂದಿನಂತೆ ಸಂಗ್ರಹಿಸಬಹುದಾಗಿದೆ.

"ಎರಡು ವಸ್ತುಗಳ ನಡುವೆ ಸಾದೃಶ್ಯವನ್ನು ಹೇಳುವಾಗ ಕೆಲವು ಅಂಶಗಳನ್ನು ಮಾತ್ರ ಹೋಲಿಸದೇ ಎರಡನ್ನೂ ಒಂದಕ್ಕೊಂದು ಸಮಾನವೆಂದು ಹೇಳುವುದು ರೂಪಕವೆನಿಸುತ್ತದೆ."[೧೦]

ಆಧುನಿಕ ಕನ್ನಡ ವಿಮರ್ಶೆಯಲ್ಲಿ ರೂಪಕ ಎಂಬುದು 'ಮೆಟಫರ್'ಗೆ ಸಮಾನಾರ್ಥಕವಾಗಿ ಬಳಕೆಯಾಗುತ್ತಿದೆ. 'ಪರಸ್ಪರ ಸಹಕಾರಿಯಾದ ಅರ್ಥಗಳ ಬೆಸುಗೆ' ಗ್ರಹಿಕೆಯ ಶೀಘ್ರ ಸಾಕ್ಷಾತ್ಕಾರ ಒಂದು ನಿರ್ದಿಷ್ಟ ಭಾವನೆ ಅಥವಾ ವಸ್ತುವನ್ನು ಕುರಿತ ಗ್ರಹೀತಾರ್ಥವಿರುವ ಪದವನ್ನು, ಸಾಮ್ಯವನ್ನು ಸೂಚಿಸುವಂತೆ ಮತ್ತೊಂದು ವಸ್ತು ಅಥವಾ ಭಾವದ ಬದಲಿಗೆ ಬಳಸುವುದು ಎಂದು ಮುಂತಾಗಿ ಆಧುನಿಕ ವಿಮರ್ಶೆಯಲ್ಲಿ ರೂಪಕದ ಅರ್ಥವಿದೆ"[೧೧]

"ರೂಪಕವೂ ಉಪಮೆಯಂತೆಯೇ ಒಂದು ಹೋಲಿಕೆಯ ವಿಧಾನ. ಉಪಮೆಯಲ್ಲಿ ಉಪಮಾನ ಮತ್ತು ಉಪಮೇಯ ಇರುವಂತೆ ರೂಪಕದಲ್ಲೂ ಎರಡೂ ಪ್ರತ್ಯೇಕ ಅಂಶಗಳನ್ನು ಗುರುತಿಸಬಹುದು."[೧೨]

ಸ್ತ್ರೀವಾದಿ ಅಧ್ಯಯನಗಳು ಹೆಣ್ಣಿನ ಜೀವನಕ್ರಮವೇ ಅದ್ಭುತ ರೂಪಕ ಎಂದು ನಿರೂಪಿಸುತ್ತವೆ. ತಾದಾತ್ಮ್ಯತೆ ಇಲ್ಲಿನ ಸಮಾನ ಗುಣ. ಆಧುನಿಕ ಮಹಿಳಾಕಾವ್ಯವು ರೂಪಕಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಳಸಿಕೊಂಡಿರುತ್ತದೆ. ಪುರುಷಪ್ರಧಾನ ಸಂಸ್ಕೃತಿಯು ಹೆಣ್ಣಿನ ಮೇಲೆ ಹೊಂದಿರುವ ಪಾರಮ್ಯವು ಉಸಿರುಗಟ್ಟಿಸುವ ಮೂಲಕ ಎಲ್ಲ ಬಗೆಯ ನಿಯಂತ್ರಣಗಳನ್ನೂ ಹೇರುತ್ತದೆ. ಇದಕ್ಕೆ

ಕಾವ್ಯವೊಂದು ತೀವ್ರಗತವಾಗಿ ಸ್ಪಂದಿಸಿದಾಗ, ಎದುರಿಗಿರುವ ಎದುರಾಳಿಯನ್ನು ನೇರವಾಗಿ ನಿಂದಿಸದೆ, ತನ್ನ ಅಸ್ಮಿತೆಯನ್ನು, ಶಕ್ತಿಯನ್ನು, ಸಂವೇದನೆಗಳನ್ನು ನಿರೂಪಿಸಲು ರೂಪಕವೇ ಹೆಚ್ಚು ಸೂಕ್ತ ಎಂದು ಮಹಿಳಾಕಾವ್ಯ ಪರಂಪರೆ ಕಂಡುಕೊಂಡಂತಿದೆ. ಎರಡನೇ ದರ್ಜೆಯ ಲಿಂಗವಾಗಿಸಿ ಹೆಣ್ಣಿನ ಅಸ್ಮಿತೆಯ ಮೇಲೆ ತನ್ನ ಪಾರಮ್ಯವನ್ನು ಸಾಧಿಸುವ ಪುರುಷಪ್ರಧಾನ ಸಂಸ್ಕೃತಿಯ ಕುರಿತು ಹೇಳುವಾಗ ಪ್ರತಿಭಾ ನಂದಕುಮಾರ್ ಅವರು ರೂಪಕವನ್ನು ಬಳಸುವುದು ಹೀಗೆ :

**ನನ್ನ ಜೀವನ ಎಂದರೆ**

**ಗಂಟೆಗಟ್ಟಲೆ ಕೂತು ಸುಂದರವಾಗಿ**

**ಬಿಡಿಸಿದ್ದ ವರ್ಣಚಿತ್ರದ ಮೇಲೆ**

**ನನ್ನವರೆನಿಸಿಕೊಂಡವರು**

**ಥಟ್ಟನೇ ಚೆಲ್ಲಿದ ಕಪ್ಪುಮಸಿ**

**(ಗುಟ್ಟು – ಪ್ರತಿಭಾ ನಂದಕುಮಾರ್ ಅವರ ಆಯ್ದ ಕವನಗಳು – ಪುಟ ೭)**

ಹೆಣ್ಣೊಬ್ಬಳ 'ಜೀವನಕ್ರಮ'ದ ಮೇಲೆ ತನ್ನವೆನ್ನಿಸಿಕೊಂಡ ಸಂಬಂಧಗಳ ಪ್ರಭಾವವನ್ನು ಕವಯಿತ್ರಿ ಹೀಗೆ ಕಟ್ಟಿಕೊಡುತ್ತಿದ್ದಾರೆ. ವರ್ಷಾನುಗಟ್ಟಲೆ ಕಂಡ ಕನಸುಗಳನ್ನೆಲ್ಲ ಮದುವೆಯೋ, ಕುಟುಂಬವೋ ಎಂಬ ಒಂದು ಬಂಧ ಮೂಲ ರೂಪವನ್ನೇ ಹೊಸಕಿ ಹಾಕಿಬಿಡುವ ದುರಂತ ಇಲ್ಲಿದೆ. ಮಸಿ ಬಿದ್ದ ಚಿತ್ರ ಮತ್ತೆ ಮೂಲರೂಪದಲ್ಲಿ ಸಿಗುವುದು ಎಷ್ಟು ದುಸ್ತರವೋ, ಪಿತೃಪ್ರಧಾನ ಸಂಸ್ಕೃತಿಯ ಕಪಿಮುಷ್ಟಿಗೆ ಸಿಲುಕಿದ ಹೆಣ್ಣಿನ ಜೀವನ ಕೂಡ ಹಾಗೇ ಮೃದು ಮಧುರವಾದ ಕನಸುಗಳಿಗೆ ಎರವಾಗುವುದೆಂಬುದು ಇಲ್ಲಿ ವಿದಿತ. ಹೆಣ್ಣಿನ ಅಸ್ಮಿತೆಯನ್ನು ಇನ್ನೊಂದು ಬಗೆಯ ರೂಪಕದಲ್ಲಿ ಎಚ್.ಎಲ್. ಪುಷ್ಪ ಅವರು ಹೀಗೆ ಹಿಡಿದಿಡುತ್ತಾರೆ :

**ಅಪ್ಪಳಿಸುವ ಅಲೆ ಎದುರು**

**ವಿಳಾಸವಿಲ್ಲದ ನಾನು ತಬ್ಬಿಬ್ಬಾಗಿದ್ದೇನೆ**

**ಮಗಳು, ಹೆಂಡತಿ ತಾಯಿ ನಾನಲ್ಲ ಶಿವನೇ**

**ಕಳೆದುಹೋಗಲಿಕ್ಕೆಂದೇ ಬಂದ**

**ಮಾರ್ದನಿಯಿಲ್ಲದ ಪುಟ್ಟ ಹಕ್ಕಿ**

**(ಉಗಾದಿಯ ಪುಟ್ಟಹಕ್ಕಿ ಹಾಗೂ ಒಗರು – ಲೋಹದ ಕಣ್ಣು – ಪುಟ ೪೩)**

ಇಲ್ಲಿ ಹೆಣ್ಣು ವಿಳಾಸವಿಲ್ಲದ, ಮಾರ್ದನಿಯಿಲ್ಲದ ಪುಟ್ಟಹಕ್ಕಿ. ಹೆಣ್ಣಿನ ವಿಳಾಸ ಆಗಾಗ ಬದಲಾಗುತ್ತಿರುತ್ತದೆ. ತಂದೆ, ಗಂಡ, ಮಕ್ಕಳು ಹೀಗೆ ವಿವಿಧ ಅವಸ್ಥಾಂತರಗಳಲ್ಲಿ ಹಂಚಿಹೋಗಿರುತ್ತದೆ. ಏನೆಲ್ಲವೂ ಆಗಿ, ಏನೆಂದೂ ಗುರುತಿಸಿಕೊಳ್ಳಲಾಗದ ಅನಾಥಪ್ರಜ್ಞೆ ಹೆಣ್ಣಿನದು. ಯಾರಿಗೋ ಮಗಳಾಗಿ, ಇನ್ಯಾರಿಗೋ ಹೆಂಡತಿಯಾಗಿ, ಮತ್ಯಾರಿಗೋ ತಾಯಿಯಾಗಿ ಸದಾ ಬದಲಾಗುತ್ತಿರುವ

ಈ ಅಸ್ಮಿತೆಯನ್ನೇ ಆಕೆ ನಿರಾಕರಿಸುತ್ತಾಳೆ. ತನ್ನ ಸಂಕಷ್ಟವನ್ನಾದರೂ ಆಕೆ ತೋಡಿಕೊಳ್ಳುತ್ತಿರುವುದು ಶಿವನಲ್ಲಿ. 'ಮಾರ್ದನಿಯಿಲ್ಲದ ಪುಟ್ಟಹಕ್ಕಿ' ತಾನೆಂದು ಈ ಕವಿ ಹೇಳುಕೊಳ್ಳುತ್ತಿದ್ದರೆ ದು. ಸರಸ್ವತಿಯವರು ಇನ್ನೊಂದು ಹೆಜ್ಜೆ ಮುಂದೆ ಹೋಗಿ 'ತಬ್ಬಲಿಗಳ ಜೋಗುಳ' ಎಂದು ಹೆಣ್ಣಿನ ಅಸ್ಮಿತೆಯನ್ನು ಎತ್ತರಿಸುತ್ತಾರೆ.

**ನಾ ಗಂಡನ ಹೆಂಡತಿಯಲ್ಲ**
**ಪ್ರಿಯನ ಪ್ರೇಯಸಿಯಲ್ಲ**
**ಬಸಿರಿನ ತಾಯಲ್ಲ ಜೀವಕ್ಕೆ ಜೀವ**
**ತಬ್ಬಲಿಗಳ ಜೋಗುಳ**

**('ತಬ್ಬಲಿಗಳ ಜೋಗುಳ' – ಜೀವಸಂಪಿಗೆ – ಪುಟ ೧)**

ವಿಳಾಸವನ್ನು, ಸಂಬಂಧಗಳನ್ನು ನಿರಾಕರಿಸಿದ ಮೇಲೆ ತಾನಾಗುವುದೂ ಕೂಡ ತಬ್ಬಲಿಯೇ. ಇಲ್ಲಿ ಅನಾಥಪ್ರಜ್ಞೆಯಿಂದ ಕೊರಗುವಿಕೆಯಿಲ್ಲ. ಬದಲಿಗೆ ತನ್ನಂತೆಯೇ ತಬ್ಬಲಿಯಾದ ಜೀವಗಳಿಗೆ ಜೋಗುಳವಾಗುವ ಬಯಕೆಯಿದೆ. ಪ್ರಾಕೃತಿಕವಾಗಿ ಹೆಣ್ಣು ಸಲಹುವವಳೆ! ಯಾವುದೇ ರೂಪದಲ್ಲಾದರೂ ಅದು ಮತ್ತೆ ಮತ್ತೆ ಪ್ರಕಟಗೊಳ್ಳುವುದೂ ಕೂಡ ಇಲ್ಲಿ ಎದ್ದು ಕಾಣುವ ಸತ್ಯ. ಹೆಣ್ಣು–ಗಂಡಿನ ನಡುವಿನ ಸಂವಹನ ಸಮಸ್ಯೆಯನ್ನು ಹಾಗೆಯೇ ಹೆಣ್ಣಿನ ಸಂವೇದನೆಗಳಿಗೆ ಅನ್ಯಲಿಂಗವೊಂದು ತೋರುವ ಅನಾದರಣೆಯನ್ನು ವೈದೇಹಿಯವರು ಹೀಗೆ ಹೇಳುತ್ತಾರೆ.

**ಅವಳೆಂದದ್ದು – ಹಸಿವೆ ಮತ್ತು ಬಾಯಾರಿಕೆ**
**ಆತನೆಂದ–ಚೆನ್ನಾಗಿ ಉಣ್ಣು, ಕುಡಿ**
**ಆಕೆ ಅತ್ತಳು ಆಗ ಆತನಕ್ಕ!**

**(ಆಕೆ ಆತ ಭಾಷೆ – ಪಾರಿಜಾತ – ಪುಟ ೭)**

'ಹಸಿವು' ಕೇವಲ ದೇಹಸಬಂಧಿ ಮಾತ್ರವಲ್ಲ. ಭಾವಸಂಬಂಧಿಯೂ ಹೌದು. ಈ ಭಾವಸಂಬಂಧಿ ತಹತಹಿಕೆಯನ್ನು ಪಿತೃಪ್ರಧಾನ ವ್ಯವಸ್ಥೆಯ ಗಂಡಾಳ್ತನ ಅರ್ಥೈಸಿಕೊಳ್ಳದ ಹಾಗೆಯೇ ಅದನ್ನು ಅರ್ಥೈಸಲು ತಾನು ಪಡುವ ಶ್ರಮವನ್ನು ವ್ಯರ್ಥಗೊಳಿಸುವ ವ್ಯಂಗ್ಯವನ್ನು ಕೂಡ ಕವಿತೆ ಒಳಗೊಳ್ಳುತ್ತದೆ. ಹಸಿವು ಎಂಬ ರೂಪಕ ರೂಪ ಹಾಸನ ಅವರಲ್ಲಿ ಹಲವು ಬಗೆಯ ಅರ್ಥಸಾಧ್ಯತೆಗಳೊಂದಿಗೆ ಬಳಕೆಯಾಗಿದೆ.

**ತಿಂದು ಮುಗಿಸುವುದಲ್ಲ। ಈ ರೊಟ್ಟಿ**
**ತಿಂದರೆ ತೀರುವುದಿಲ್ಲ**
**ತಿನ್ನದೆಯೂ ವಿಧಿಯಿಲ್ಲ**
**ಅನನ್ಯರೊಟ್ಟಿ। ಅಕ್ಷೋಹಿಣಿ ಹಸಿವು**

**(ಗಳಿಗೆ ಬಟ್ಟಲ ತಿರುವುಗಳಲ್ಲಿ – ಪುಟ ೩)**

ಬಡವ–ಬಲ್ಲಿದ, ಮೇಲು–ಕೀಳು, ಶೋಷಕ–ಶೋಷಿತರೆಂಬ ವೈರುಧ್ಯಗಳನ್ನು ಹಸಿವು ರೊಟ್ಟಿಗಳ ರೂಪಕದಲ್ಲಿ ಹಿಡಿದಿಡಲಾಗಿದೆ. ಇಲ್ಲಿ ರೊಟ್ಟಿ ಮತ್ತು ಹಸಿವಿನ ಅನನ್ಯತೆ ಮತ್ತು ಅಪಾರತೆಗಳನ್ನು ಗಳಿಗೆ ಬಟ್ಟಲಿನಲ್ಲಿ ಬಂಧಿಸಲಾಗುವುದಿಲ್ಲ. ಜೀವಜಗತ್ತಿನಲ್ಲಿ ಅವುಗಳ ಪೋಷಣೆ–ಅಪೋಷಣೆಯ ಆವರ್ತನ ನಿರಂತರ ಎಂಬುದಿಲ್ಲಿ ವಿದಿತ.

ಪೌರಾಣಿಕ ಪಾತ್ರಗಳು ಹೆಣ್ಣಿನ ಗುಣಗಳ ಪ್ರತಿನಿಧಿಯಾಗಿ ರೂಪಕಗಳಾಗಿದ್ದರೆ ಸಾಮಾನ್ಯ ವಸ್ತುಗಳೂ ಕೂಡ ಗಂಭೀರ ವಿಷಯಗಳ ರೂಪಕಗಳಾಗಿ ಬಳಕೆಯಾಗಿವೆ. ಇಂತಹ ಸಾಮಾನ್ಯ ಸಂಗತಿಗಳಲ್ಲಿ ಅಡುಗೆಮನೆಗೆ ಸಂಬಂಧಪಟ್ಟ ಅನೇಕ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ. 'ತಿಳಿಸಾರು', 'ಸಾಸಿವೆ', ಬೆಣ್ಣೆಕಾಯಿಸುವ ಪ್ರಕ್ರಿಯೆಯನ್ನೂ ಒಳಗೊಂಡು ಬಾಗಿಲು, ಹೊಸ್ತಿಲು, ಹಸಿಮಣ್ಣು, ನೀರತೇರು, ಆಮೆಯ ನಿಧಾನ ನಡಿಗೆ ಹೀಗೆ ರೂಪಕ ಸಾಮಗ್ರಿಯ ಪಟ್ಟಿ ಬೆಳೆಯುತ್ತದೆ.

ರೂಪ ಹಾಸನ ಅವರ ಕವನಗಳಲ್ಲಿ ಎರಡು ಸಂಗತಿಗಳು ಸದಾ ಮುಖಾಮುಖಿಯಾಗುತ್ತವೆ. ನದಿ–ಕಡಲು, ಕತ್ತಲು–ಬೆಳಕು, ಅನ್ನ ರೊಟ್ಟಿ–ಹಸಿವು, ಕಡಲು–ದಡ ಹೀಗೆ ಇರುವ ಈ ಎರಡು ಸಂಗತಿಗಳು ಸಾಮಾಜಿಕ, ಆರ್ಥಿಕ ವಿಂಗಡನೆಗಳಾಗಿಯೂ, ಸೃಷ್ಟಿಯ ಮೂಲಕರ್ತೃಗಳಾಗಿರುವ ಹೆಣ್ಣು–ಗಂಡುಗಳಾಗಿಯೂ ಕಾಣಿಸಿಕೊಳ್ಳುತ್ತವೆ. ಪಿತೃಪ್ರಧಾನ ವ್ಯವಸ್ಥೆಯ ಬಿಗಿಬಂಧನಗಳ ಮೀರುವಿಕೆ ಮನಸ್ಸಿನೊಳಗೆ ಸದಾ ಪುಟಿಯುತ್ತಿರುವ ಚೈತನ್ಯವಾಗಿ ಕಾಣಿಸಿಕೊಳ್ಳುತ್ತದೆ.

**ಹೀಗೆ ಒಮ್ಮೊಮ್ಮೆಯಾದರೂ । ಎಲ್ಲ ಮಿತಿಗಳ ಮೀರಿ**
**ನನ್ನೆದೆಯ ದಡಕೆ। ಅಪ್ಪಳಿಸು ಬಾ ಕಡಲೇ**
**ನಿನ್ನ ಉಪ್ಪುಪ್ಪು ನೀರಿನಲಿ। ಗಾಢ ಬಣ್ಣಗಳ ನಾಡಿ**
**ಈ ತಟಸ್ಥ ಬದುಕಿಗೆರಚಿಕೊಳ್ಳುತ್ತೇನೆ**
**ಕೆಲಕ್ಷಣಗಳಾದರೂ ನಾನು ಕಡಲಾಗುತ್ತೇನೆ**

**(ಕಡಲೇ ಒಮ್ಮೊಮ್ಮೆಯಾದರೂ ಬಾ – ಬಾಗಿಲಾಚೆಯ ಮೌನ – ಪುಟ ೨೨)**

ಕಡಲಿನ ವಿಸ್ತಾರ, ಆಳ ಎರಡೂ ಅಪಾರವಾದುದು. ಅದು ಎಲ್ಲೆ ಮೀರಿದರೆ ಮತ್ತೆಲ್ಲವೂ ಅಸ್ತವ್ಯಸ್ತ. ಆದರೆ ಶತಶತಮಾನಗಳ ಕೊಳಕು, ಲವಣ ಕರಗಿ ತನ್ನ ಮಧುರತೆಯನ್ನು ಕಳೆದುಕೊಂಡಿದೆ. ತನ್ನೊಳಗೆ ತಾನು ಲೀನವಾಗಿರುವ ಕಡಲಿಗೂ ಹೊಸತನ ಬೇಕಾಗಿದೆ. ಹಾಗೆಯೇ ದಡ ಕೂಡ ತನ್ನ ಸ್ಪರ್ಶಸವಿಯನ್ನು ಕಡಲಿಗೆ ಧಾರೆಯೆರೆಯಬೇಕೆಂದಿದೆ. ಹೀಗೆ ಸೃಷ್ಟಿಯಲ್ಲಿ ಗಂಡು, ಹೆಣ್ಣುಗಳು ಪರಸ್ಪರ ಹಂಚಿಕೊಂಡು ಬಾಳಬೇಕಾಗಿದೆ. ಬೇರೆಯವರಿಗೆ ಆಶ್ರಯ ನೀಡಿ ತಾನು ದೂರ ನಿಲ್ಲಬೇಕಾದ ಹೆಣ್ಣಿನ ಗುಣವನ್ನೇ ಇಲ್ಲಿನ ದಡ ಪ್ರತಿನಿಧಿಸುತ್ತಿದೆ. ಒಂದೇ ರೂಪಕ ಸಂದರ್ಭಾನುಸಾರಿಯಾಗಿ ಬದಲಾಗುವುದನ್ನೂ ಸಹ ಕಾಣಬಹುದು. ಅವರದೇ ಇನ್ನೊಂದು ಕವಿತೆಯಲ್ಲಿ ಕಡಲು ಹೆಣ್ಣಿನ ಅಗಾಧತೆಯನ್ನು ಪ್ರತಿನಿಧಿಸುತ್ತದೆ.

**ಏನಿದೆ ಇಲ್ಲಿ! ಬರೀ ರಸಹೀರಿ ಒಗೆದಕಸ**
**ಬೇಡೆಂದು ನಾನೇ ಒತ್ತರಿಸಿದ। ಒಡೆದ ಖಾಲಿ ಕಪ್ಪೆಚಿಪ್ಪು!**

**ಇದ ನೋಡಲು ತೀರಕೆ। ಬಂದನೇ ಬೆಪ್ಪ?**

**ನನ್ನೊಳಗಿನೊಳ ಕೋಣೆಯಲಿ। ಅದೆಷ್ಟು ಹವಳ ಮುತ್ತು!**

**(ಬೆಪ್ಪು ಕಡಲು – ಬಾಗಿಲಾಚೆಯ ಮೌನ – ಪುಟ ೨೩)**

ತನಗೆ ಲಭ್ಯವಾಗದಿರುವ ಕುರಿತು ಜೀವಿಸಹಜವಾದ ಕುತೂಹಲ ಇದ್ದೇ ಇರುತ್ತದೆ. 'ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ' ಎನ್ನುವಂತೆ ಹತ್ತಿರ ಹೋದಾಗಲೇ ಸತ್ಯ ಅರಿವಾಗುವುದು. ಹೊರಗಿನ ವ್ಯಾಮೋಹ ಒಮ್ಮೊಮ್ಮೆ ತನ್ನೊಳಗಿನ ಸತ್ವವನ್ನೇ ಮರೆತುಬಿಡುವಷ್ಟು ಅಗಾಧವಾಗಿರುತ್ತದೆ. ಇಲ್ಲಿನ ಕಡಲು ಈ ಗುಣದ ಸಾದೃಶ್ಯವೇ ಆಗಿದೆ. ತನ್ನೊಳಗು ತನಗೆ ಅರಿವಾಗುತ್ತಲೇ ಸುತ್ತಮುತ್ತಲ ಭ್ರಮ ಹರಿಯುತ್ತದೆ. 'ಹೆಣ್ಣು' ಕೂಡ ತನಗಿರುವ ಜೀವ ಪೊರೆಯುವ ಗುಣದಿಂದಾಗಿ ಸೃಷ್ಟಿಯಲ್ಲಿ ಮೇಲುಸ್ತರದಲ್ಲೇ ನಿಲ್ಲಬೇಕಾದವಳು. ಆದರೆ ಪುರುಷಪ್ರಧಾನ ಸಂಸ್ಕೃತಿ ಹೆಣ್ಣಿನ ಸತ್ವವನ್ನು ಮರೆಮಾಚಿ ಆಕೆಯನ್ನು ದುರ್ಬಲವನ್ನಾಗಿ ಮಾಡಿಬಿಟ್ಟವೆ. ಹೆಣ್ಣಿಗೆ 'ಧೀ' ಶಕ್ತಿ ಪ್ರಾಪ್ತವಾಗುವುದಾದರೂ ಜೀವನದ ಎಲ್ಲ ಅನುಭವಗಳೂ ದೊರೆತು ಮಾಗಿದ ಮೇಲೆ. ಇದು ದಿಢೀರನೆ ಸಂಭವಿಸುವ ಸಂಗತಿಯಲ್ಲ. ಕಾಯುವಿಕೆ ಇಲ್ಲಿ ಅನಿವಾರ್ಯ. ಇಂತಹ 'ಕಾಯುವಿಕೆ'ಯನ್ನು 'ಬೆಣ್ಣೆ ಕಾಯಿಸುವ' ಅಡುಗೆಮನೆಯ ಕ್ರಿಯೆಯೊಂದಿಗೆ ಸಮೀಕರಿಸಿ ರೂಪ ಹಾಸನ ಅವರು ಕವಿತೆ ಬರೆಯುತ್ತಾರೆ.

**"ಬೆಣ್ಣೆ ಹದ ಬೆಂದರಷ್ಟೇ । ಪಕ್ವಗೊಂಡ ತುಪ್ಪ**

**ಹೆಚ್ಚು ಕಾದರೆ ಸೀಕಲು । ಕಡಿಮೆ ಬೆಂದರೆ ಹಸುಕು**

**ಸಿದ್ಧಿಸಿದಂತೆಲ್ಲಾ, ಬೆಣ್ಣೆ ಉಕ್ಕುವುದಿಲ್ಲ**

**ಮಾಗುವ ಸದ್ದಿಗೆ ಧ್ಯಾನಿಸಿ । ಸ್ಥಿರಗೊಳ್ಳುತ್ತದೆ ಮನ**

**ಅಮ್ಮನಾಗುವುದೆಂದರೆ...... ಹೀಗೆ.**

**(ಅಮ್ಮನಾಗುವುದೆಂರೆ – ಕಡಲಿಗೆಷ್ಟೊಂದು ಬಾಗಿಲು – ಪುಟ ೨೮)**

ಹುಡುಗಿ ತಾಯಿಯಾಗಿ, ತಾಯಿ ಅಮ್ಮನಾಗಿ ರೂಪುಗೊಳ್ಳುವ ಈ ಪ್ರಕ್ರಿಯೆ ಕೇವಲ ಕೌಟುಂಬಿಕ ವಾತಾವರಣಕ್ಕಷ್ಟೆ ಸೀಮಿತವಾಗದೆ, ಇಡೀ ಜೀವಸಂಕುಲವನ್ನೇ ಪೊರೆಯುವ, ಕಾಪಿಡುವ, ಕ್ಷಮಿಸುವ ಔದಾರ್ಯ ಹೊಂದಿರುವ ಅನನ್ಯಶಕ್ತಿಯಾಗಿ 'ಹೆಣ್ಣು' ರೂಪಾಂತರಗೊಳ್ಳುವ ಪ್ರಕ್ರಿಯೆಯಾಗಿಯೂ ಇದನ್ನು ನಾವು ಗುರುತಿಸಬೇಕು. ಕಾಯುವಾಗ ಕಾದು, ಆರುವಾಗ ಆರಿದರೆ ಮಾತ್ರ ಕುಟುಂಬ ಸಮತೋಲಿತವಾಗಿರುತ್ತದೆ. ತನ್ಮೂಲಕ ಸಮಾಜ ಸುಸೂತ್ರವಾಗಿರುತ್ತದೆ. ಹೆಣ್ಣಿನ ಈ ತಾಳ್ಮೆಯ ಗುಣದ ಇನ್ನೊಂದು ಬಹುಬಳಕೆಯ ರೂಪಕ 'ಅಮೆ' ನಡೆ. ಅನೇಕ ಮಹಿಳಾಕವಿಗಳು ಈ ರೂಪಕವನ್ನು ಬಳಸಿದ್ದಾರೆ. ಸಂಧ್ಯಾದೇವಿಯವರು ಮೂರು ಪ್ರಸಂಗಗಳನ್ನು ತೆರೆದಿಡುತ್ತಾರೆ.

**ಆಮೆ ಒಂದು:**

**ನನ್ನ ಚಿಪ್ಪುಗಟ್ಟಿಯಿರಬಹುದು। ಬಂಡೆಕಲ್ಲಿನಂತೆ**

**ಆದರೂ ನೀನೇ ಬಲಿಷ್ಟ । ಓ.... ಮನುಷ್ಯನೇ!**
**ಸುಮ್ಮನೆ ಬಿದ್ದುಕೊಂಡಿದ್ದ ನನ್ನನ್ನು । ಮಗುಚಿಹಾಕಿ**
**ಹೋಗಿದ್ದೇಕೆ? ಕೆಟ್ಟ ಬುದ್ಧಿವಂತಿಕೆ!**
**ನನ್ನ ಮಾಂಸಲ ಎದೆ, ಹೊಟ್ಟೆ । ಹಣ್ಣಿನಂತಿವೆ**
**ಇಲ್ಲೀಗ ತುಂಬ ಕಣ್ಣುಗಳು । ಚೂರಿಯಂತಿವೆ**

**(ಮೂರು ಆಮೆಗಳು – ಝಳಕ್ಕೆ ಮುಖಬೆಳಗುತ್ತದೆ – ಪುಟ ೩೧)**

ದೈಹಿಕ ಭಿನ್ನತೆಯ ಕಾರಣದಿಂದ ಹೆಣ್ಣು ಅನುಭವಿಸಬೇಕಾದ ಮುಜುಗರ, ಸಂಕಷ್ಟಗಳು ಗಂಡಿಗಿಂತ ಯಾವಾಗಲೂ ಭಿನ್ನವೆ! ತನ್ನ ದೇಹಮಾತ್ರದಿಂದಾಗಿ ಕಾಮುಕ ಕಣ್ಣುಗಳಿಂದ ತನ್ನನ್ನು ತಾನು ರಕ್ಷಿಸಿಕೊಳ್ಳುವುದೇ ದುಸ್ತರ ಎಂಬ ಸನ್ನಿವೇಶವನ್ನು ಪಿತೃಪ್ರಧಾನ ಸಮಾಜ ಸೃಷ್ಟಿಸಿದೆ. ಹಾಗಾಗಿ ಇಲ್ಲಿನ ಆಮೆ ನನಗಿಂತ ನೀನೇ ಬಲಶಾಲಿ ಎನ್ನುತ್ತದೆ. ಆದರೆ ಈ ಬಲ ಪ್ರಾಪ್ತವಾಗಿರುವುದು ಸ್ವಾಭಾವಿಕವಾಗಿಯಲ್ಲ. ತನ್ನ ಸಹಲಿಂಗಿಯನ್ನು ಹತ್ತಿಕ್ಕಿ ತನ್ನನ್ನು ತಾನೇ ಸರ್ವಾಧಿಕಾರಿಯಂತೆ ಪರಿಭಾವಿಸಿಕೊಂಡಿರುವಂತಹುದು. ಅದಕ್ಕೆ ಎರಡನೇ ಆಮೆಯ ಪ್ರತಿಕ್ರಿಯೆ ಹೀಗೆ ಮುಂದುವರಿಯುತ್ತದೆ :

ಆಮೆ ಎರಡು :

**ಸತ್ಯ ಹೇಳುತ್ತೇನೆ ನಾನೀಗ। ಸ್ಪರ್ಧೆಗೆ ಸೇರುವುದನ್ನೇ। ಬಿಟ್ಟುಬಿಟ್ಟದ್ದೇನೆ**
**ನೆಗೆದು ಕುಪ್ಪಳಿಸಲಿ। ನಮ್ಮ ಮೊಲ। ಮಲಗಲಿ ಪಾಪ.... ಸುಸ್ತಾಗಿದೆಯಂತೆ.**
**ಮೊಲಕ್ಕೆ ಒಂದು ಗುಟ್ಟು ಹೇಳಿದ್ದೇನೆ**
**ನನಗೆ ಗೆಲ್ಲಬೇಕಾಗಿಯೇ ಇಲ್ಲ। ನಾನಿಲ್ಲಿ ನಿಲ್ಲುತ್ತೇನೆ**
**ಮುದ್ದು... ನಿದ್ದೆ ಮುಗಿಸು। ಮತ್ತೆ ಎದ್ದು ಕುಪ್ಪಳಿಸು**
**ನನ್ನಿಂದ ಮುಂದೆ ನೀನು ಹೋಗು**

**(ಅದೇ ಕವನ – ಪುಟ ೩೨)**

ಸ್ಪರ್ಧೆ ಯಾವಾಗಲೂ ಸಮಬಲರಲ್ಲಿ ನಡೆಯಬೇಕು. ದುರ್ಬಲವೆಂದು ಗುರುತಿಸಲ್ಪಡುವ ಆಮೆ ತೋರುವ ಔದಾರ್ಯದ ನಿಜವಾದ ಕಾರಣವೇನು, ಅತಿವೇಗ ಅಪಾಯಕ್ಕೆ ದಾರಿ ಎನ್ನುವ ತಿಳಿವಳಿಕೆಯೋ, ಸ್ಪರ್ಧಿಸಿ ವಿಜಯಿಯಾದರೂ ಯಾವುದೇ ಪ್ರಯೋಜನವಿಲ್ಲ ಎನ್ನುವ ನಿರಾಶೆಯೋ, ಸ್ಪರ್ಧೆಯ ಅಂತಿಮ ಹಂತಕ್ಕೆ ತಾನು ಸೋಲಬಹುದೆಂಬ ಭಯವೋ! ವಸ್ತು ಸ್ಥಿತಿಗಿಂತ ವ್ಯಂಗ್ಯವೇ ಇಲ್ಲಿ ಎದ್ದು ಕಾಣುತ್ತಿದೆ. ಅತಿಯಾದ ಅನುಕಂಪ ಪ್ರೀತಿಯಿಂದ ಕೂಡಿದ್ದಾದರೂ ಇರಬಹುದು ಅಥವಾ ತನ್ನ ಸಮವಲ್ಲ ಎಂಬ ಅಭಿಮಾನದಿಂದ ಕೂಡಿದ್ದಾದರೂ ಆಗಿರಬಹುದು. ಮೂರನೆಯ ಪ್ರಸಂಗದಲ್ಲಿ ಆಮೆ ಇನ್ನಷ್ಟು ವಿನೀತವಾಗುತ್ತದೆ.

ಆಮೆ ಮೂರು:

**ಕಾಲನನಗೆ ಸವಾಲು । ಹಾಕುತ್ತದೆ ಸಾಯಲು**
**ನಾನೋ....ಸುಖಾ ಸುಮ್ಮನಿದ್ದೇನೆ.**

ಎಷ್ಟೋ ಸಮಯದಿಂದ

ಸಾವಿಗೆ ಸಣ್ಣಗೆ ನಗೆ ಬರುತ್ತಿದೆ। ಎಷ್ಟು ಚೆಂದ!

(ಅದೇ ಕವನ – ಪುಟ ೩೩)

ಯಾವೆಲ್ಲ ಒತ್ತಡಗಳು, ಶೋಷಣೆಗಳೂ ಕೂಡ ಹೆಣ್ಣಿನ ಸತ್ವವನ್ನು ಸಾಯಿಸಲಾರವು. ಸಾವು ದೈಹಿಕವೇ ಹೊರತು, ಸ್ತ್ರೀ ಸಂಕುಲದ ಧೀಶಕ್ತಿಯನ್ನು ಅದು ಕುಂದಿಸಲಾರದೆಂಬ ದಿಟ್ಟ ಉತ್ತರವನ್ನು ಒಳಗೊಂಡಿದ್ದರೂ ದನಿ ಮಾತ್ರ ಮೆದುವಾಗಿಯೇ ಇದೆ. ಇಲ್ಲಿ ಅಹಿಂಸಾತತ್ವ ಎದ್ದು ಕಾಣುತ್ತದೆ. ಇಲ್ಲಿ ಸ್ಪರ್ಧೆಯ ಬಗ್ಗೆ ನಿರುತ್ಸಾಹಕ್ಕಿಂತಲೂ ತನ್ನ ನಡೆ ಬೇರೆಯದ್ದು ಎಂದು ತನ್ನ ಅಸ್ಮಿತೆಯ ಅನನ್ಯತೆಯನ್ನು ಉಳಿಸಿಕೊಳ್ಳುವ ಸ್ವಂತಿಕೆಯೇ ಹೆಚ್ಚಾಗಿ ಕಾಣುತ್ತದೆ. ಇದೇ ಆಮೆಯ ರೂಪಕ ದು. ಸರಸ್ವತಿಯವರಲ್ಲಿ ಬಳಕೆಯಾಗುವುದು ಹೀಗೆ:

ಮೊಲದ ವೇಗ । ಮೈಲುಗಲ್ಲುಗಳ ಎಣಿಸಿ

ಕಳೆದ ದಾರಿಯ ಅಳತೆ ಮಾಡಿತು

ಹಚ್ಚೆಯಂತೆ ಹೆಜ್ಜೆಗಳಿಟ್ಟು। ಆಮೆ ನಡಿಗೆ

ಸವೆಸಿದ ದಾರಿಯ ದೂರ ಅರಿಯಿತು

ನಾ। ಹೆಂಗೂಸಾಗಿದ್ದವಳು। ಚಿಪ್ಪಿಲ್ಲದೆ

ವೇಗದ ಹೊಡೆತಕ್ಕೆ। ಸಿಕ್ಕಿ ಮುಕ್ಕಾದವಳು

(ಆಮೆ ಆಗಿದ್ದರೆ – ಜೀವಸಂಪಿಗೆ – ಪುಟ ೨೭)

ಇಲ್ಲಿ ಕೂಡ ಮೊಲ–ಆಮೆಗಳು ಸಮಾಜದಲ್ಲಿರುವ ಲಿಂಗತಾರತಮ್ಯವನ್ನೇ ಪ್ರತಿನಿಧಿಸುತ್ತಿವೆ. ಮೊಲಕ್ಕೆ ತನ್ನ ವೇಗದ ಕುರಿತು ಅಹಂ ಇರುವುದರಿಂದಲೇ ಸಾಧನೆಯ ಮೈಲಿಗಲ್ಲುಗಳನ್ನು ಪಟ್ಟಿ ಮಾಡುತ್ತದೆ. ಆದರೆ ಆಮೆ ದಾರಿಯನ್ನು ಸವೆಸಿದೆ. ಕಷ್ಟ–ಸುಖಗಳನ್ನು ಅನುಭವಿಸಿದೆ. ಆಮೆಗಿರುವ ರಕ್ಷಾಕವಚ ಕೂಡ ತನಗಿಲ್ಲವಾಗಿ ಹೆಣ್ಣು ಜೀವವೊಂದು ಎದುರಿಸಬೇಕಾದ ಸಮಸ್ಯೆ ಸಂಕಷ್ಟಗಳಲ್ಲಿ ಬಳಲಿ–ಬೆಂಡಾಗುವ ದಾರುಣಸತ್ಯವನ್ನು ಕವಿತೆ ಮನಗಾಣಿಸುತ್ತದೆ.

ಆದರೆ ಪರಿಸ್ಥಿತಿಯ ವ್ಯಂಗ್ಯವೆಂದರೆ ಗಂಡಿನ ಅಳತೆ ಸಂಖ್ಯಾವಾಚಕದಲ್ಲಿದ್ದರೆ, ಹೆಣ್ಣಿನ ಸಾಧನೆ ಗುಣವಾಚಕದಲ್ಲಿದೆ. ಗುಣವನ್ನು ಸಂಖ್ಯೆಯಲ್ಲಿ ಅಳೆಯಲಾಗುವುದಿಲ್ಲವಾದರೂ ಸಂಖ್ಯೆಗಿಂತ ಗುಣ ಕಡಿಮೆಯಂತೂ ಆಗಲಾರದೆಂಬ ಸತ್ಯವನ್ನೂ ಇಲ್ಲಿ ಗುರುತಿಸಬಹುದಾಗಿದೆ. ಇದೇ ರೂಪಕ ಜ್ಯೋತಿಗುರುಪ್ರಸಾದ್ ಅವರಲ್ಲಿ ಬಳಕೆಯಾಗುವುದು ಹೀಗೆ:

ಓಡಬೇಕಾದ ಶಕ್ತಿ। ಅರ್ಧದಲ್ಲೇ ಆ ವೇಳೆಯ

ಅನಗತ್ಯ ನಿದ್ದೆಯಾಗಿ। ಮೊಲ ಕನಿಷ್ಠವಾಯಿತು;

ನಿರಂತರ ಚಲನೆಯ। ಅಪಮಾನಿಸಿ ಸೋಲಾಯಿತು.

.................................................

**ಸಮಯಕ್ಕೆ ವಿನಯ ತೋರಿ। ಗೆಲುವಾಯಿತು**

**ಆಮೆಯ ಮೈಯೊಳಗೆ। ಗಡಿಯಾರ ಇತ್ತು!**

**(ಗಡಿಯಾರ – ಚುಕ್ಕಿ – ಪುಟ ೩೦)**

ಇಲ್ಲಿ ಕೂಡಾ 'ಕಾಯುವಿಕೆ'ಯೇ ಹೆಣ್ಣಿನ ಶಕ್ತಿ ಎಂಬ ಮೌಲ್ಯವಿದೆ. ವಿನಯ, ಔದಾರ್ಯಗಳು ದೌರ್ಬಲ್ಯಗಳಲ್ಲ. ದೀರ್ಘಕಾಲದಲ್ಲಿ ಅವೇ ಗೆಲುವಿನ ಸೂತ್ರಗಳು. ಇಲ್ಲಿ 'ಗಡಿಯಾರ' ಹೆಣ್ಣು ಮನಸ್ಸು ಸದಾ ಚಲನಶೀಲವಾಗಿರುವ ಸಂಕೇತವಾಗಿಯೂ ಬಳಕೆಯಾಗಿದೆ. 'ನಿಧಾನವೇ ಪ್ರಧಾನ', 'ತಾಳಿದವನು ಬಾಳಿಯಾನು' ಎಂಬೆಲ್ಲ ಮಾತುಗಳು ಆಮೆಗೆ ಅನ್ವಯಿಸಿದರೆ 'ನೀರಿನ ಹರಿಯುವಿಕೆ' ಚಲನಶೀಲತೆಯ ಪ್ರತೀಕವಾಗಿ ಬಳಕೆಯಾಗಿದೆ. ಕವಿತಾ ರೈ ಅವರು 'ಹಕ್ಕಿ ಹರಿವ ನೀರು', 'ನೀರತೇರು' ಎಂದೆಲ್ಲ ಮನುಷ್ಯ ದೇಹವನ್ನು ಆಧ್ಯಾತ್ಮಿಕ ನೆಲೆಯಲ್ಲಿ ಪರಿಗಣಿಸುತ್ತಾರೆ.

**ಮುಗಿಲೊಳಗಿನ ಮುಗಿಲ ಬಾನೊಳಗಿನ ಬಾನ**

**ಹೊತ್ತು ಸಾಗುವ ನೀರತೇರು**

**ಬದುಕ ಈ ಮೇಳದೊಳಗೆ। ದಿರನ ಸುತ್ತೋ ಹಬ್ಬದಡುಗೆ**

**ಗುಯ್‌ಗುಡುವ ನುಸಿನೊಣಕೂ**

**ಅದರ ತುತ್ತು ಪಾಲಿದೆ**

**('ನೀರತೇರು' – ಪುಟ ೧೧)**

ಈ 'ನೀರತೇರು' ಕುರಿತು ಕೃತಿಗೆ ಮುನ್ನುಡಿ ಬರೆದ ಸ. ಉಷಾ ಅವರು ಹೀಗೆ ವಿಶ್ಲೇಷಣೆ ನಡೆಸಿದ್ದಾರೆ. 'ನೀರತೇರು ಒಂದು ಘನವಾದ ಕಲ್ಪನೆ. ವೈದಿಕ ಸಾಹಿತ್ಯದ ಉಷಾಸೂಕ್ತ, ಆಪೋ ದೇವಿಯರ ಸ್ತುತಿ, ಸಪ್ತಮಾತೃಕೆಯರ ಕಲ್ಪನೆಗಳಿಂದ ಹಿಡಿದು, ವಚನಸಾಹಿತ್ಯದ ನೀರ ಬೊಂಬೆ, ನಿರಾಳದ ಗೆಜ್ಜೆ, ಜಲದ ಮಂಟಪ, ಉರಿಯ ಚಪ್ಪರ, ನದಿ ಹೆಣ್ಣಾಗುವ ಪುರಾಣ ಕಲ್ಪನೆಗಳು, ಕೊನೆಗೆ ನೀರ ಹನಿಯೊಳಗೆ ಕಾಣುವ ಬ್ರಹ್ಮಾಂಡ ಹೀಗೆ ನೀರ ತೇರಿನ ಹರವು ದೊಡ್ಡದು. ನೀರು ಬೆಂಕಿಯಾಗಬಹುದು. ಉಲುಹಾಗಬಹುದು, ಮಣ್ಣಾಗಬಹುದು, ಆಕಾಶವಾಗಬಹುದು, 'ಅಡುಗೆ ಮನೆಯ ಅಧ್ಯಾತ್ಮ'ವಾಗಬಹುದು....''೧೩

ಹೀಗೆ ಸಾಮಾನ್ಯದಿಂದ ಅಸಾಮಾನ್ಯವಾಗುವ ನೀರಿನ ಗುಣ ಹೆಣ್ಣಿನ ಗುಣವೂ ಆಗಿರುವ ಸತ್ಯವನ್ನು ಕವಿತೆ ಸೂಚಿಸುವಂತಿದೆ. ಸೃಷ್ಟಿಯಲ್ಲಿ ಹೆಣ್ಣು–ಗಂಡುಗಳೆರಡೂ ಸರಿಸಮವೇ ಆಗಿದ್ದರೂ ಲೆಕ್ಕಾಚಾರದಲ್ಲಿ ಅಸಮತೆ ಇದೆ. ಈ ಅಸಮತೆಯನ್ನು ಮಹಿಳಾಕಾವ್ಯ ಎತ್ತಿ ತೋರಿಸಲು ಆಯ್ದುಕೊಂಡ ಮಾರ್ಗ ಎಂದಿನ ತನ್ನದೇ ಅನುನಯದ ಧಾಟಿ. ರೂಪ ಹಾಸನ ಅವರು ಈ ಎರಡು ವರ್ಗಗಳನ್ನು ಬೊಗಸೆ ನದಿಗಳ ಜೋಡಿ ರೂಪಕದಲ್ಲಿ ಕಟ್ಟಿಕೊಡುವುದು ಹೀಗೆ.

**ಯಾರಿಗೂ ದಕ್ಕದ। ಮೃಗಜಲವೇ ತಾನೆಂಬ**

**ಅನಾದಿಯಿಂದ ಜೊತೆಯಾದ। ಒಂದಿಷ್ಟು ಹಸಿಜಂಭ**

**ಬೊಗಸೆಗೆ ಎಂದಿನದೇ ಉತ್ಕಟ ದಾಹದ ದೈನ್ಯ**

**ಸಿಕ್ಕ ಹಿಡಿನೀರ। ಗಾಢತನ್ಮಯತೆಯಲಿ ಆಪೋಷಿಸಿ**
**ಇಡೀ ನದಿಯನ್ನೇ ದಕ್ಕಿಸಿಕೊಂಡ**
**ಸಂಭ್ರಮದಲಿ ತೇಲುತ್ತದೆ ಬೊಗಸೆ**
**......... ಹಮ್ಮಿನಲಿ ಬೀಗಿಹರಿವ। ನಿಸ್ಸೀಮ ನದಿ ಮೆಲ್ಲಗೆ ಬಾಗುತ್ತದೆ**
**ಯಕಶ್ಚಿತ್ ಪುಟ್ಟ ಬೊಗಸೆಯೆಡೆಗೆ!**

**(ಬೊಗಸೆಯೂ ನದಿಯೂ – ಕಡಲಿಗೆಷ್ಟೊಂದು ಬಾಗಿಲು – ಪುಟ ೮೦)**

ಮೌನಕ್ಕೆ, ತಾಳ್ಮೆಗೆ ಇದ್ದುದರಲ್ಲೇ ತೃಪ್ತಿ ಪಡುವ ಗುಣಕ್ಕೆ ಎಂತಹ ನಾಗಾಲೋಟದ ಅಹಂ ಆದರೂ ಸೋಲಲೇಬೇಕು, ಶರಣಾಗಲೇಬೇಕಾದ ಅಹಿಂಸಾ ತತ್ವಕೂಡ ಇದೆ. ಅಹಿಂಸೆ ಎನ್ನುವುದು ದೌರ್ಬಲ್ಯವಲ್ಲ, ಶಕ್ತಿ ಎಂಬ ಗಾಂಧೀಜಿಯವರ ನುಡಿಗಳು ಎಷ್ಟೆಲ್ಲ ಬಗೆಯಲ್ಲಿ ಸತ್ಯ ಎನ್ನುವುದಕ್ಕೂ ಇದೊಂದು ಉದಾಹರಣೆಯಾಗಿದೆ. ಇಲ್ಲಿ ಸೋಲು–ಗೆಲುವಿನ ಪ್ರಶ್ನೆಗಳಿಗಿಂತಲೂ ತನ್ನ ತನ್ನ ಮಿತಿಯಲ್ಲಿ ತಾನಿದ್ದು ಸಹಕಾರದಿಂದ ಬಾಳುವುದೇ ಮುಖ್ಯ ತತ್ವವಾಗಿದೆ. ಬಾಹ್ಯ ಒತ್ತಡಗಳು ಎಷ್ಟು ಪ್ರಬಲವಾಗಿದ್ದರೂ ಅಂತಃಶಕ್ತಿಗೆ ಅದೆಲ್ಲವನ್ನೂ ಮೀರುವ ಸಾಮರ್ಥ್ಯವಿರುತ್ತದೆ ಎಂಬುದನ್ನು 'ದೋಸೆಹಿಟ್ಟಿ'ನ ರೂಪಕದಲ್ಲಿ ಇದೇ ಕವಿ ಹೇಳುತ್ತಾರೆ.

**ದೋಸೆಹಿಟ್ಟು। ಒಳಗೇ ಹುದುಗಿ ಸೊಕ್ಕಿ**
**ಬೋಸಿ ಮೀರಿ ಉಕ್ಕುಕ್ಕಿ। ಹರಿಹರಿದು**
**ಹೊಸಿಲು ದಾಟಿ। ಶುಭ್ರಬಿಳಿಯ ನದಿಯಾಗಿ**
**ಚಿಮ್ಮುತ್ತಾ ನೆಗೆಯುತ್ತಾ। ಹಾರುತ್ತಾ ಕುಣಿಯುತ್ತಾ**
**ಊರೆಲ್ಲಾ ಹರಿದಿತ್ತು। ಬಿಳಿನಗೆ ನಗುತ್ತಾ**

**(ದೋಸೆಹಿಟ್ಟು ನದಿಯಾದದ್ದು – ಬಾಗಿಲಾಚೆಯ ಮೌನ – ಪುಟ ೩೪)**

'ಬಿಳಿ' ಶುಭ್ರತೆಯ, ನಿಷ್ಕಲ್ಮಶತೆಯ ಸಂಕೇತ. ಇಲ್ಲಿ ಹೊಸಿಲು ದಾಟುವ ಕ್ರಿಯೆ ಸಾಂಪ್ರದಾಯಿಕತೆಯ ಕಬಂಧಬಾಹುಗಳಿಂದ ಕಳಚಿಕೊಂಡು, ಮುಕ್ತವಾಗುವ ಮನಸ್ಥಿತಿಗೆ ಕನ್ನಡಿ 'ದೋಸೆಹಿಟ್ಟು' ಅಡುಗೆಮನೆಯ ಸಾಮಾನ್ಯ ವಸ್ತುವಾಗಿದ್ದರೂ, ಹುದುಗುವಿಕೆಯಿಂದಾಗಿ ಮನಸ್ಸಿನ ಚಿಂತನೆಯೊಂದಿಗೆ ತಾದಾತ್ಮ್ಯತೆ ಹೊಂದಿದೆ. ಚಿಂತನಾಪರ ಮನಸ್ಸಿಗೆ ಯಾವ ಕಡಿವಾಣವೂ ತಾಳಿಕೆಯಾಗುವುದಿಲ್ಲ ಎಂಬುದಿಲ್ಲಿ ವಿದಿತವಾಗಿದೆ. ತನ್ನೆಲ್ಲ ಚಿಂತನೆಗಳು ಮರಗಟ್ಟಿ, ಅವಕಾಶಗಳು ಬಾಗಿಲು ಮುಚ್ಚಿವೆ ಎನಿಸಿದಾಗ ನಯವಾದ ಕೋರಿಕೆಯೂ ಇದೆ. ಇದು ಭಾಷೆಯಲ್ಲಿ ಸಹಚರರೊಂದಿಗೆ ಹಂಚಿಕೊಳ್ಳಲು ಆಹ್ವಾನ, ಆಗ್ರಹ ಈ ಅವಕಾಶವನ್ನು ಹಸಿಮಣ್ಣಿನ ರೂಪಕದಲ್ಲಿ ಆಗ್ರಹಿಸುವುದು ಇದೇ ಕವಿ.

**ಒಂದಿಷ್ಟು । ಒಂದಿಷ್ಟೇ ಇಷ್ಟು**
**ಹಸಿಮಣ್ಣು ನೀಡು ಗೆಳೆಯ**
**.... ನಾ ಅದರಲ್ಲೇ ಹೂತು । ಪರಿಪಕ್ವವಾಗಿ ಮಾಗಿ,**

ತ್ರಿವಿಕ್ರಮನಂತೆ ಬೆಳೆದು
ಕಲ್ಪವೃಕ್ಷವಾಗಿ ಹೊರಹೊಮ್ಮುತ್ತೇನೆ
ಯೋಚಿಸು ಗೆಳೆಯಾ ದಯಮಾಡಿ

(ಒಂದಿಷ್ಟು ಹಸಿಮಣ್ಣು – ಪುಟ ೩೧)

ಇಲ್ಲಿ ಯಾಚನೆ ಇದೆ. ಅದು ತನ್ನ ಯೋಚನೆಗಳನ್ನು ಹೊರಹಾಕಲು, ತನ್ನ ಅಸ್ಮಿತೆಯನ್ನು ಕಟ್ಟಿಕೊಳ್ಳುವ ಹಂಬಲದಿಂದ ಬಂದದ್ದು, ತ್ರಿವಿಕ್ರಮನಂತೆ ಬೆಳೆದರೂ ಕಲ್ಪವೃಕ್ಷವಾಗುವ ಮಹದಾಸೆ ಇರುವುದರಿಂದ ನೀಡಿದವರು–ಪಡೆದವರು ಇಬ್ಬರೂ ಧನ್ಯರಾಗುವ ಕ್ಷಣವಿದು. 'ಕಸಿಯುವಿಕೆ' ಇಲ್ಲ. ಬದಲಿಗೆ ಯೋಚಿಸಿ ನೋಡಿ ಅವಕಾಶ ನೀಡಿ ಎಂಬ ಕೋರಿಕೆ ಇದೆ. ಯಾತನೆ ಕೂಡ ಅವಮಾನವಲ್ಲ. 'ಸಾಮ' ಮಾರ್ಗ, ಚೀರಾಟಗಳಲ್ಲಿ ಯಶಸ್ಸಿನ ನಂಬಿಕೆ ಕಡಿಮೆ ಇರುವುದರಿಂದಲೋ ಏನೋ ಈ ಕವಿ ಅನುನಯದ ಧಾಟಿಯಲ್ಲಿದ್ದಾರೆ. ಲಿಂಗತಾರತಮ್ಯ ಸಮಾಜದ ಕಳಂಕವಾಗಿರುವಂತೆ ಕೋಮುವಾದ ಕೂಡ ಇನ್ನೊಂದು ಬಗೆಯ ಕಳಂಕ. ಇದನ್ನು ಖಂಡಿಸುವಾಗಲೂ ಹೆಣ್ಣಿನ ದನಿ ಮೆದುವಾಗಿಯೇ ಆದರೆ ತರ್ಕಬದ್ಧವಾಗಿ ಸಾಗುತ್ತದೆ. ಡಾ. ವಿನಯಾ ಅವರು ಶಿಶುನಾಳ ಶರೀಫರನ್ನು ಕುರಿತು ಬರೆಯುವಾಗ ಹೀಗೆ ಹೇಳುತ್ತಾರೆ.

ಇದ್ದಾಗ ಇರಗೊಡದ। ನಿಂತಾಗ ನಿಲಗೊಡದ
ಗುಡಿಯ ಕಟ್ಟೆಯ ಆಚೆ। ಮಸೀದಿಗೋಡೆಯ ಆಚೆ
ನೂಕಿ ನಕ್ಕವರೆಲ್ಲ ಒಟ್ಟಾಗಿ। ಬಂದಿದ್ದು ಹೆಣದ ಉಸ್ತುವಾರಿಗೆ
ಆಯಹೋದರೆ ಉಡಿತುಂಬ ಮುಡಿತುಂಬ
ಹೆಡಿಗೆ ಹೆಡಿಗೆ ಹೂ ಹೊತ್ತ ಬೇವು
ಯಾವ ತಾಯಿಯದೋ ಹರಕೆ ತೊಟ್ಟಿಲು
ತೂಗಿ ಕರೆಯುತ್ತಿದೆ। ಶರೀಫಾ,
ಈ ಮಣ್ಣ ಹೆಣ್ಣು ಹೊಟ್ಟೆಗಳೆಲ್ಲ ಖಾಲಿ ಇದೆ.

(ಶರೀಫಾ – ನೂರುಗೋರಿಯ ದೀಪ – ಪುಟ ೧೩)

ಚರಿತ್ರೆಯಲ್ಲಿ ಅಡಗಿರುವ ಸತ್ಯಗಳ ಕುರಿತು ಕವಿಗೆ ವಿಷಾದವಿದೆ. ಅಲ್ಲೆಲ್ಲಾ ಬೇವಿನ ಹೂವೇ ಬುಟ್ಟಿ ಸಿಗುತ್ತದೆ. 'ಬೇವು' ಯಾರೂ ಆಸ್ವಾದಿಸುವ ತಿನಿಸಲ್ಲ. ಬಯಸಿ ಬಯಸಿ ಬೇವನ್ನು ತುಂಬಿಕೊಳ್ಳುವವರಿಲ್ಲ. ಆದರೆ ಅದೇ ಸಿಕ್ಕುವುದು ಚರಿತ್ರೆಯ ಪುಟಗಳಲ್ಲಿ ಅಡಗಿರುವ ಸತ್ಯ. ಆದರೆ ಪ್ರತಿ ತಾಯಿಯ ಅಥವಾ ಯಾವುದೋ ತಾಯಿಯ ಹರಕೆಯ ತೊಟ್ಟಿಲು ಕೂಗಿ ಕರೆಯುತ್ತಿದೆ. ಅದು ಈ ನಾಡು, ದೇಶ, ಭೂಮಿ ಯಾವುದರ ಕೂಗಾದರೂ ಆಗಿರಬಹುದು. ಸಂಕುಚಿತತೆಗಳನ್ನು ಮೀರಲಾಗದ ಈ ಮೌಢ್ಯದಿಂದಾಗಿ ಹೆತ್ತ ತಾಯಿಗೂ, ಹೊತ್ತ ಭೂಮಿಗೂ ಸಮಾಧಾನವಿಲ್ಲ, ಧನ್ಯತೆಯಿಲ್ಲ. ಇಲ್ಲಿನ ಕೂಗು ಮನುಕುಲದ್ದು. ತನ್ನ ಸಂತಾನವನ್ನು ಕಾಪಾಡಿಕೊಳ್ಳುವ ತಾಯಿಯ ಕೂಗು. ವಿಷಾದಗಳಂತೆಯೇ ಸಂಭ್ರಮದ ಗಳಿಗೆಗಳನ್ನೂ ರೂಪಕದಲ್ಲಿ ಹಿಡಿದಿಡಲಾಗಿದೆ.

ಗಂಡು–ಹೆಣ್ಣಿನ ಲೈಂಗಿಕ ಹರ್ಷವನ್ನು ಸುಕನ್ಯಾಮಾರುತಿಯವರು ಕವನದಲ್ಲಿ ಹಿಡಿದಿಡುವುದು ಹೀಗೆ :

> ನನ್ನ ಕನಸಿನ ಗೋಪುರಕೆ। ಹೊನ್ನ ಕಳಸವಿಟ್ಟ ದೊರೆಯೇ
> ಹೇಗೆ ಹೇಳಲಿ ನನ್ನ । ಎದೆ ಹಿಡಿಸಲಾರದ ಪ್ರೇಮ
> ....... ಕರುಳು ಕೆದಕುವ ನಿನ್ನ। ಕಣ್ಣಿಗೆ ಹೇಳು ನನ್ನ ಕೊಲ್ಲಬೇಡೆಂದು,
> ನನ್ನ ಕಲಕಬೇಡೆಂದು.
>
> (ನನ್ನ ಹೊನ್ನ ಕಳಸ – ನಾನೆಂಬ ಮೈಯೆ – ಪುಟ ೧೫೭)

'ಹೊನ್ನ ಕಳಸ', 'ಕರುಳು ಕೆದಕುವ ನೋಟ', 'ಮೋಡಿನಗೆ' ವರ್ಣನೆಗಳಿಂದ ಪ್ರಿಯಕರನಿಂದ ಆಕರ್ಷಿತಳಾದ ಹೆಣ್ಣು ಅನುಭವಿಸುವ ಲೈಂಗಿಕ ಸಂಭ್ರಮವನ್ನು ಹಿಡಿದಿಡಲಾಗಿದೆ. ಸೃಷ್ಟಿಕ್ರಿಯೆಯ ಎರಡು ಪ್ರಧಾನ ಧಾರೆಗಳಾದ ಹೆಣ್ಣು–ಗಂಡುಗಳು ಇಂತಹ ಸಂಭ್ರಮದಿಂದ ಕೂಡಿದ ಬದುಕನ್ನು ಬಾಳಿದಾಗ ಮಾತ್ರ ಸಾಂಸಾರಿಕ ಜೀವನ ಸುಖಮಯವಾಗಿರುತ್ತದೆ. ತನ್ಮೂಲಕ ಹೆಣ್ಣು–ಗಂಡಿನ ನಡುವೆ ಏಳುವ ಮನೋವೈಜ್ಞಾನಿಕ ಸಮಸ್ಯೆಗಳೂ ಕಡಿಮೆಯಾಗುತ್ತವೆ. ಅಮೂರ್ತವಾದ ಸಂಕೀರ್ಣವಾದ ವಿಷಯಗಳನ್ನು ಹೇಳುವಾಗ ಪರಸ್ಪರ ಎರಡು ಅಮೂರ್ತ ಸಂಗತಿಗಳಿಗೇ ತಾದಾತ್ಮ್ಯತೆ ಕಲ್ಪಿಸುವ ಪ್ರಯತ್ನವನ್ನೂ ಕಾಣಬಹುದು.

> ನಿಜವಾದ ಜೀವನ ಸಂಗಾತಿ
> ಸಾವಿನ ಸಮೀಪದಲ್ಲಿ ಬರುತ್ತಾನೆ
> ಒಮ್ಮೊಮ್ಮೆ ಸಾವೇ ಆಗಿ ಬರಲೂಬಹುದು
> ..... ಬಂದರೆ ಆ ಪ್ರೀತಿ
> ನಮ್ಮ ಎಲ್ಲ ಪ್ರಶ್ನೆಗಳಿಗೆ ಉತ್ತರವಾಗುತ್ತದೆ.
>
> . (ಸಾವಿನ ಪ್ರೀತಿ – ಸಂಧ್ಯಾದೇವಿ – ಪದ್ಯದ ಮಾತು ಬೇರೆ – ಪುಟ ೭೯)

ಪದ್ಯದ ವಿಶ್ಲೇಷಣೆ ನಡೆಸಿರುವ ವಿವೇಕಾಶಾನಭೋಗರು ಈ ಎರಡು ಅಮೂರ್ತ ರೂಪಕಗಳು ಎದುರುಗೊಳ್ಳುವ ವಿವರಣೆ ಹೀಗಿದೆ. "ಸಾವು ಮತ್ತು ಪ್ರೀತಿಗಳ ನಿಬಿಡತೆಯನ್ನು ಹೇಳಲೆಂದೇ ಅವುಗಳನ್ನು ಇಲ್ಲಿ ಅವರು ಒಂದರೊಳಗೊಂದು ಹೆಣೆದಿದ್ದಾರೆ. ಸಾವಿಗೆ ಉತ್ತರ ಕಂಡುಕೊಳ್ಳುವುದಕ್ಕೂ, ಪ್ರೇಮಕ್ಕೆ ಉತ್ತರ ಕಂಡುಕೊಳ್ಳುವುದಕ್ಕೂ ಸಾಮ್ಯ ಕಾಣಿಸುವ ಮೂಲಕ ಈ ಎರಡರ ಸಂಕೀರ್ಣತೆಯನ್ನು ವಿವರಿಸುತ್ತಾರೆ... ಹೀಗೆ ಒಂದು ತುದಿಯಲ್ಲಿ ಪ್ರೇಮದ ಗಾಂಭೀರ್ಯ, ಅದರ ಆಳ ಧಾರಾಳವನ್ನು ಧೇನಿಸಿದ ಕವಿತೆ 'ನಮಗೆ ಸುಲಭವಾಗಲು ಸಾವೇ। ಪ್ರೇಮದ ವೇಷ ಧರಿಸಿ ಬಂದಿರಬಹುದು' ಎಂದು ಪ್ರೇಮದ ಬಗೆಗಿನ ಸಾಮಾನ್ಯ ಗ್ರಹೀತಗಳ ಕುರಿತು ವ್ಯಂಗ್ಯವಾಡುತ್ತದೆ. ಪ್ರೇಮವೆಂಬ ಅಪರೂಪವು ಬರಿಮಾತಿನಲ್ಲಿ ಎಷ್ಟು ಸದರವಾಗಿ ಹೋಗಿದೆ ಎಂಬುದನ್ನು ಹೇಳುತ್ತ, ಹೇಳುತ್ತ ನಾವೆಲ್ಲ ಹೀಗೆ ಭಾವಿಸುವ ಪ್ರೇಮವು ಸಾವಿನಷ್ಟೇ ನಿಗೂಢವೂ ಉತ್ಕಟವೂ ಆಗಿದೆಯೆಂಬುದನ್ನು ಗಮನಕ್ಕೆ ತರುತ್ತದೆ. ಪ್ರೀತಿಗೆ ಉತ್ತರ ದೊರೆತರೆ

ಸಾವಿಗೂ ಉತ್ತರ ದೊರೆತಂತೆ. ಸಾವಿನ ಆಕಸ್ಮಿಕತೆ, ಅನಿವಾರ್ಯತೆ, ಅರ್ಥವಾಗದಿರುವ ಗುಣ ಈ ಎಲ್ಲವನ್ನೂ ಪ್ರೇಮಕ್ಕೆ ಸಮೀಕರಿಸಿರುವುದು ಅರ್ಥಸಂಕೀರ್ಣತೆಯನ್ನು ಎದುಗುಂದದೇ, ತಿಳಿಗೊಳಿಸದೇ ಎದುರಿಸಿರುವುದು ಇಲ್ಲಿಯ ವೈಶಿಷ್ಟ್ಯ."[೧೪]

### ೫.೪. ಉಪಮೆಗಳ ನೆಲೆ

ರೂಪಕದಂತೆಯೇ ಉಪಮೆ ಕೂಡ ಹೋಲಿಕೆಯ ಒಂದು ವಿಧಾನ. ನಮ್ಮ ಹೇಳಿಕೆಗಳನ್ನು ಹೆಚ್ಚು ಖಚಿತಪಡಿಸಲು ಹೋಲಿಕೆಗಳು ಸಹಕರಿಸುತ್ತವೆ. ವಿಮರ್ಶೆಯ ಪರಿಭಾಷೆಯಲ್ಲಿ ಉಪಮೆಯನ್ನು ಹೀಗೆ ವಿವರಿಸಲಾಗಿದೆ : "ಯಾವುದೇ ವಸ್ತು, ವ್ಯಕ್ತಿ, ಕ್ರಿಯೆ, ಮನಸ್ಥಿತಿ ಅಥವಾ ಸಂಬಂಧವನ್ನು ಭಿನ್ನ ಗುಣಧರ್ಮದ ಮತ್ತೊಂದು ಅನುಭವ ಖಂಡದೊಡನೆ 'ಅಂತೆ', 'ವೊಲು', 'ಹಾಗೆ' ಇತ್ಯಾದಿ ಪದಗಳನ್ನು ಬಳಸಿಕೊಂಡು, ವ್ಯಕ್ತವಾಗಿ ಅಥವಾ ಸೂಚ್ಯವಾಗಿ ಸಂಬಂಧ ಕಲ್ಪಿಸುವುದು."

"ಕಾರಣ ಸಂಬಂಧವಿರಲಿ ನಿಮಿತ್ತ ಸಂಬಂಧವಿರಲಿ ಒಂದು ಪ್ರಕೃತ ವಿಷಯದ ಭಾವಕೋಶಕ್ಕೆ ಮತ್ತೊಂದು ಅನ್ಯವಿಷಯದ ಭಾವಕೋಶವನ್ನು ಸಂಗಗೊಳಿಸಿ, ಪ್ರಕೃತ ವಿಷಯದ ಭಾವಕೋಶದ ವೃದ್ಧಿಯಿಂದ ರಸವೃದ್ಧಿಯಾಗುವಂತೆ ಮಾಡುವುದೇ ಉಪಮಾ..."[೧೫]

ಕನ್ನಡ ಸಾಹಿತ್ಯದ ಅಲಂಕಾರವನ್ನು ಹೆಚ್ಚಿಸುವಲ್ಲಿ ಉಪಮೆಗಳ ಪಾತ್ರವು ಮಹತ್ತರವಾಗಿದೆ. ಪ್ರಾಚೀನ ಸಾಹಿತ್ಯದಲ್ಲಿ ಉಪಮೆ, ರೂಪಕಗಳ ರಚನೆ ಕವಿ ಎನಿಸಿಕೊಂಡವರ ಪಾಂಡಿತ್ಯದ, ರಸಿಕತೆಯ ಪ್ರಶ್ನೆಯಾಗಿದ್ದಿತು. ವ್ಯಕ್ತಿ ಚರಿತ್ರೆಗಳೇ ಕಾವ್ಯವಾಗುತ್ತಿದ್ದುದರಿಂದ ಇದು ಅನಿವಾರ್ಯವೂ ಆಗಿರಬಹುದು. ಮಹಿಳಾಕಾವ್ಯಕ್ಕೆ ದನಿ ಮೂಡುವ ಹೊತ್ತಿಗಾಗಲೇ ಕನ್ನಡದ ಮುಖ್ಯಧಾರೆ ಪರಂಪರೆ ಸಾಕಷ್ಟು ಪಲ್ಲಟಗಳಿಗೆ ತನ್ನನ್ನು ಒಡ್ಡಿಕೊಂಡಿತ್ತು. ಅಂತಹ ಪಲ್ಲಟಗಳಲ್ಲಿ ಅದರ ಬಾಹ್ಯರೂಪಕ್ಕಿಂತ ಅಂತಸತ್ವಕ್ಕೆ ಆದ್ಯತೆ ನೀಡಿರುವ ಪ್ರಕ್ರಿಯೆಯೂ ಒಂದಾಗಿದೆ. ಆದರೂ ವ್ಯಕ್ತಿ ಪರಿಚಯಗಳಲ್ಲೋ ಭಾವತೀವ್ರತೆಯನ್ನು ಹೇಳವಾಗಲೋ ಉಪಮೆಗಳು ತಾನಾಗಿಯೇ ಬಳಕೆಯಾಗಿವೆ. ಈ ಹಿನ್ನೆಲೆಯಲ್ಲಿ ಪರಿಚಯಾತ್ಮಕವಾಗಿ ವಿಶ್ಲೇಷಣೆ ಮಾಡುವುದು ಮಾತ್ರ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಸರ್ವಶ್ರೇಷ್ಠ ಗುಣಗಳೆಲ್ಲವಕ್ಕೂ ದೈವಮೂಲವನ್ನು ಹುಡುಕಿ ಆರೋಪಿಸುವುದು ಭಾರತೀಯ ಮನಸ್ಥಿತಿ. ಆಧುನಿಕ ಕನ್ನಡಕಾವ್ಯದ ಮಹಿಳೆಯರ ಮೊದಲ ತಲೆಮಾರಿನ ಬೆಳಗೆರೆ ಜಾನಕಮ್ಮನವರು ಗಾಂಧೀಜಿಯವರ ಕುರಿತು ಬರೆಯುವಾಗ

**'ಚಿದ್ರೂಪನಂತೆ ತೊಳತೊಳಗಿ ಬೆಳಗುತಿಹ**
**ದಿವ್ಯಜ್ಞಾನಿ ತಾತ'**

**(ಕರ್ಮಯೋಗಿ ಗಾಂಧೀಜಿ – ಕಲ್ಯಾಣ – ಪುಟ ೧೭೩)**

ಚಿತ್‌ರೂಪ–ಚಿದ್ರೂಪವಾಗಿದೆ. ಭಾರತ ಸ್ವಾತಂತ್ರ್ಯ ಸಂಗ್ರಾಮ ಮತ್ತು ಸಾಮಾಜಿಕ ಸುಧಾರಣಾ ಮಾರ್ಗಗಳಲ್ಲಿ ತನ್ನದೇ ಸ್ವಂತಿಕೆಯನ್ನು ಮೆರೆದಿದ್ದ ಗಾಂಧೀಜಿಯವರನ್ನು ಸಮಕಾಲೀನ ವ್ಯಕ್ತಿಯೊಬ್ಬರು

ಕಂಡ ದೈವಸ್ವರೂಪಿ ಭಾವ ಇಲ್ಲಿ ಕಾಣುತ್ತದೆ. ನಿಷ್ಕಲ್ಮಶ ಪ್ರೀತಿಗೆ ಅದರ ಕಾಯುವಿಕೆಗೆ 'ರಾಧೆ'ಯೇ ಉತ್ತಮ ಉದಾಹರಣೆ. ಇಂತಹ ರಾಧೆ ಕೃಷ್ಣನನ್ನು ಕಾಯುವಾಗ ಅಥವಾ ಬಂದೇ ಬರುವನೆಂಬ ನಿರೀಕ್ಷೆಯಲ್ಲಿ ಕಾಯುವ ಪ್ರತಿ ಮನಸ್ಸೂ 'ರಾಧೆ'ಯಾಗುವಾಗ ನೆನಪುಗಳನ್ನು ಕುರಿತು ತಾರಿಣಿ ಶುಭದಾಯಿನಿಯವರು ಅವರ ಒಂದು ಪದ್ಯದಲ್ಲಿ ಹೀಗೆ ಹೇಳಿದ್ದಾರೆ:

**ಹುಳಿಮಜ್ಜಿಗೆಯೊಳಗಣ। ಬೆಣ್ಣೆ ಬಂದಂತೆ ಬರುವನು**
**ಕೃಷ್ಣ । ಮೈಕೈಮೆತ್ತಿಕೊಂಡು ಜಿಡ್ಡಾಗುವುದು ನೆನಪು**
**(ತಪ್ತ – ಚಿತ್ತಗ್ಲಾನಿಯ ಮಾತು – ಪುಟ ೪೧)**

ಬೆಣ್ಣೆ ಯಾವಾಗಲೂ ಮುಟ್ಟಿದರೆ ಜಿಡ್ಡಾಗುವುದು. ಬಿಸಿನೀರಿನಲ್ಲಿ ಅದನ್ನು ತೊಳೆದು ಪೂರೈಸಲಾಗದು. ಇಲ್ಲಿ ತೃಪ್ತವಾಗದ ಮನಸಿನ ನೆನಪು ಕೂಡ ಅಳಿಸಿಹೋಗುವುದು ಸುಲಭವಲ್ಲ ಎನ್ನುವುದನ್ನು ದೈನಂದಿನ ಮಜ್ಜಿಗೆ ಕಡೆಯುವ ಕ್ರಿಯೆ, ಕೃಷ್ಣ ಮೂಡಿಬರುವ ಪೌರಾಣಿಕ ನಂಬಿಕೆ ಎರಡರ ಸಮ್ಮಿಲನದೊಂದಿಗೆ ಹೊಸದೊಂದು ಬಗೆಯ ಉಪಮೆಯನ್ನು ಕವಯಿತ್ರಿ ರಚಿಸುತ್ತಾರೆ. ಇದೇ ಕವಯಿತ್ರಿ ಕೋಮು ರಾಜಕಾರಣವನ್ನು ಕುರಿತು ಬರೆಯುವಾಗ:

**ಸಂಜೆಗತ್ತಲಿನ ಮಬ್ಬು ರಾಕ್ಷಸ ನೆರಳ ಪಾತಕದಂತೆ**
**ಹರಡಿಕೊಂಡಿದೆ ರಾಮರಕ್ಷೆಯ ಹಳಿಸಡಿಲಾಗಿ**
**ರೈಲು ಸಾಲಾಗಿ ಉರುಳಿ। ಸುರುಳಿಯಾಗಿ ಚಾಪೆಯಲಿ**
**ಸುತ್ತಿ ಪ್ಯಾಕ್ ಆದ ಹೆಣಗಳು**
**ಮನೆಗೆ ಬರಲು ದಾರಿ ಹುಡುಕಿವೆ**
**(ಡಿಸೆಂಬರ್ ಆರು – ಚಿತ್ತಗ್ಲಾನಿಯ ಮಾತು – ಪುಟ ೩೬)**

ಅಯೋಧ್ಯೆಯ ರಾಮಮಂದಿರ, ಬಾಬರಿಮಸೀದಿ ವಿವಾದದ ಕರಿನೆರಳು ಗೋಧ್ರಾಹತ್ಯಾಕಾಂಡ ವಾಗಿ ಮುಂದುವರಿದ ದುರಂತವನ್ನು ಅವರು ರಾಕ್ಷಸ ನೆರಳಿನ ಪಾತಕಕ್ಕೆ ಹೋಲಿಸುತ್ತಾರೆ. ಕೆಡಕು ಕೆಟ್ಟದ್ದನ್ನೇ ಬೆಳೆಯುತ್ತದೆ. ಕಾಲಾನಂತರದಲ್ಲೂ ಅದರ ಪರಿಣಾಮ ಇದ್ದೇ ಇರುತ್ತದೆ ಎಂಬುದಕ್ಕೆ ಇದು ಸಾಕ್ಷಿಯಾಗಿ ಕವಿಗೆ ಕಂಡಿದೆ. 'ಕೋಮುವಾದ' ರಾಕ್ಷಸ ನೆರಳಿನಷ್ಟೆ ಭೀಕರ ಎಂಬ ಅಂಶ ಕೂಡ ಇಲ್ಲಿ ಎದ್ದು ಕಾಣುವಂತಹುದು. ವಿಶೇಷ ಶಕ್ತಿಯುಳ್ಳ, ಮಾನವ ಆವಿಷ್ಕಾರಗಳಿಗೂ ದೈವಕೃಪೆಯ ತಳಕುಹಾಕುವ ಪ್ರಯತ್ನವಾಗಿ ಭಾಗ್ಯಜಯಸುದರ್ಶನ ಬಳಸಿರುವ ಈ ಉಪಮೆಯನ್ನು ಕಾಣಬಹುದು.

**ಶ್ರೀಕೃಷ್ಣ ಪರಮಾತ್ಮ ನೀಡಿದ ದಿವ್ಯ ದೃಷ್ಟಿಯಂತೆ**
**ನೀನು ನಿಂತೆ ಅನಂತ ಆಗಸದಲ್ಲಿ**
**(ಹಬಲ್ ದೂರದರ್ಶಕ – ಭಾವಸಂಚನ – ಪುಟ ೧೪೯)**

ಅಂತರಿಕ್ಷದಲ್ಲಿ ಸ್ಥಾಪಿತವಾಗಿರುವ ಹಬಲ್ ದೂರದರ್ಶಕವು ಅಂತರಿಕ್ಷದ ಕುರಿತ ಮಾನವ ಸಾಧನೆಗೆ ಮುನ್ನುಡಿಯಾಗಿದೆ. ಮನುಕುಲದ ಈ ಮಹತ್ತರ ಬೆಳವಣಿಗೆಯನ್ನು ವಾಸ್ತವಶಕ್ತಿಯೆಂದು ನಂಬಲಾಗಿದೆ. ಅದಕ್ಕೆ ದೈವಶಕ್ತಿಯ ಹೋಲಿಕೆ ಮಾಡಿರುವುದರಿಂದ ವೈಜ್ಞಾನಿಕ ಆವಿಷ್ಕಾರವೊಂದು ಪೌರಾಣಿಕ ನಂಬಿಕೆಗೆ ಪುಷ್ಟಿ ನೀಡಿದೆ. ಕಾವ್ಯದಲ್ಲಿ ದೊರೆಯುವ ಮುಕ್ತವಾದ ಭಾವನೆಯನ್ನು ವಿವರಿಸುವಾಗ ಗಿರಿಜಾಶಾಸ್ತ್ರಿಯವರು ಹೀಗೆ ಹೇಳುತ್ತಾರೆ:

**ಕದ್ದು ಮುಚ್ಚಿ ಕೋಣೆಯೊಳಗೆ**
**ಅಭಿಸಾರಿಕೆಯಂತೆ ನಿನ್ನ ಕೂಡುವುದಕ್ಕಿಂತ**
**ಕವಿತೆಯ ಬಂಧದೊಳಗೆ**
**ಬಿಡುಗಡೆಯಾಗುವುದೇ ನನಗೆ ಇಷ್ಟ**

**(ಕೋಣೆ ಮತ್ತು ಕವಿತೆ – ಪುಸ್ತಕ ಮತ್ತು ನವಿಲುಗರಿ – ಪುಟ ೧೨೩)**

ಇಲ್ಲಿ 'ಕೋಣೆ' 'ಕವಿತೆ'ಗಳೆರಡೂ ಒಂದು ಆವರಣವನ್ನು, ಚೌಕಟ್ಟನ್ನು ಹೊಂದಿರುವಂತಹವು. 'ಕೋಣೆ' ದೈಹಿಕವಾಗಿ, ಮಾನಸಿಕವಾಗಿ ವಿರಾಮ ನೀಡುವ ಸ್ಥಳ. ಕವಿತೆ ಕೂಡ ಕವಯಿತ್ರಿ ಮನಸ್ಸು ನಿರಾಳವಾಗುವ ಮಾರ್ಗ. ಕೋಣೆ ಎಲ್ಲರಿಗೂ ಲಭ್ಯವಾಗಬಹುದು ಆದರೆ ಕವಿತೆ ಎಲ್ಲರಿಗೂ ದಕ್ಕುವುದಲ್ಲ. ಹಾಗಾಗಿಯೇ ಈ ಕವಯಿತ್ರಿಯ ಆಯ್ಕೆ 'ಕವಿತೆ' ಮಾನಸಿಕವಾಗಿ ತನ್ನನ್ನು ತಾನು ತೆರೆದುಕೊಳ್ಳಲು ಕವಿತೆಯೇ ಉತ್ತಮವಾದ ಆಯ್ಕೆಯಾಗಿ ಈ ಕವಯಿತ್ರಿಗೆ ಕಂಡಿದೆ. ಬದುಕಿನ ಒಂದು ಹಂತದಲ್ಲಿ ಮುಗ್ಧತೆಯಿಂದ, ಗಂಭೀರತೆಗೆ ಪ್ರತಿಯೊಬ್ಬರೂ ತೆರೆದುಕೊಳ್ಳಲೇಬೇಕು. ಹೀಗೆ ಆಲೋಚನೆಗಳು ಮನಸ್ಸಿನಲ್ಲಿ ಗರಿಗೆದರುವ, ಚಿಂತನೆಗಳು ಪಕ್ವಾಗುವ ಕುರಿತು ಈ ಕವಯಿತ್ರಿ ನೀಡುವ ಹೋಲಿಕೆ:

**ಹೆದ್ದಾರಿಗೆ ಚಾಚಿ ಮೈಕೈ। ಕಬಂಧನಂತೆ**
**ಒಳಗೇ ಕುಳಿತು ತತ್ತಿ ಇಕ್ಕುವ। ಹುಳುವಿನಂತೆ**
**ಹೆತ್ತ ಕೂಸುಗಳನ್ನೆಲ್ಲ ತುತ್ತುಕೊಳ್ಳುವ ಇವು**
**ಮುಗಿದೇ ಬಿಡುತ್ತವೆ ಸುಳಿವೇ ಕೊಡದಂತೆ**
**ನಡುಹಗಲಲ್ಲೇ ರಾತ್ರಿ ಇಳಿದಂತೆ**

**(ಪರ್ವ – ಪುಸ್ತಕ ಮತ್ತು ನವಿಲುಗರಿ – ಪುಟ ೪೪)**

ಹುಳುವೇನೋ ಒಳಗೆ ಕುಳಿತು ತತ್ತಿ ಇಕ್ಕಬಹುದು. ಆದರೆ ನಡುಹಗಲಲ್ಲಿ ರಾತ್ರಿ ಇಳಿಯುವುದೆಂದರೆ ಸಂಭವಿಸಬಾರದ ಕಾಲಕ್ಕೆ ಸಂಭವಿಸುವುದು ಎಂಬುದಿಲ್ಲಿನ ವಿದಿತವಿರಬಹುದು. ಪ್ರಕೃತಿ ವ್ಯಾಪಾರಗಳು ಹೇಗೆಲ್ಲ ಬದಲಾಗುವ ಸಾಧ್ಯತೆಗಳು ಇದ್ದೇ ಇರುತ್ತದೆ. ಹಾಗೆಯೇ ಮನುಷ್ಯ ಭಾವನೆಗಳು ಕೂಡ ಬದಲಾವಣೆಯಿಂದ ದೂರವಾದವಲ್ಲ. ಇದೇ ಕವಯಿತ್ರಿ 'ಅಮ್ಮನ' ಮಹತ್ವವನ್ನು ನೆನಪಿಸುವಾಗ ಬಳಸುವ ಉಪಮೆ:

**ಅಮ್ಮನೆಂದರೆ ಹಾಗೆ!**

**ಮುಳ್ಳಲ್ಲಿ ಗುಲಾಬಿ ಅರಳಿದ ಹಾಗೆ**

**ಕಾಡು ಬೆಳದಿಂಗಳಲ್ಲಿ। ಕಂದಪುಷ್ಪದ ಹಾಗೆ**

**...ನಮ್ಮನ್ನು ಎಂದೂ ಪೂರ್ವಕ್ಕೆ ನಿಲ್ಲಿಸುವವಳು**

**ತಾನು ಮಾತ್ರ ಪಶ್ಚಿಮದಲ್ಲೇ ಕರಗಿ ಹೋಗುವವಳು**

**ಇದರ ಜೊತೆಗೆ**

**ನಾವು ಮಕ್ಕಳೆಂದರೆ ಹೀಗೆ**

**ಊರೆಲ್ಲಾ ಕಾ ಕಾ ಕರೆದು। ಉಣಬಡಿಸುತ್ತೇವೆ**

**ದಾನ ದತ್ತಿಗಳ ದೊಡ್ಡಸ್ತಿಕೆಗೆ**

**(ಮೋಂಬತ್ತಿ – ಅದೇ ಪುಸ್ತಕ – ಪುಟ ೬೫)**

ಇಲ್ಲಿ ಅಮ್ಮ, ಮಕ್ಕಳನ್ನು ಚಿತ್ರಿಸುವ ಉಪಮೆಗಳು ಹೊಸತಲ್ಲದಿರಬಹುದು. ಆದರೆ ವಿಷಯದ ಗಾಂಭೀರ್ಯತೆಯಿಂದಾಗಿ ಕವಯಿತ್ರಿ ಕೊಡುವ ಹೋಲಿಕೆಗಳು ಅಮ್ಮನ ವ್ಯಕ್ತಿತ್ವವನ್ನು ಉದ್ದೀಪಿಸುತ್ತವೆ. ಸತ್ತ ನಂತರ ಮಾಡುವ ಯಾವ ಕ್ರಿಯೆ, ಅದ್ದೂರಿತನಗಳೂ ಸತ್ತ ವ್ಯಕ್ತಿಗೆ ಸಲ್ಲುವುದಿಲ್ಲ. ಇದ್ದವರು ತಮ್ಮ ಬೆನ್ನು ಚಪ್ಪರಿಸಿಕೊಳ್ಳಲು ಮಾತ್ರ ಎನ್ನುವ ಸಾರ್ವಕಾಲಿಕ ಅನುಭವವೇ ಇಲ್ಲಿ ದಾಖಲಾಗಿದೆ. ಬೆಳವಣಿಗೆಯತ್ತ ಮಕ್ಕಳನ್ನು ಒಯ್ದು, ತಾನು ಮಾತ್ರ ಅವನತಿಯತ್ತ ಸಾಗುವ 'ಅಮ್ಮ'ನೆಂಬ ಭಾರತೀಯ ಪರಂಪರೆಯ ಹೆಣ್ಣು ತನ್ನೆಲ್ಲ ಆಯ್ಕೆಗಳನ್ನು ಹತ್ತಿಕ್ಕಿ ತನ್ನನ್ನೇ ತಾನು ತೇದುಕೊಳ್ಳುವ ವ್ಯಕ್ತಿತ್ವ ಕಣ್ಣ ಮುಂದೆ ನಿಲ್ಲುತ್ತದೆ.

ಹಣ ಸಂಬಂಧಿ ವ್ಯವಹಾರಗಳಿಂದಾಗಿ ಮನುಷ್ಯ ಭಾವಲೋಕದಿಂದ ದೂರವಾಗುತ್ತಿದ್ದಾನೆ ಎಂಬುದು ಸಮಕಾಲೀನ ಜಗತ್ತು ಎದುರಿಸುತ್ತಿರುವ ಆತಂಕಗಳಲ್ಲೊಂದಾಗಿದೆ. ಇದೇ ಸಮಯದಲ್ಲಿ ಬಹುಜನರ ಹರ್ಷಕ್ಕೆ ಕಾರಣವಾಗುತ್ತಿದ್ದ ಹಬ್ಬಹರಿದಿನಗಳೂ ಕೂಡ ಯಾಂತ್ರೀಕರಣಗೊಂಡ ಆತಂಕ ಸೂಕ್ಷ್ಮ ಸಂವೇದನಾ ಮನಸ್ಥಿತಿಯುಳ್ಳವರದ್ದು. ಇಂತಹ ಒಂದು ಆತಂಕ ಪವಿತ್ರ ಪ್ರಿಯ ಭಾಷಿಣಿಯವರಲ್ಲಿ ಹೀಗೆ ವರ್ಣಿತವಾಗಿದೆ:

**ಅಕ್ಕರೆಯ ಬೆಲ್ಲದಂಥ। ಮಾತೆಲ್ಲ ವಲಸೆ ಹೋಗಿವೆ**

**ಹಿಂತಿರುಗದ ಬೆಳ್ಳಕ್ಕಿಯಂತೆ**

**(ಶ್ರಾವಣವೆ ಮೈದಳೆದರೆ – ನಕ್ಷತ್ರಕೆ ಪಾತಿ – ಪುಟ ೪೨)**

ಕುವೆಂಪು ಅವರಿಗೆ 'ದೇವರ ರುಜುವಾಗಿ' ಕಾಣಿಸಿಕೊಂಡ ಬೆಳ್ಳಕ್ಕಿ ಸಾಲು ಈ ಕವಿಗೆ ಮರಳಿ ಬಾರದ ಅಥವಾ ತತ್‌ಕ್ಷಣಕ್ಕೆ ಕಣ್ಮರೆಯಾದ ಜೀವನ ಮೌಲಿಕತೆಗಳ ಸೂಚಕವಾಗಿ ಕಂಡಿವೆ. ಆದರೆ ಅವು ವಲಸೆ ಹೋಗಿರುವುದರಿಂದ ಹಿಂತಿರುಗುವ ಆಶಾಭಾವನೆಯೂ ಇದೆ. ಹಾಗೆಯೇ ಅವು ಹಿಂದಿರುಗಲು ಬೇಕಾದ ಪರಿಸ್ಥಿತಿ ನಿರ್ಮಾಣ ಮಾಡಬೇಕೆನ್ನುವ ಒತ್ತಾಸೆಯೂ ಇರಬಹುದು.

ಸಾಮಾಜಿಕ ಬಂಧಗಳು 'ಸ್ತ್ರೀ'ಯ ಸಂದರ್ಭದಲ್ಲಿ ಕಠಿಣವಾಗಿರುವ ಕುರಿತು ಮಹಿಳಾ ಕಾವ್ಯ ದನಿ ಎತ್ತುತ್ತಲೇ ಬಂದಿದೆ. ಈ ಕಠಿಣವಾದ ಬಂಧಗಳಿಂದ ಬಿಡಿಸಿಕೊಳ್ಳುವುದು ಬಹಳ ಕಷ್ಟಕರವಾದ ಸಂಗತಿಯೇ ಆಗಿದೆ. ಹೀಗೆ ಈ ಬಂಧನ ತೀವ್ರತೆಯನ್ನು ಮಾಧವಿ ಭಂಡಾರಿ ಹೋಲಿಸುವುದು 'ಆಕ್ಟೋಪಸ್'ಗೆ :

**ಬೆಳಕೆಲ್ಲ ಬತ್ತಿದಂತೆ। ಕತ್ತಲಲ್ಲಿ ಕರಗಿದಂತೆ**
**ಲಜ್ಜೆಯ ಆಕ್ಟೋಪಸ್ ಹಿಡಿತದಲ್ಲಿ**
**ಅಂಗುಲ ಅಂಗುಲವಾಗಿ ಸಾಯುತಿರುವಂತೆ**

**(ಗುಲ್ ಮೋಹರ್ – ಹರಿದ ಸ್ಕರ್ಟಿನ ಹುಡುಗಿ – ಪುಟ ೪೧)**

'ಲಜ್ಜೆ'ಯೆಂಬ ಆಕ್ಟೋಪಸ್ ಹೆಣ್ಣಿನ ಜೀವನದಲ್ಲಿ ಪ್ರವೇಶಿಸಿದಷ್ಟು ಅನ್ಯಲಿಂಗವನ್ನು ಪ್ರಭಾವಿಸಲಾರದು. ಇದಕ್ಕೆ ಕಾರಣ ಮತ್ತೆ ಅದೇ ಹಳೆಯ, ಹೆಣ್ಣನ್ನು ನೋಡುವ ಸಮಾಜದ ದೃಷ್ಟಿಕೋನ ಎಂದು ಸೂಚಿಸಬಹುದು. ಒಮ್ಮೆ ಈ ಹಿಡಿತಕ್ಕೆ ಸಿಕ್ಕರೆ ಅದರಿಂದ ತಪ್ಪಿಸಿಕೊಳ್ಳುವ ಯಾವ ಪ್ರಯತ್ನವೂ ಫಲಿಸದು ಎಂಬುದನ್ನು 'ಕತ್ತಲಲ್ಲಿ ಕರಗಿದಂತೆ' ಎಂಬ ವಾಕ್ಯ ಪುಷ್ಟೀಕರಿಸುತ್ತದೆ. ಹೀಗೆ ಸುತ್ತಲಿನ ತೀಕ್ಷ್ಣದೃಷ್ಟಿಯನ್ನು ಎದುರಿಸಲಾಗದೆ, ತನ್ನೊಳಗೆ ಹುಟ್ಟಿಕೊಂಡ ಆಕ್ಟೋಪಸ್ ಹಿಡಿತ ಅಕ್ಕನ ವಚನ 'ತೆರಣಿಯ ಹುಳು ತನ್ನನೆ ತಾ ಸುತ್ತಿಕೊಂಡು ಸಾವ' ವಚನವನ್ನು ನೆನಪಿಸುತ್ತದೆ. ಸ್ತ್ರೀ ಮನಸ್ಸಿನ ಸಂಕೋಚ, ನೋವನ್ನು ಮರೆಮಾಚಿ ನಗುವನ್ನು ತೋರಿಸುವ ಗುಣವನ್ನು ಸಿಂಧು ಹೆಗಡೆ ತಮ್ಮ ಕವನದಲ್ಲಿ ಉಪಮಿಸುವುದು ಹೀಗೆ :

**ನಗುವಾಗಲೂ ಕಣ್ಣಂಚಿನಲ್ಲಿ ನೀರು**
**ಬರುತ್ತಿದೆ ಆಮಂತ್ರಣವಿಲ್ಲದೆ**
**ಗೂಢಚಾರಿಗಳಂತೆ। ಬೆನ್ನ ಹಿಂದಿನ ಮಾತುಗಳಂತೆ**

**(ನಗುತ್ತೇನೆ ಮರೆಯಲ್ಲಿ – ಪುಟ ೩೬)**

ಗೂಢಚಾರಿಯ ಕೆಲಸವೇ ಬೇರೆಯವರ ಮೇಲೆ ಹದ್ದಿನ ಕಣ್ಣಿರಿಸಿ ಅವರೆಲ್ಲ ಚಲನವಲನಗಳನ್ನು ಗಮನಿಸುತ್ತಿರುವುದು, ಅಪಾಯವೆನಿಸಿದಾಗ ಬೀದಿಗೆಳೆಯುವುದು. ಹಾಗೆಯೇ ಇದು ಬೇರೆಯವರ ಜೀವನದ ಮೇಲೆ ನಡೆಸುವ ದಾಳಿಯೂ ಆಗಿದೆ. ಇಲ್ಲಿ ಸಂಭ್ರಮದಿಂದಿರುವಾಗ ಅಳು ಬರುವುದಾದರೂ ಏಕೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಉತ್ತರ ಆನಂದಬಾಷ್ಪವೂ ಆಗಿರದೆ ತನ್ನನ್ನೇ ತಾನು ಅಣಕಕ್ಕೀಡುಮಾಡಿಕೊಳ್ಳುವ ಪರಿಯೂ ಆಗಿರಬಹುದು.

ದೈನಂದಿನ ತೀರಾ ಸಾಮಾನ್ಯವೆನ್ನಿಸಿಕೊಳ್ಳುವ ಸಂಗತಿಗಳೂ ಕೂಡ ಕಾವ್ಯದಲ್ಲಿ ಉಪಮೆಗಳಾಗಿ ಬಳಕೆಯಾಗುವುದನ್ನು ಮಹಿಳಾಕಾವ್ಯದಲ್ಲಿ ಗುರುತಿಸಬಹುದು. ಆದರೆ ಅವು ಹೇಳುತ್ತಿರುವ ವಿಷಯ ಮಾತ್ರ ಗಂಭೀರವಾದುದಾಗಿರುತ್ತದೆ.

**ಜುಮ್ಮೆನಿಸುವ ಆಲೋಚನೆಗಳನ್ನೆಲ್ಲಾ**
**ಹಾಗೇ ಡಬ್ಬಿಯೊಳಗೆ ಹಿಟ್ಟು ಒತ್ತಿದಂತೆ**
**ಒತ್ತಿ ಒತ್ತಿ ಗಟ್ಟಿ ಮಾಡುತ್ತೇವೆ**
**('ನಾವು ಹುಡುಗಿಯರೇ ಹೀಗೆ' – ಪ್ರತಿಭಾ ನಂದಕುಮಾರ್)**

ತನ್ನ ಆಸೆ, ಕನಸು, ಭಾವನೆಗಳನ್ನು ಅದುಮಿಟ್ಟುಕೊಳ್ಳುವುದು ಹೆಣ್ಣಿನ ಸಾಮಾನ್ಯ ಲಕ್ಷಣಗಳಲ್ಲೊಂದು ಇದಕ್ಕೆ ಸೂಕ್ತ ಅವಕಾಶ ಮಾಡಿಕೊಂಡರೂ ಪಿತೃಪ್ರಧಾನ ವ್ಯವಸ್ಥೆ ಅದನ್ನು ಸ್ವೀಕರಿಸುತ್ತದೆಯೋ ಇಲ್ಲವೋ ಎಂಬ ಆತಂಕ, ನಗೆಪಾಟಲಿಗೀಡಾಗುವ ಭಯ. ಡಬ್ಬಿಯಲ್ಲಿ ಒತ್ತಿಟ್ಟು ಹಿಟ್ಟು ಕ್ರಮೇಣ ತನ್ನ ಆಕಾರವನ್ನು ಕಳೆದುಕೊಳ್ಳುತ್ತದೆ. ಮುಚ್ಚಿಡುವುದರಿಂದ ದಾರಿಯನ್ನೂ ಕಳೆದುಕೊಳ್ಳುತ್ತದೆ. ಇಂತಹುದೇ ದೈನಂದಿನ ಬಳಕೆಯ ಊದಿನಕಡ್ಡಿಯನ್ನು ಕಾಡುವ ನೆನಪಿಗೆ ಸಿಂಧೂ ಹೆಗಡೆ ಹೋಲಿಸಿದ್ದಾರೆ.

**ನಿನ್ನ ನೆನಪು ಕಾಡಿದಷ್ಟು ಘಮ ಘಮ**
**ಊದಿನಕಡ್ಡಿಯ ಪರಿಮಳದ ಹಾಗೆ**

**(ನನಗೆ ಇನ್ನೂ ಬೇಕು ನೀನು – ನಗುತ್ತೇನೆ ಮರೆಯಲ್ಲಿ – ಪುಟ ೨೦)**

'ಘಮ ಘಮ'ಕ್ಕೆ ಮಲ್ಲಿಗೆಯನ್ನೋ, ಸಂಪಿಗೆಯನ್ನೋ ಹೋಲಿಸುವುದು ವಾಡಿಕೆ. ಆಧುನಿಕ ಪರಿಸರದಲ್ಲಿ ಅವೆರಡೂ ದುರ್ಲಭವಾಗುತ್ತಿರುವ ವ್ಯಂಗ್ಯವೋ ಎಂಬಂತೆ ಊದಿನಕಡ್ಡಿಯೊಂದು ಉಪಮೆಯಾಗಿ ಬಳಕೆಯಾಗಿದೆ. ಜೊತೆಗೆ ಅದರ ಆಯುಷ್ಯವೂ ಕಡಿಮೆ. ಬೇಗ ಉರಿದು ಹೋಗುವುದೇನೋ ಎಂಬ ಆತಂಕ, ಒಮ್ಮೆ ಉರಿದು ಮುಗಿಯಿತೆಂದರೆ ಸಿಗುವುದು ಕೇವಲ ಬೂದಿ.

ಪ್ರೀತಿ ಅಷ್ಟೊಂದು ಕ್ಷಣಿಕವೇ ಎಂಬ ಪ್ರಶ್ನೆ ಕೂಡ ಹುಟ್ಟುತ್ತದೆ. ತಾನು ಏನಾಗಬೇಕು, ಹೇಗೆ ಬದುಕಬೇಕು ಎಂಬ ಕನಸನ್ನು ಎಂ.ಆರ್. ಭಗವತಿ ಹೀಗೆ ಕಾಣುತ್ತಾರೆ.

**ಆಲವಾಗಬೇಕು ಬಿಳಲುಗಳು**
**ಉದ್ದಚಾಚಿ ಹರಡಬೇಕು**
**ಹಕ್ಕಿಗೆ ಗೂಡಾಗಬೇಕು**
**ಇರುವೆಯಂತೆ ಬದುಕಬೇಕು**

**(ಕಾಂಕ್ಷೆ – ಏಕಾಂತದ ಮಳೆ – ಪುಟ ೪೨)**

'ಇರುವೆ' ಶ್ರಮಜೀವಿ. ಒಗ್ಗಟ್ಟಿನಲ್ಲಿ, ಸಹಬಾಳ್ವೆ ನಡೆಸುವ ಸ್ನೇಹಜೀವಿ. ಒಂದು ಅಗುಳು ಸಿಹಿಗೆ ತನ್ನೆಲ್ಲ ಬಳಗವನ್ನು ಸೇರಿಸಿಕೊಳ್ಳುವ ಬಾಂಧವ್ಯವಿರುವಂತಹುದು. ಆದರೂ ಯಾರಾದರೂ ಕಾಲಲ್ಲಿ ಹೊಸಕಿಹಾಕಿದರೆ ಸತ್ತುಹೋಗುವ ಕ್ಷಣಿಕ ಆಯಸ್ಸುಳ್ಳ ಜೀವಿಯೂ ಹೌದು. ಇಂತಹ ದುರಾಕ್ರಮಗಳಿಲ್ಲದಿದ್ದಲ್ಲಿ ಪ್ರಕೃತಿಸಹಜವಾದ ಮಳೆ, ಬಿಸಿಲು, ಗಾಳಿ ಅಪ್ಪಳಿಸಿದರೂ ತನ್ನ ಗೂಡನ್ನು ಮತ್ತೆ ಮತ್ತೆ ಕಟ್ಟಿಕೊಳ್ಳುವ, ಅಪಾಯದ ಸೂಚನೆ ಸಿಗುತ್ತಿದ್ದಂತೆಯೇ ಭವಿಷ್ಯದ ಯೋಜನೆ ಕೈಗೊಳ್ಳುವ ಚಾಣಾಕ್ಷಮತಿಯೂ ಹೌದು. ಈ ಎಲ್ಲ ಗುಣಗಳು ತನ್ನಲ್ಲಿ ಇರಬೇಕೆಂಬ ಬಯಕೆ ಈ ಕವಿಯದಾಗಿರುವುದರಿಂದ 'ಇರುವೆ'ಯಂತಹ ಬದುಕನ್ನು ಆಹ್ವಾನಿಸಿಕೊಳ್ಳುತ್ತಿದ್ದಾರೆ. ಇಂತಹುದೇ ಒಂದು ಬದುಕು ಕಟ್ಟಿಕೊಳ್ಳುವ ಬಯಕೆ ಗೀತಾ ವಸಂತ ಅವರ ಒಂದು ಕವಿತೆಯಲ್ಲೂ ಬಂದಿದೆ. ಏಎಲ್ಲಾ ಆಯ್ಕೆಗಳಿದ್ದಾಗೂ ಕೊನೆಗೆ ಆಕೆಗೆ ಉಳಿಯುವುದು

**ಬಿಳಿಯ ಹಾಳೆಯ ಹಾಗೆ**
**ಭಣ ಭಣ ದಿನ**

**(ಬಿಡಿಸಬೇಕು ಒಂದು ಚೆಂದನ್ನ ಚಿತ್ರ – ಪರಿಮಳದ ಬೀಜ – ಪುಟ ೫೩)**

ಹೀಗೆ ದಿನವಿಡೀ ಭಣಭಣಗುಡುತ್ತಿದ್ದರೂ ತನ್ನದಾದ ಒಂದು ಸ್ವತಂತ್ರವಾದ ಚಿತ್ರವನ್ನು ಬಿಡಿಸಲಾಗದ ಅಸಹಾಯಕತೆಯನ್ನು ಕವನ ವಿವರಿಸುತ್ತಾ ಹೋಗುತ್ತದೆ. ಇಲ್ಲಿ 'ಬಿಳಿ' ನೈರ್ಮಲ್ಯದ ಸಂಕೇತವೂ ಹೌದು. ಮೂಡಿದ ಚಿತ್ರ ಅಂದವಾಗಿ ಬಂದರೇನೋ ಸರಿ. ಆದರೆ ಚಿತ್ರದ ಅಂದ ಕೆಡಿಸುವ ಅಪಾಯಗಳು ಸುತ್ತಮುತ್ತಲೂ ಇವೆ. ಇದೇ ಭಯ ಕವಿತೆಯಲ್ಲಿ ಮುಂದುವರಿಯುತ್ತದೆ.

ಪದ್ಯರಚನೆಯ ವಿಭಿನ್ನ ರೀತಿಗಳನ್ನು ಕುರಿತು ಹೇಳುವಾಗಲೂ ದೈನಂದಿನ ಸಾಮಾನ್ಯ ಉಪಮೆಗಳೊಂದಿಗೆ ಕವಿತೆಯ ವಿಭಿನ್ನ ಮುಖಗಳು, ವಿಶಿಷ್ಟ ಶಕ್ತಿಯನ್ನು ವಿವರಿಸುವ ಪ್ರಯತ್ನವನ್ನು ಪ್ರತಿಭಾ ನಂದಕುಮಾರ್ ಹಾಗೂ ತಾರಿಣಿ ಶುಭದಾಯಿನಿಯವರ ಕವನಗಳಲ್ಲಿ ಕಾಣಬಹುದು.

**ಕೆಲವು ಕವನಗಳು**
**ಆಗ ತಾನೆ ಇಸ್ತ್ರಿ ಮಾಡಿದಂತೆ। ನೀಟಾಗಿರುತ್ತವೆ**
**ಇನ್ನು ಕೆಲವು ಕವನಗಳು। ತೊಟ್ಟರೂ ತೊಡದಂತಿರುವ**
**ಪ್ಯಾಂಟು ಷರ್ಟುಗಳಲ್ಲಿ ಕಂಗೊಳಿಸುತ್ತವೆ.**

**(ಕವನಗಳು – ಪ್ರತಿಭಾ ನಂದಕುಮಾರ್ ಅವರ ಆಯ್ದ ಕವನಗಳು – ಪುಟ ೨೨)**

ಇಸ್ತ್ರಿ ಮಾಡಿದಾಗಿನ ಗರಿಗರಿಯ ಭಾವನೆ ತೊಡುವವರಿಗೆ ಹಿತವೆನಿಸುತ್ತದೆ. ಒಂದೆರಡು ಬಾರಿ ಹಾಕಿದರೆ ಸುಕ್ಕಾಗುತ್ತದೆ. ಕೆಲವು ಕವನಗಳೂ ಕೂಡ ಮೇಲ್ನೋಟಕ್ಕೆ ಉತ್ತಮವೆಂದು ಕಾಣಿಸಿಕೊಂಡರೂ ಒಳಗಿನ ಅರ್ಥಸಾಧ್ಯತೆಗಳ ಮಿತಿಯಿಂದಾಗಿ ತಮ್ಮ ಹೊಳಪನ್ನು ಕಳೆದುಕೊಳ್ಳುವ ಭಯವಿರುತ್ತದೆ. ತೊಟ್ಟರೂ ತೊಡದಂತಿರುವ ಕವನಗಳು ವಿಭಿನ್ನ ಅರ್ಥಸಾಧ್ಯತೆಗಳಿಂದಾಗಿ ಧ್ವನಿಪೂರ್ಣವಾಗಿರುತ್ತವೆ ಎಂಬ ಕವಿತೆಯ ವಿಭಿನ್ನ ಶಕ್ತಿಯನ್ನು ತನ್ಮೂಲಕ ರಚನೆಕಾರರ ಶಕ್ತಿಯನ್ನು ವರ್ಣಿಸಲಾಗಿದೆ. ತಾರಿಣಿಯವರ ಕವನ ಪದ್ಯವನ್ನು ವಿವರಿಸುವುದು ಹೀಗೆ :

**ಕೆಲವು ಪದ್ಯ ಹಾಗೇನೇ ।ಜಿಗಣೆ ತರ**
**ರಕ್ತ ಹೀರಿದರೇ ಸಮಾಧಾನ**
**...... ಕಾಫಿ ಡಿಕಾಕ್ಷನ್ ತರ**
**ಸಾರವಿಳಿದು ನಿಂತು ಬಿಡುತ್ತವೆ**
**ಪೊಲೀಸ್ ಪೆರೇಡಿನ ತರ**
**ದೂರಕ್ಕಷ್ಟೆ ಶಿಸ್ತಾಗಿ ಕಾಣುತ್ತವೆ**
**ಮರದ ತರ। ಬೇರು ಬಿಟ್ಟು ನಿಂತೇ ಬಿಡುತ್ತವೆ**
**ಪದ್ಯದ ತರ। ಬಳಗನ್ನೆಲ್ಲ ಬರಿದು ಮಾಡಿ**
**ಬಯಲಲಿ ನಿಲ್ಲಿಸುತ್ತವೆ**

**(ಪದ್ಯ ಎಂದರೆ – ತೋಡಿರಾಗ – ಪುಟ ೫)**

ಕಾಫಿಯ ಸ್ವಾದದ ಆಹ್ಲಾದತೆ ಮತ್ತು ಕ್ಷಣಿಕತೆ, ಪೊಲೀಸ್ ಪೆರೇಡಿನ ಬಾಹ್ಯಾಡಂಬರಗಳು ಕಾವ್ಯದ ಗಂಭೀರತೆಗೆ ಸಾಕ್ಷಿಯಾಗಿ ಪರಿಣಾಮ ಶೂನ್ಯವಾಗಿರುವುದನ್ನು ಸೂಚಿಸುತ್ತದೆ. 'ಮರ' ತನ್ನೆಲ್ಲಾ ಸಾರಸತ್ವಗಳೊಡನೆ ಬೇರೂರಿ ಭದ್ರವಾಗಿ ನೆಲೆ ನಿಂತು ಬಿಡುವ ಭಾವವನ್ನು ಸೂಚಿಸುತ್ತದೆ. ಕೆಲವು ಕವನಗಳು ಓದುಗನಲ್ಲಿ ಮೂಡಿಸುವ ಸಂವೇದನೆಗಳು, ಉಂಟುಮಾಡುವ ಪ್ರಭಾವಗಳು ಅಷ್ಟೇ ಗಾಢವಾಗಿರುತ್ತವೆ. ಇನ್ನು 'ಜಿಗಣೆ' ಪರಹಿಂಸಾಪ್ರಿಯ ಜೀವಿಯಾಗಿರುವಂತೆಯೇ ರಸಾನುಭವ ನೀಡುವಷ್ಟಕ್ಕಷ್ಟೇ ಕವಿತೆ ಸೀಮಿತವಾಗದೆ ಚಿಂತನೆಗೆ ಹಚ್ಚುವ ಕೆಲಸವನ್ನು ಮಾಡುತ್ತದೆ. ಪದ್ಯವೆಂದರೆ ಪದ್ಯದ ತರವೇ ಇರಬೇಕು. ಒಳಗನೆಲ್ಲ ಬರಿದುಮಾಡಿ ಬಯಲಲಿ ನಿಲ್ಲಿಸುವ ಅನುಭವ ಕವಿಯದೂ, ಆಸ್ವಾದಿಸುವ ಓದುಗನದೂ ಆಗುವ ಸಾಧ್ಯತೆಯನ್ನೂ ಕವನ ಸೂಚಿಸುತ್ತದೆ. ಇಲ್ಲಿ 'ತರ' ಎಂಬ ಉಪಮಾವಾಚಕ ಬಳಕೆಯಾಗಿ ಸಮಕಾಲೀನ ಆಡುನುಡಿಯನ್ನು ಪ್ರತಿನಿಧಿಸುತ್ತದೆ. ಈಗಾಗಲೇ ಸಾಕಷ್ಟು ಬಾರಿ ಬಳಕೆಯಾಗಿರುವ ಉಪಮೆಗಳೂ ಕೂಡ ಬಳಕೆಯಾಗಿವೆ. ಸಂಗಾತಿ ಅಪರೂಪಕ್ಕೆ ನಕ್ಕಾಗ ತನಗಾಗುವ ಸಂಭ್ರಮವನ್ನು ಛಾಯಾ ಭಗವತಿ ಹೀಗೆ ವರ್ಣಿಸುತ್ತಾರೆ.

**ಅಪರೂಪಕ್ಕೊಮ್ಮೊಮ್ಮೆ ನನ್ನವನು ನಕ್ಕಾಗ**
**ಮಲ್ಲಿಗೆಯ ಮೊಗ್ಗುಗಳು ಅರಳಿದಂತೆ**
**ಇರುಳ ಸೆರಗನು ಹೊದ್ದ ಮುಗಿಲ ಮಂಟಪದಲ್ಲಿ**
**ತುಂಬು ಚಂದ್ರನ ಬಿಂಬ ಮೂಡಿದಂತೆ**
**ನಡುಬಳಸಿ ನಿಂತಾಗ**
**ಜೀವ ಮಿಡಿತದ ಹಾಡು ಗುನುಗಿದಂತೆ**
**ಮಡಿಲ ಮಗುವಾದಾಗ । ಹೃದಯ ಹೂಬನವಾಗಿ ಹಿಗ್ಗದಂತೆ**
**ಗೆಳೆಯನಂತಾದಾಗ। ಎದೆಯ ಕಳವಳವೆಲ್ಲ ಕರಗಿದಂತೆ**
**ನಾ ಮುನಿದುಕೊಂಡಾಗ। ಬಳಿಸಾರಿ ಮೈದಡವಿ ಒಲಿಸಿಕೊಂಡಂತೆ**
**ದೇವರೆದುರಿನ ದೀಪ ಕುಡಿಚಾಚಿದಂತೆಲ್ಲ। ಬಳುಬಳುಕಿ ಗುಡಿಯೆಲ್ಲ ಬೆಳಗಿದಂತೆ**

**(ಅಪರೂಪಕ್ಕೊಮ್ಮೊಮ್ಮೆ – ಪುಟಾಣಿ ಕೆಂಪು ಶೂ – ಪುಟ ೨೬)**

ಆಧುನಿಕ ಮಹಿಳಾಕಾವ್ಯದಲ್ಲೆ ಅಪರೂಪ ಇಂತಹ ಕವನಗಳು! ಕಾರಣವಿಷ್ಟೆ, ಇಷ್ಟೆಲ್ಲ ಹರ್ಷವನ್ನು ಅನುಭವಿಸುವಷ್ಟು ಮುಗ್ಧವಾಗಿ ಆಧುನಿಕ ಹೆಣ್ಣು ಇದ್ದಾಳೆಯೇ ಎನ್ನುವಷ್ಟು ಗಂಭೀರವಾಗಿ, ವ್ಯಂಗ್ಯದೊಂದಿಗೆ, ವಾಸ್ತವಕ್ಕೆ ಕನ್ನಡಿ ಹಿಡಿಯುವ ಕಾವ್ಯವೇ ಎಲ್ಲ ಕಡೆಯೂ ಹುಟ್ಟಿಕೊಳ್ಳುತ್ತಿರುವಾಗ ಹೆಣ್ಣು ಮನಸ್ಸೊಂದು ತನ್ನ ಸಂಗಾತಿಯ ಚಟುವಟಿಕೆಗಳಿಂದಾಗಿ ಇಷ್ಟೊಂದು ಪುಳಕಿತವಾಗಿರುವುದಾದರೂ ಏಕೆ! ಕಾರಣ ಪ್ರಾರಂಭದಲ್ಲಿಯೇ ಇದೆ. ಇದು ಸಂಭವಿಸುವುದು ಅಪರೂಪಕ್ಕೊಮ್ಮೊಮ್ಮೆ! ಅಪರೂಪಕ್ಕಾದರೂ ಇಂತಹ ಅನುಭವಗಳು ಜೀವನದ ಸವಿಯನ್ನು ಹೆಚ್ಚಿಸುತ್ತವೆ ಎನ್ನುವುದೇ ಇಲ್ಲಿನ ಸಮಾಧಾನಕರ ಸಂಗತಿ.

ಪ್ರಕೃತಿ ವರ್ಣನೆಯಲ್ಲಿಯೂ ಉಪಮೆ ಬಳಕೆಯಾಗಿದೆ. ಎಚ್.ಎಲ್. ಪುಷ್ಪ ಅವರು ಸಿಕ್ಕಿಂನ ಗ್ಯಾಂಗ್‌ಟಾಕ್‌ನಲ್ಲಿ ನದಿಮುಖವನ್ನು ಕಂಡಾಗಿನ ತನಗಾದ ಅನುಭವವನ್ನು ವರ್ಣಿಸುವಾಗ ಹೀಗೆ ಹೇಳಿದ್ದಾರೆ :

ಎಲ್ಲ ಸೆಳೆವ ಮೋಹಗಳ ಕಿತ್ತು, ಮಾಂಸದಿಂದ ಬೇರ್ಪಡಿಸಿ
ಮಂತ್ರವಾದಿಯಂತೆ ಸೆಳೆದೊಯ್ಯುತ್ತಾಳೆ
ತನ್ನ ಅನೂಹ್ಯ ದಾರಿಯೊಂದಿಗೆ
ಕಿಂದರಜೋಗಿಯಂತೆ ಬಚ್ಚಿಡುತ್ತಾಳೆ
ಎಲ್ಲೋ ಇರುವ ಗುಹೆಗಳೆಂಬ ತವರುಮನೆಯಲ್ಲಿ
ತವನಿಧಿಯ ಅಡಗಿಸುವ ತಾಯ ಕರುಳಂತೆ

(ನದೀಮುಖ – ಲೋಹದ ಕಣ್ಣು – ಪುಟ ೪೬)

ಪ್ರವಾಹವಿರುವಾಗ ಎಲ್ಲವನ್ನು ಕೊಚ್ಚಿಕೊಂಡು ಹೋಗುವ ನದಿಯ ಕ್ರಿಯೆಯನ್ನು ಇದು ಬಣ್ಣಿಸುತ್ತಿದ್ದರೂ ಈ ನದಿ ಹೆಣ್ಣಿನ ಹಾಗೆ ಕಂಡದ್ದು ಕೂಡ ಕವನದ ವಿಶೇಷ, ಹೆಣ್ಣಿನ ಸ್ಥಾನ, ಶಕ್ತಿಗಳೂ ಕೂಡ ನದಿಯ ಶಕ್ತಿಯಂತೆಯೇ ಸಾಮ್ಯತೆ ಹೊಂದುವುದರಿಂದ ಕವನದ ವರ್ಣನೆಗೆ ಬೇರೆಯದೇ ಆಯಾಮ ದಕ್ಕುತ್ತದೆ. 'ಮಂತ್ರವಾದಿ', 'ಕಿಂದರಜೋಗಿ', 'ತವನಿಧಿಯ ಅಡಗಿಸುವ ತಾಯಿ' ಈ ಪದಗಳು ನದಿ ಮತ್ತು ಹೆಣ್ಣನ್ನು ಲೌಕಿಕ ಪಾತಳಿಯಿಂದ ಅಲೌಕಿಕದತ್ತ ಕೊಂಡೊಯ್ದು ಮಾಂತ್ರಿಕ ಶಕ್ತಿಯನ್ನು ತುಂಬುವುದು ಇಲ್ಲಿನ ವಿಶೇಷ.

ಇಂತಹುದೇ ಅಲೌಕಿಕತೆಯತ್ತ ಕೊಂಡೊಯ್ಯುವ ವರ್ಣನೆಯನ್ನು ವೈದೇಹಿಯವರ 'ನವಿಲು' ಕವನದಲ್ಲಿ ಕಾಣಬಹುದು.

ಯುಗಯುಗದ ಸಾರವನೆ। ಶಿಖೆಯಲ್ಲಿ ಬಿಚ್ಚಿಟ್ಟು
ನಿಂತಿತ್ತು ಋಷಿ ಗೆದ್ದ ಜ್ಞಾನದಂತೆ
ಗಳಿಗೆಗಳಿಗೆಗಳಿಗೆಗಳು। ಗರಿಯಂಚಿನಲಿ ಕೂಡಿ
ತೋರಿತ್ತು ಕಿಂಪುರುಷ। ಸೂಕ್ತದಂತೆ
ಕಳೆದೆಲ್ಲ ಬೆಳಗುಗಳು ಮರುಳುವಂತೆ
ಸುತ್ತಿಟ್ಟ ಸುಪ್ತಗಳು ಹಿಂದುರುಳುವಂತೆ
ಜಗದ ವಿಸ್ಮಯವೆಲ್ಲ ಮುದ್ದು ಮಗುವಾದಂತೆ
ಕುಣಿದು ಕುಣಿದೂ ಚೆವರ। ಮಾಣಿಕ್ಯ ಹೊಳೆದಂತೆ
ಕದನ ಕುತೂಹಲ ರಾಗ। ಕಡೆದ ಸುಧೆಯಂತೆ
ಶುದ್ಧೋದನನ ಮಗ। ಎದ್ದು ಬಂದಂತೆ
ಅಂತೆ ಅಂತೆಯೇ ಕ್ಲಿಷ್ಟಕ್ಕಿದೊ ಮಕುಟ ಸೂತ್ರ ಸಖೀ

**ಪೂರ್ಣ ಕಾಣಿಸದೊಂದು ಪರಮ ಅರ್ಥಕ್ಕೆ**
**ಲಗ್ಗೆ ಹಾಕಿದ ಲೋಕ ಗೀತದಂತೆ**

**('ನವಿಲು' – ವೈದೇಹಿಯವರ ಆಯ್ದ ಕವಿತೆಗಳು – ಪುಟ ೩೫)**

ಮನಸ್ಸಿನ ಹರ್ಷ ಅದರಲ್ಲೂ ಅಲೌಕಿಕ ಆನಂದದ ಹರ್ಷವನ್ನು ಕವಯಿತ್ರಿ ಹೀಗೆ ವರ್ಣಿಸುತ್ತಾರೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ 'ನವಿಲು' ಹರ್ಷದ ಪ್ರತಿಮೆಯಾಗಿ ಹೆಚ್ಚು ಬಳಕೆಯಾಗಿದೆ. ಇಲ್ಲಿ ಸಂಜೆ ಮೂರರ ಸಮಯದಲ್ಲಿ ಕಾಣಿಸಿಕೊಂಡ ನವಿಲಿದು. ಸಾಕಷ್ಟು ಜೀವನಾನುಭವ ಪಡೆದ ಮನಸ್ಸಿನ ಪುಳಕವಿದು. 'ಶುದ್ಧೋದನನ ಮಗ'ನ ರೀತಿ ಎದ್ದು ಬಂದಿರುವುದರಿಂದ ತನ್ನ ಸುತ್ತಲಿನ ಎಲ್ಲ ಬಗೆಯ ಬಂಧನಗಳನ್ನು ಕಳಚಿಕೊಂಡು, ಹೊಸದಾರಿ ಹುಡುಕುತ್ತ ಹೊರಟ ಮುಕ್ತ ಭಾವನೆ, ಶಾಂತಿಯನ್ನು ಅರಸುವ ತವಕವನ್ನು ಹೊಂದಿರುವ ಮನಸ್ಸದು. ತನ್ನ ಕೈಲಿ ಅರಗಿಸಿಕೊಳ್ಳಲಾಗದ ಪರಮಾರ್ಥವನ್ನು ವಿವರಿಸ ಹೊರಟಿರುವ ಲೋಕಗೀತದಂತೆ ಇರುವುದರಿಂದ ಆನಂದವನ್ನು ಪಾರಮಾರ್ಥಿಕತೆ ಮತ್ತು ಲೌಕಿಕತೆ ಎರಡೂ ನೆಲೆಯಲ್ಲಿಯೂ ಕವನ ವಿವರಿಸುತ್ತಾ ಹೋಗುತ್ತದೆ.

ರೂಪ ಹಾಸನ ಅವರು ಪರಸ್ಪರ ಎರಡು ದ್ವಂದ್ವಗಳನ್ನು ಮುಖಾಮುಖಿಗೊಳಿಸಿರುವುದು ಅವರ ಅನೇಕ ಕವನಗಳಲ್ಲಿ ಕಾಣಿಸುತ್ತದೆ. ಕಡಲು–ನದಿ, ಕಡಲು–ದಡ, ಬಾಗಿಲು–ದಡ, ಹೊಸ್ತಿಲು–ಬಾಗಿಲು, ರೊಟ್ಟಿ–ಹಸಿವು, ಹೀಗೆ ಈ ಸರಣಿ ಮುಂದುವರಿಯುತ್ತದೆ. ರೊಟ್ಟಿ–ಹಸಿವುಗಳೆಂಬ ರೂಪಕಗಳಿಂದ ಮೇಲು–ಕೀಳು, ಶೋಷಕ–ಶೋಷಿತ, ಲೌಕಿಕ–ಅಲೌಕಿಕಗಳನ್ನು ಮುಖಾಮುಖಿಗೊಳಿಸುವಾಗಲೂ ಉಪಮೆಯನ್ನು ಬಳಸಿಕೊಂಡಿದ್ದಾರೆ.

**ಕತ್ತಲಲ್ಲಿ ಕಣ್ಣು। ಮಿಟುಕಿಸಿದಂತೆ**
**ಕಾಣಲಾಗದ ಹಸಿವಿನ। ಒಡಲಾಳದಲ್ಲಿ**
**ರೊಟ್ಟಿಗೊಂದು ಪುಟ್ಟ। ಘನವಾದ ಸ್ಥಾನವಿದೆಯಂತೆ**
**ಪ್ರತ್ಯಕ್ಷ ನೋಡಲಾಗದ ಸತ್ಯ। ಇದ್ದರೂ ಇರದಂತೆ**

**(ಗಳಿಗೆ ಬಟ್ಟಲು ತಿರುವುಗಳಲ್ಲಿ – ಪುಟ ೧೮)**

ಇದ್ದರೂ ಇರದಂತಿರುವುದು ಕತ್ತಲಲ್ಲಿ ಕಣ್ಣು ಮಿಟುಕಿಸಿದಂತೆಯೆ. ಕಣ್ಣು ಮಿಟುಕಿಸಿದ್ದೂ ಸತ್ಯ. ಅದು ಯಾರಿಗೂ ಕಾಣಿಸದಿರುವುದೂ ಸತ್ಯ. ಇಲ್ಲಿ ರೊಟ್ಟಿಯಾಗುವ ಪ್ರತಿಯೊಂದರ ಪಾತ್ರವೂ ಅಷ್ಟೇ ಗೌಣವಾಗಿದೆ. ಹಸಿವನ್ನು ಹೋಗಲಾಡಿಸಿರುವುದೂ ಸತ್ಯ. ಆದರೆ ಅದನ್ನು ಮೂರ್ತ ರೂಪದಲ್ಲಿ ಕಟ್ಟಿಕೊಡಲಾಗದ ಅಸಹಾಯಕತೆಯೂ ಇಲ್ಲಿದೆ.

ಹೀಗೆ ಆಧುನಿಕ ಕನ್ನಡ ಮಹಿಳಾಕಾವ್ಯದಲ್ಲಿ 'ಉಪಮೆ'ಯ ಬಳಕೆ ಬಹಳವಾಗಿಲ್ಲದಿದ್ದರೂ ಬಳಕೆಯಾಗಿದ್ದಷ್ಟೆ ಪರಿಣಾಮಕಾರಿಯಾಗಿಯೂ ಇರುವ ವಿಷಯದತ್ತ ಪ್ರಸ್ತುತ ಅಧ್ಯಯನ ದೃಷ್ಟಿ ಹರಿಸಿದೆ.

## ೫.೫. ವ್ಯಂಗ್ಯದ ನೆಲೆ

ಶಬ್ದಕ್ಕಿರುವ ವಾಚ್ಯಾರ್ಥ, ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳಲ್ಲಿ ಕಾವ್ಯಗಳಲ್ಲಿ ವ್ಯಂಗ್ಯಾರ್ಥದ ಪಾರಮ್ಯವೇ ಹೆಚ್ಚು. ಮಹಿಳಾಕಾವ್ಯವಂತೂ ವ್ಯಂಗ್ಯವನ್ನು ಸಾಕಷ್ಟು ಬಳಸಿಕೊಂಡಿರುತ್ತದೆ. 'ವ್ಯಂಗ್ಯ'ವನ್ನು ಇಂಗ್ಲೀಷಿನ 'Irony' ಎಂಬ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ವಿಮರ್ಶೆಯ ಪರಿಭಾಷೆಯಲ್ಲಿ ವ್ಯಂಗ್ಯವೆಂಬುದನ್ನು ಹೀಗೆ ವಿವರಿಸಲಾಗಿದೆ :

ಎ. ಡಬ್ಲ್ಯು. ಷ್ಲೆಗಲ್‌ನು "ವ್ಯಂಗ್ಯವೆಂದರೆ .... ಏಕಮುಖವಾದ ಕಲ್ಪನೆ ಮತ್ತು ಭಾವನೆಗಳ ಅತಿರೇಕದ ಬಗ್ಗೆ ಬಹುಮಟ್ಟಿಗೆ ವ್ಯಕ್ತರೂಪದಲ್ಲಿಯೇ ಇರುವ, ನಿರೂಪಣೆಯೊಂದಿಗೆ ಹಾಸುಹೊಕ್ಕಾಗಿರುವ, ಸಮತೋಲವನ್ನು ಮತ್ತೆ ಸಾಧಿಸಲು ಸಾಧನವಾಗುವ ನಿವೇದನೆ" ಎನ್ನುತ್ತಾನೆ.[೧೬]

"ಸತ್ಯಕ್ಕೂ ತೋರಿಕೆಗೂ ಇರುವ ವ್ಯತ್ಯಾಸ ಯಾವುದೇ ವ್ಯಂಗ್ಯದ ಮೂಲಭೂತ ಅಂಶ" ಎನ್ನುತ್ತಾನೆ ಹಾಕನ್ ಷೆವೆಲಿಯರ್.[೧೭]

"ವ್ಯಂಗ್ಯದಲ್ಲಿ ಭಾವನೆಗಳ ಘರ್ಷಣೆ ಇರುತ್ತದೆ. ಭಾವನಾತ್ಮಕವೂ ಹೌದು, ಬೌದ್ಧಿಕವೂ ಹೌದು. ಅದನ್ನು ಗ್ರಹಿಸುವಾಗ ನಿರ್ಲಿಪ್ತನೂ, ಶಾಂತನೂ ಆಗಿರಬೇಕು. ಅದನ್ನು ಅನುಭವಿಸಲು ವ್ಯಕ್ತಿಯ ಬಗ್ಗೆ ಅಥವಾ ಭಗ್ನಗೊಂಡ ಆದರ್ಶದ ಬಗ್ಗೆ ನೋವನ್ನು ಪಡುವ ಸಂವೇದನೆ ಬೇಕು."[೧೮]

ಹೀಗೆ ಭಾವನಾತ್ಮಕವಾದ ಮತ್ತು ಬೌದ್ಧಿಕವಾದ ಘರ್ಷಣೆಯೊಂದಿಗೆ ವಸ್ತುಸ್ಥಿತಿಯನ್ನು ನೈಜತೆಯನ್ನು ವ್ಯಕ್ತಪಡಿಸುವ ವ್ಯಂಗ್ಯ ಮಹಿಳಾಕಾವ್ಯದಲ್ಲಿ ವಿಭಿನ್ನ ಚಿಂತನೆಗಳನ್ನು, ತುಮುಲಗಳನ್ನು ತೆರೆದಿಟ್ಟಿದೆ. ಪುರಾಣ ಕಾಲದಿಂದಲೂ ಹೆಣ್ಣಿನ ಮೇಲೆ ನಡೆಯುತ್ತಿರುವ ಲೈಂಗಿಕ ಶೋಷಣೆಯನ್ನು ಡಾ. ಎಸ್.ವಿ. ಪ್ರಭಾವತಿ ವ್ಯಂಗ್ಯಗೊಳಿಸಿರುವುದು ಹೀಗೆ :

**ಪುರಾಣಗಳ ಸೀತೆ ಸಾವಿತ್ರಿಯರು ಸೆರಗು**
**ಹೊದ್ದು ಗೌರಮ್ಮಗಳಾಗಿ ಮರೆಯಾದರು**
**ಈ ಸ್ಮಿತಾ ಸೇನ್ ವರ್‍ಯರೈ ಸೆರಗು ಬಿರಿದು**
**ಸುಪುಷ್ಟ ತೋಳು ತೊಡೆಗಳ ಗಿರಿಗಹ್ವರ**
**ಗಳಲ್ಲಿ ಕ್ಯಾಮೆರಾಗಳಲ್ಲಿ ಸೆರೆಯಾದರು**

**(ಪಂಚರಂಗದ ಸೌಂದರ್ಯ – ಉಳಿದದ್ದು ಆಕಾಶ – ಪುಟ ೩೨)**

ಸೆರಗು ಹೊದ್ದು ಗೌರಮ್ಮಗಳಾಗಿದ್ದರೂ ಸೀತೆಯರು ಕಾಮುಕ ನೋಟದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಸೆರಗುಬಿರಿದು ಅಂಗಾಂಗ ಪ್ರದರ್ಶನ ಮಾಡಿದ ಆಧುನಿಕ ಸುಂದರಿಯರೂ ಕ್ಯಾಮೆರಾಗಳಲ್ಲಿ ಸೆರೆಯಾಗಿ ಕಾಮುಕ ಕಣ್ಣುಗಳಿಗೆ ಆಹಾರವಾಗುವುದರಿಂದ ತಪ್ಪಸಿಕೊಳ್ಳಲಾಗುತ್ತಿಲ್ಲ. ಅಂದಮೇಲೆ ಕಾಮಪ್ರಚೋದನೆಗೆ ಬಾಹ್ಯ ಉಡುಗೆ–ತೊಡುಗೆಗಳೇ ಪೂರ್ಣವಾದ ಕಾರಣಗಳಲ್ಲ ಎಂಬುದು ಇಲ್ಲಿ ವಿದಿತವಾಗಿದೆ. ಹೆಣ್ಣು ಎಂದಿನಿಂದಲೂ ಸೌಂದರ್ಯದ, ಕಾಮದ ಪುತ್ಥಳಿಯಾಗಿ

ಬಳಕೆಯಾಗುತ್ತಿರುವುದು ಇಲ್ಲಿನ ವ್ಯಂಗ್ಯ. 'ಜಾತಿ'ವ್ಯವಸ್ಥೆ ಕೂಡ ಈ ಸಮಾಜಕ್ಕಂಟಿದ ರೋಗಗಳಲ್ಲೊಂದು. ಹುಟ್ಟಿನಿಂದ ಸಾವಿನವರೆಗೆ ಕೆಲವೊಮ್ಮೆ ಸಾವಿನ ನಂತರವೂ ಈ ವಿಂಗಡಣೆ ಮುಂದುವರಿಯುತ್ತದೆ. ಬಾಲ್ಯದಿಂದಲೇ ಮಕ್ಕಳ ಮನಸ್ಸಿನಲ್ಲಿ ಕೆಟ್ಟದ್ದನ್ನು ಬಿತ್ತುವ ಪ್ರಯತ್ನ ನಡೆಯುತ್ತಿರುತ್ತದೆ. ಮೊದಲು ಮುಗ್ಧತೆಯಿಂದ ಒಪ್ಪಿಕೊಂಡರೂ, ಬರುಬರುತ್ತಾ ಅದೇ ರೂಢಿಯಾಗಿ ಪರಂಪರೆಯ ಮುಂದುವರಿಕೆಯ ವಾರಸುದಾರಿಕೆ ವಹಿಸಿಕೊಳ್ಳಲಾಗುತ್ತದೆ. ಇಂತಹ ಒಂದು ಸನ್ನಿವೇಶವನ್ನು ವ್ಯಂಗ್ಯದೊಂದಿಗೆ ಮನಮುಟ್ಟಿಸುವ ಕವನ ಮಾಧವಿ ಭಂಡಾರಿಯವರದು. ಶಾಲಾ ತಪಾಸಣೆಗೆಂದು ಹೋದ ಅಧಿಕಾರಿಯೊಬ್ಬರು ಊರಿಂದ ಊರಿಗೆ ಹೋಗುವ ಕಾಡು ಮಾರ್ಗದಲ್ಲಿ ಮಕ್ಕಳೊಂದಿಗೆ ಸಂವಾದ ನಡೆಸುತ್ತಾರೆ.

> **'ಈ ಕಾಡು ದಾರಿಯಲಿ। ಕಾಡುವುದಿಲ್ಲವೆ ಭಯ?'**
> **ಬಾಯಿಂದ ಜಾರಿತ್ತು ನನ್ನ ಪ್ರಶ್ನೆ.**
> **'ಕೊರಳಲ್ಲಿ ಹನುಮಂತನ ತಾಳಿ ಇರುವಾಗ**
> **ದೆವ್ವ ಪಿಶಾಚಿಗಳ ಭಯವೇ। ಇಲ್ಲ ನಮಗೆ'**
> **ಮುಗ್ಧರ ವಾಖ್ಯಾನ ನನಗೆ.**
> **.... ಬಂತು ಸಮಜಾಯಿಷಿ ಇನ್ನೊಬ್ಬನಿಂದ**
> **ದೈವ ಭೂತದ ಕಾಟವೆಲ್ಲ। ಶೂದ್ರ ಜಾತಿಯಲ್ಲಿ ಮೂತ್ರ;**
> **ಯಾಕೆಂದರೆ ಸತ್ತ ಶವಕ್ಕೆ ನಾವು**
> **ವಿಧಿವತ್ತಾಗಿ ಸಂಸ್ಕರಿಸುತ್ತೇವೆ ನೋಡಿ'**
> **ಆ ಕ್ಷಣ। ನಾನು ಶೂದ್ರ ಹೆಣ.**
>
> **(ಆ ಕ್ಷಣ – ಹರಿದ ಸ್ಕರ್ಟಿನ ಹುಡುಗಿ – ಪುಟ ೫೪)**

ಮೂಢನಂಬಿಕೆಯೊಂದನ್ನು ಬಲವಾಗಿ ಸಮರ್ಥಿಸುವ, ತನ್ಮೂಲಕ ಅದನ್ನೇ ನಂಬಿಕೆಯಾಗಿ ಮಾರ್ಪಾಡು ಮಾಡುವ ಕೆಲಸ ಎಷ್ಟೊಂದು ಸಹಜವಾಗಿ ನಡೆದುಬಿಡುತ್ತದೆ ಎಂಬುದನ್ನು ಕವಿ ಬಹಳ ಸಹಜವಾದ ಒಂದು ಸನ್ನಿವೇಶದಲ್ಲಿ ಹಿಡಿದಿಟ್ಟಿದ್ದಾರೆ. ಪೌರಾಣಿಕ ಮತ್ತು ಚಾರಿತ್ರಿಕ ಸನ್ನಿವೇಶಗಳನ್ನು ಬಳಸಿಕೊಂಡು ಸಮಕಾಲೀನ ಸ್ಥಿತಿಗತಿಗಳನ್ನು ವಿಮರ್ಶಿಸುವ ಪ್ರಯತ್ನ ಕಾವ್ಯದಲ್ಲೂ ನಡೆದಿರುತ್ತದೆ. ಚೆನ್ನಮಲ್ಲಿಕಾರ್ಜುನನಿಗಾಗಿ ವೈರಾಗ್ಯಮೂರ್ತಿಯಾಗಿ ಹೊರಡುವ ಅಕ್ಕಮಹಾದೇವಿಯ ಬಾಯಲ್ಲಿ ಸ. ಉಷಾ ಹೇಳಿಸುವ ಈ ಕವನದ ಸಾಲುಗಳನ್ನು ಗಮನಿಸಬೇಕು :

> **ತೊಟ್ಟು ಕಳಚಿದ ಹಣ್ಣು । ಬೇರನರಸುವ**
> **ನುಡಿಯ ಜಾಣಂಗಳೇ । ನಾನಾದರೊ ನಿಮ್ಮ**
> **ಎನ್ನೊಡವುಟ್ಟಿದಣ್ಣಂಗಳೇ । ಎಂದು**
> **ಎಂತು ನಂಬಲಿ ಪ್ರಭುವೇ**
>
> **(ಅಕ್ಕ ಹೇಳಿದ್ದು – ಈ ನೆಲದ ಹಾಡು – ಪುಟ ೯)**

ಸಮಕಾಲೀನ ಸಮಾಜದಲ್ಲಿ ಇನ್ನಿಲ್ಲದಂತೆ ಕಾಡುತ್ತಿರುವ ಅಪನಂಬಿಕೆಯ ಮೂಲಬೇರುಗಳು ಚರಿತ್ರೆ, ಪುರಾಣ ಕಾಲದಿಂದಲೂ ಇರುವಂತಹವುಗಳೇ. ಹೆಣ್ಣಿನ ನಂಬಿಕೆಯನ್ನು ಘಾಸಿಗೊಳಿಸುವ ಘಟನೆಗಳು ಅಸಂಖ್ಯವಾಗಿವೆ. ನಂಬಿದವರಿಂದಲೇ ಉಂಟಾಗುವ ಅಪಾಯಗಳು 'ನಂಬಿಕೆ'ಯೆಂಬ ಮೌಲ್ಯವೇ ತತ್ತರಗೊಳ್ಳುವಂತೆ ಮಾಡುತ್ತವೆ. ಕೌಟುಂಬಿಕ ವಲಯದಲ್ಲಿಯೇ ಇರುವ ಇಂತಹ ನಂಬಿಕೆ ದ್ರೋಹವನ್ನು ವೈದೇಹಿಯವರು ಇನ್ನೊಂದು ಪೌರಾಣಿಕ ಪ್ರಸಂಗದಲ್ಲಿ ಹೀಗೆ ಹಿಡಿದಿಟ್ಟಿದ್ದಾರೆ:

**ಬೈರಾಗಿ ಬೂದಿ ತೊಳೆಯುತ್ತ ಹಚ್ಚಗೆ ನೋಡುವಳು**

**ಮೆತ್ತಗೆ ಮೈ ಒರೆಸಿ ತಂಬಾಲು ಕುಡಿಸಿ**

**ತೊಡೆಮೆತ್ತೆಯನು ನೀಡಿ ಕೋರುವಳು**

**ಶಿವ ಶಿವಾ!**

**ಎಲ್ಲಾ ನದಿಗಳ ನೆನೆದು ಮಲಗುದೇವ!**

**(ಶಿವನಮೀಸುವ ಹಾಡು – ವೈದೇಹಿಯವರ ಆಯ್ದ ಕವನಗಳು – ಪುಟ ೨೪)**

ಗಂಡನ ಚಪಲತೆಯನ್ನು ಹಂಗಿಸುತ್ತಾ, ತನ್ನ ಪ್ರೀತಿಯ ಧಾರೆ ಎರೆಯುತ್ತಾ ನಿರ್ಲಿಪ್ತಳಾಗಿ ತನ್ನ ಸೇವಾಕೈಂಕರ್ಯವನ್ನು ಮಾಡುವ ಹೆಣ್ಣಿನ ಧಾರಾಳತನ ಇಲ್ಲಿ ಎದ್ದು ಕಾಣುತ್ತದೆ. 'ಎಲ್ಲಾ ನದಿಗಳ ನೆನೆದು' ಎನ್ನುವ ಪದಗಳು ಧ್ವನಿಪೂರ್ಣವಾಗಿ ಸನ್ನಿವೇಶವನ್ನು ಕಟ್ಟಿಕೊಡುತ್ತವೆ. 'ಗಂಗೆ' ಎಂಬ ಪದವನ್ನು ಬಳಸದೆಯೂ ಗೌರಿಯ ಬಾಯಿಂದ ಹೊರಡುವ ವ್ಯಂಗ್ಯ ಸ್ತ್ರೀ ವಿಶಿಷ್ಟ ಭಾಷಾಬಳಕೆಗೂ ಉದಾಹರಣೆಯಾಗುತ್ತದೆ.

ಸಾಹಿತ್ಯಕವಾಗಿ 'ಹೆಣ್ಣಿನ' ಭಾಷಾಬಳಕೆಯ ಕುರಿತು ಸಮಕಾಲೀನ ವಿಮರ್ಶೆಗಳು, ಮುಖ್ಯವಾಹಿನಿ ಪರಂಪರೆ ತೋರುವ ಅನಾದರ, ಟೀಕೆಗಳಿಗೆ ಉತ್ತರಿಸುವಾಗ ಕೂಡ ವ್ಯಂಗ್ಯ ಬಳಕೆಯಾಗಿದೆ.

**ಅವಳೆಂದದ್ದು–ಹಸಿವೆ ಮತ್ತು ಬಾಯಾರಿಕೆ**

**ಆತನೆಂದ–ಚೆನ್ನಾಗಿ ಉಣ್ಣು–ಕುಡಿ**

**ಆಕೆ ಅತ್ತಳು ಆಗ । ಆತ ನಕ್ಕ!**

**(ಆಕೆ, ಆತ, ಭಾಷೆ, ವೈದೇಹಿ ಆಯ್ದಕವನಗಳು – ಪುಟ ೩೮)**

ವೈದೇಹಿಯವರು ಸನ್ನಿವೇಶವೊಂದರಲ್ಲಿ ಈ ವ್ಯಂಗ್ಯವನ್ನು ಚಿತ್ರಿಸುತ್ತಾ ಹೋದರೆ ಪ್ರತಿಭಾ ನಂದಕುಮಾರ್ ನೇರವಾಗಿಯೇ ಪ್ರತಿಕ್ರಿಯಿಸುತ್ತಾರೆ.

**ನನಗೆ ಭಾಷೆಯಿಲ್ಲ । ನಿನಗೆ ಕಿವಿಯಿಲ್ಲ**

**ಮಾತನಾಡುವುದು ಹೇಗೆ?**

**(ಸಾಧ್ಯವೇ ಇಲ್ಲ, ಒಂದು ಹೆಂಗಸಿನ ಜೊತೆ ಇಂಥ ಗಂಭೀರ ವಿಷಯ**

**ಚರ್ಚಿಸುತ್ತೇನೆಯೇ? ಎಂದ ಗಂಡಸಿಗೆ – ಆಹಾ ಪುರುಷಾಕಾರಂ!, ಪುಟ ೨೯)**

'ಗಂಡೆಂಬ' ವರ್ಗ ಗಳಿಸಿರುವ ಅಥವಾ ಸ್ಥಾಪಿಸಿಕೊಂಡಿರುವ ತನ್ನ ಗಟ್ಟಿತನ, ಶ್ರೇಷ್ಠತೆ, ಬುದ್ಧಿವಂತಿಕೆ ಈ ಎಲ್ಲ 'ಅಹಂ'ಗಳನ್ನೂ ಮಹಿಳಾಕಾವ್ಯ ವ್ಯಂಗ್ಯವಾಗಿಯೇ ಹೇಳುತ್ತದೆ. ಗಂಡುವರ್ಗದ ಈ ಅಹಮಿಕೆಯನ್ನು ಪ್ರತಿಭಾ ಅವರೇ ಇನ್ನೊಂದು ಕವನದಲ್ಲಿ ಹೀಗೆ ಖಂಡಿಸುತ್ತಾರೆ :

**ಪರಮೋಚ್ಚ ಸೌಂದರ್ಯ**

**ಜೊತೆಗೆ ಗರ್ವ ಕಾರಣ ವೀರ್ಯ**

**ಉಪಾಸನೆಯ ಸಂತ**

**ಸ್ತ್ರೀರೂಪವೇ ರೂಪಂ। ನಿರ್ದಿಷ್ಟವಾಗಿ**

**ಪ್ರಣಯಮತ್ತ ಸ್ತ್ರೀ.....**

**(ಆಹಾ, ಪುರುಷಾಕಾರಂ – ಪುಟ ೧)**

ತನ್ನನ್ನು ವೀರ್ಯವತ್ತಾದ ಗಂಡಸುತನಕ್ಕೆ ಹೋಲಿಸಿಕೊಂಡು ಸ್ವಪ್ರತಿಷ್ಠೆ ಮೆರೆಯುವ ಉಪಾಸನೆಯ ಸಂತತನವನ್ನು ಅಲ್ಲಗಳೆಯುತ್ತಲೇ 'ಸ್ತ್ರೀ'ಯನ್ನು ಸೌಂದರ್ಯದ ಪ್ರತೀಕವಾಗಿ ಚಿತ್ರಿಸುವ ಹಪಹಪಿಕೆಯನ್ನೂ ವ್ಯಂಗ್ಯಕ್ಕೀಡುಮಾಡಲಾಗಿದೆ. 'ಅದರಲ್ಲೂ ಪ್ರಣಯಮತ್ತ ಸ್ತ್ರೀ' ಎಂಬ ವಾಕ್ಯ ಈ ಹೊಗಳಿಕೆಯ ಹಿನ್ನೆಲೆಯನ್ನು ಸ್ಪಷ್ಟಪಡಿಸುತ್ತದೆ. ತನ್ನನ್ನೇ ತಾನು ಹೊಗಳಿಕೊಳ್ಳುವ ಸಂತತನಕ್ಕೂ, ಪ್ರಣಯಮತ್ತ ಸ್ತ್ರೀಯನ್ನು ಹೊಗಳುವ ರಸಿಕತೆಗೂ ಇರುವ ದ್ವಂದ್ವವೇ ಒಂದು ಬಗೆಯ ಮಾನಸಿಕ ವ್ಯಭಿಚಾರದಂತೆ ಕಾಣುತ್ತದೆ. ಆದರೆ ಇದೇ ಪುರುಷಪ್ರಧಾನ ಸಂಸ್ಕೃತಿಯ ಬಂಡವಾಳವೂ ಕೂಡ ಎಂಬುದೇ ಮಹಿಳಾಕಾವ್ಯ ಶೋಧಿಸುವ ಸತ್ಯ. ಪುರುಷಪ್ರಧಾನತೆಯನ್ನು ನಿರಾಕರಿಸುವಾಗ 'ಅಲ್ಲ' ಎಂಬ ಪದ ಬಳಕೆಯಿಂದ ಪರಿಣಾಮವನ್ನು ಹೆಚ್ಚಿಸಿರುವುದೂ ಕಂಡುಬರುತ್ತದೆ.

**ನಾವು ಗಂಡಸರಲ್ಲ**

**ಎಲ್ಲಿ ಹೋದರೂ ಹುಡುಗಿಯರನ್ನು ಕಂಡಾಗ**

**ಕಣ್ಣು ಮಿಟುಕಿಸಿ ವಕ್ರನಗೆ ಬೀರುವವರಲ್ಲ.**

**ದುಂಡಗಿನ ಹೆಂಗಸರೊಡನೆ ಮಾತನಾಡುವಾಗ**

**ಮಿತಿಮೀರಿ ಮರ್ಯಾದೆ ತೋರಿದರೂ**

**ಮನಸ್ಸಿನಲ್ಲೆ ಅವರನ್ನು ಬೆತ್ತಲಾಗಿಸುವವರಲ್ಲ.**

**.... ವಾಕರಿಕೆ ಬರುವಷ್ಟು ವ್ಯರ್ಥಾಲಾಪ ಮಾಡುತ್ತಾ**

**ಹೆಂಡತಿಯ ಸೆರಗಿನ ಮರೆಯಲ್ಲಿ ಜೀವಿಸುವವರಲ್ಲ.**

**ಆದರೂ,**

**ನಮ್ಮಲ್ಲಿ ಇವರಿಗಿರುವ ಬೆಲೆಯನ್ನು ಕಂಡು**

**ಅಯ್ಯೋ ನಾನು ಗಂಡಾಗಲಿಲ್ಲವಲ್ಲಾ। ಎಂದು ಮಿಡುಕುವ ನಾವು**

**ಹೆಂಗಸರು**

**(ನಾವು – ಪ್ರತಿಭಾ ನಂದಕುಮಾರ್ ಆಯ್ದ ಕವಿತೆಗಳು – ಪುಟ ೧೧)**

ಲಿಂಗಭೇದವನ್ನು ಅದರೆಲ್ಲ ಸಹಜತೆಯೊಡನೆ ಕವಿತೆ ಬಿಂಬಿಸುತ್ತದೆ. ಮಾನಸಿಕವಾಗಿ, ನೈತಿಕವಾಗಿ ಹೆಣ್ಣಿಗಿರುವ ಹೆಚ್ಚಿನ ಸ್ಥಿರತೆಯನ್ನು ಅದೇ ಕಾಲಕ್ಕೆ ತಮ್ಮೆಲ್ಲ ದೌರ್ಬಲ್ಯ ಸಹಿತವಾಗಿಯೂ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಯೋಗ್ಯತೆಗಿಂತ ಹೆಚ್ಚಿನ ಬೆಲೆ ಹೊಂದಿರುವ 'ಗಂಡು'ಪ್ರಧಾನತೆಯನ್ನು ಕವಿತೆ ಅಣಕಿಸುತ್ತಿದೆ. ಇಲ್ಲಿ ಯಾವುದು ತಾನು 'ಅಲ್ಲ'ವೋ ಅದು ಅನ್ಯಲಿಂಗವೇ ಆಗಿರುವುದನ್ನು ಪರೋಕ್ಷವಾಗಿ ಹೇಳುವ ತಂತ್ರ ಬಳಕೆಯಾಗಿದೆ. ಇದೇ ರೀತಿ ನಾನು ಹೇಳಿಲ್ಲ, ಹೇಳಿಲ್ಲ ಎನ್ನುತ್ತಲೇ ಎಲ್ಲವನ್ನೂ ಹೇಳಿಬಿಡುವ ತಂತ್ರಗಾರಿಕೆ ಬಳಸಿದ್ದಾರೆ ಮೀನಾ ಸದಾಶಿವ.

**ಯಾರಿಗೂ ಹೇಳಿಲ್ಲ ನಾನು। ಕಾಗೆಗಳ ಕಾಕಾರವ ತಲೆ ತಿಂದಿದ್ದು,**
**ಗೂಗೆ ಕಣ್ಣಿನ ನೋಟ ಎದೆ ಇರಿದದ್ದು,**
**ಸುತ್ತುವ ಹದ್ದುಗಳ ನೆರಳು ಕಂಡು। ಬೆಚ್ಚಿ ಬಿದ್ದದ್ದು,**
**...ಪ್ರಾಣಿಗಳಂತಿದ್ದ ಕ್ರಿಮಿಗಳು। ಕೋಡು ಮೂಡಿಸಿಕೊಂಡು ತಿವಿಯಬಂದಿದ್ದು**
**ಕ್ರಿಮಿಗಳಂತಿದ್ದ ಪ್ರಾಣಿಗಳು। ಕಾಲುಕಚ್ಚಿ ರಕ್ತ ಹೀರಿದ್ದು**
**ಇದನ್ನೆಲ್ಲ ಯಾರಿಗೂ ಹೇಳುವುದಿಲ್ಲ ನಾನು**
**(ಯಾರಿಗೂ – ಕೋಗಿಲೆಗೆ ಕಲಿಸಲಾರೆ – ಪುಟ ೨)**

ಕವಿತೆಯಲ್ಲಿ ನಿರಾಳವಾದಷ್ಟು ವಾಸ್ತವದಲ್ಲಿ ನಿರಾಳವಾಗುವುದು ಕಷ್ಟವೂ ಹೌದು. ಹಾಗಾಗಿಯೇ ತನಗನಿಸಿದ್ದೆಲ್ಲವನ್ನು ಕವಿತೆಯ ಮೂಲಕ ಹೊರಹಾಕುವ ತಂತ್ರ ಈ ಮಹಿಳಾ ಕವಿಗಳದ್ದು. ತನ್ನೊಳಗಿನ ನೋವು, ತನ್ನ ಮೇಲೆ ಉಂಟಾಗುವ ದೌರ್ಜನ್ಯಗಳೆಲ್ಲವನ್ನೂ ಕವಿತೆ ಹೊರಹಾಕುತ್ತಿದೆ. ವ್ಯಕ್ತಿತ್ವ ನಿರ್ಮಾಣದಲ್ಲಿ ಗಂಡಿಗಿಂತ ಹೆಣ್ಣಿನ ಪರಿಶ್ರಮ ಹೆಚ್ಚು. ಅದು ಗಂಡು–ಹೆಣ್ಣಿನ ವಿಷಯದಲ್ಲಿ ಏಕರೂಪವಿಲ್ಲದಿರುವ ಕುರಿತೂ 'ಮಹಿಳೆ'ಯರಿಗೆ ಅಸಮಾಧಾನವಿದೆ. ಇಂತಹ ಅಸಮಾಧಾನವನ್ನು ವ್ಯಂಗ್ಯದೊಂದಿಗೆ ಪ್ರತಿಭಾ ನಂದಕುಮಾರ್ ಹೀಗೆ ಹೇಳಿದ್ದಾರೆ:

**ಎಲ್ಲ ಯಶಸ್ವಿ ಪುರುಷನ ಹಿಂದೆ**
**ಒಬ್ಬಳು ಮಹಿಳೆ**
**ಎಲ್ಲ ಯಶಸ್ವಿ ಮಹಿಳೆಯ ಹಿಂದೆ**
**ಒಬ್ಬ ಅತೃಪ್ತ ಪುರುಷ**
**(ಸಂಗಾತ – ಆಯ್ದ ಕವಿತೆಗಳು – ಪುಟ ೭೮)**

ಪುರುಷನ ವ್ಯಕ್ತಿತ್ವ ನಿರ್ಮಾಣದಲ್ಲಿ ತಾಯಿಯಾಗಿಯೋ, ತಂಗಿಯಾಗಿಯೋ, ಹೆಂಡತಿ, ಮಗಳಾಗಿಯೋ ಹೆಣ್ಣಿನ ತ್ಯಾಗ, ಪರಿಶ್ರಮ ಅಪಾರವಾಗಿರುತ್ತದೆ. ಚಾರಿತ್ರಿಕವಾದ ಅನೇಕ ಸಾಧಕರ ಜೀವನಚರಿತ್ರೆಗಳೂ ತ್ಯಾಗಮಯಿ ಹೆಣ್ಣಿನ ಪಾತ್ರವನ್ನು ಹೊಂದಿವೆ. ಆದರೆ ಹೆಣ್ಣಿನ ವ್ಯಕ್ತಿತ್ವ ನಿರ್ಮಾಣದಲ್ಲಿ ಪುರುಷನಿಂದ ಅಂತಹ ತ್ಯಾಗ, ಪರಿಶ್ರಮಗಳನ್ನು ನಿರೀಕ್ಷಿಸುವುದು ಕಷ್ಟ ಸಾಧ್ಯವಾಗುತ್ತದೆ. ಒಂದು ವೇಳೆ ಎಲ್ಲ ಅಡೆತಡೆಗಳನ್ನು ಮೀರಿ ಹೆಣ್ಣು ತನ್ನ ಅಸ್ಮಿತೆಯನ್ನು

ಗುರುತಿಸಿಕೊಂಡರೂ ಕೌಟುಂಬಿಕ ಜೀವನದಲ್ಲಿ ಕಲಹವನ್ನೋ ಇಲ್ಲ ಸಾಮಾಜಿಕ ಕುಹಕವನ್ನೋ ಎದುರಿಸಬೇಕಾಗುತ್ತದೆ.

ಸಾಮಾಜಿಕ, ಆರ್ಥಿಕ ತಾರತಮ್ಯಗಳನ್ನು ಕೂಡ ವ್ಯಂಗ್ಯದ ಮೂಲಕವೇ ಮಹಿಳಾ ಕಾವ್ಯ ಕಟ್ಟಿಕೊಡುತ್ತದೆ.

**ಓ ಕೆರೆ ಭಾವಿಗಳೇ। ರೈಲು ಹಳಿಗಳೇ**
**ಕಪ್ಪು ರಸ್ತೆಯೇ**
**ನೀವು ಕಾಣಿರಾ? ನೀವು ಕಾಣಿರಾ?**
**ಜಜ್ಜಿದ ಮೆದುಳನ್ನು। ಹೆಜ್ಜೆ ಮೆಟ್ಟಿದ ಎದೆಯನ್ನು**
**ಕ್ರೂರ ಕೈಗಳು ಹರಿಹರಿದು। ಹೊಲಿದ ಕರುಳನ್ನು**

**(ನೀವು ಕಾಣಿರಾ? ನಾನಂಬ ಮಾಯೆ – ಸುಕನ್ಯಾಮಾರುತಿ – ಪುಟ ೫೩)**

ಮೇಲ್ಜಾತಿಯ, ಮೇಲ್ವರ್ಗದ ದಬ್ಬಾಳಿಕೆಗೆ, ದೌರ್ಜನ್ಯಕ್ಕೆ ಒಳಗಾಗಿ ಕೆರೆ ಭಾವಿಗಳಲ್ಲಿ, ರೈಲುಹಳಿಗಳಲ್ಲಿ, ಹಾದಿಬೀದಿಗಳಲ್ಲಿ ಹೆಣವಾಗಿ ಹೋಗುವ ಅಮಾಯಕರ ನಿಷ್ಕಾರುಣ ಹತ್ಯೆಯನ್ನು ಕವಿತೆ ಇದಾವುದೂ ಯಾಕೆ ಕಾಣುತ್ತಿಲ್ಲ ಎಂಬ ಧೋರಣೆಯೊಂದಿಗೇ ಪ್ರಶ್ನಿಸುತ್ತದೆ. ಅಕ್ಕನ ವಚನದ ಧಾಟಿಯಲ್ಲಿ ಮೂಡಿಬಂದಿರುವ ಕವನ ವಾಚನದಿಂದಲೇ ಓದುಗರನ್ನು ಸೆಳೆಯುತ್ತದೆ. ಇದೇ ಕವಯಿತ್ರಿಯ ಇನ್ನೊಂದು ಕವನ ಹೀಗೆ ವಚನದ ಧಾಟಿಯಲ್ಲೇ ವರ್ಗತಾರತಮ್ಯದ ಚಿತ್ರಣವನ್ನು ಕಟ್ಟಿಕೊಡುವುದು ಹೀಗೆ.

**'ಉಳ್ಳವರು ಶಿವಾಲಯ ಮಾಡುವರಯ್ಯ'**
**ನಾವೇನು ಮಾಡೋಣ ಬಡವರಯ್ಯ**
**ಮಿತಿಮೀರಿ ಬೆಳೆದ ಬೊಜ್ಜಿನ। ನೆರಳನ್ನಾದರೂ ನೀನಾಶ್ರಯಿಸಿದರೆ**
**ಸೊಗಸಾದ ದೇವಾಲಯಗಳಾದಾವು.**
**ನಮ್ಮ ಖಾಲಿ ಒಡಲುಗಳನ್ನೆಂತು। ದೇಗುಲವಾಗಿಸೋಣ?**

**(ಬಡವರಯ್ಯ – ನಾನೆಂಬಮಾಯೆ – ಪುಟ ೩೫)**

ಕವನದ ಪ್ರಾರಂಭ ದೈನ್ಯದೊಂದಿಗೆ ಶುರುವಾದಂತೆ ಭಾಸವಾಗುತ್ತದೆ. ಆದರೆ ಅದು ವ್ಯಂಗ್ಯದಿಂದ ಕೂಡಿದ ದೈನ್ಯವೆಂಬುದು ಕವಿತೆ ಮುಂದುವರಿದಂತೆ ಅನುಭವಕ್ಕೆ ಬರುತ್ತದೆ. ಬಡವರಾದವರು ದೇವಾಲಯ ಕಟ್ಟುವ ಅವಶ್ಯಕತೆ ಇಲ್ಲವೆಂಬುದನ್ನೂ ಕವಿತೆ ಸಮರ್ಥಿಸುತ್ತದೆ. ಯಾಕೆಂದರೆ 'ಬಡತನ'ದಲ್ಲಿ ಬೇಯುತ್ತಿರುವ ಹೊಟ್ಟೆಗಳಿಗೆ ಅಧ್ಯಾತ್ಮ ಆಹಾರವಾಗುವುದಿಲ್ಲ. ಆರ್ಥಿಕ ಸಂಕಷ್ಟಗಳೇ ಮೈತುಂಬ ಹಾಸಿ ಹೊದೆಯುವಷ್ಟು ಇದ್ದವರಿಗೆ ದೇವಾಲಯ ನಿರ್ಮಾಣದ ಬೋಧನೆ–ಸಾಧನೆ ಸಾಧ್ಯವೂ ಅಲ್ಲ. ಸಾಧುವೂ ಅಲ್ಲ. ಎಂಬುದನ್ನು ಕವನ ವಾಚ್ಯಗೊಳಿಸದೆ ಧ್ವನಿಪೂರ್ಣವಾಗಿ ಮಂಡಿಸುತ್ತದೆ. 'ವ್ಯಂಗ್ಯ' ಒಮ್ಮೊಮ್ಮೆ ವಿರುದ್ಧಧ್ವನಿಯಲ್ಲಿದ್ದರೆ ಇನ್ನು ಕೆಲವೊಮ್ಮೆ ವಿಷಾದವಾಗಿಯೂ

ಮಾರ್ಪಡುತ್ತದೆ. ಇಂತಹ ವಿಷಾದಕ್ಕೆ ನಿದರ್ಶನವಾಗಿ ಡಾ.ವಿನಯಾ ಅವರ ಈ ಕವನದ ಸಾಲುಗಳನ್ನು ನೋಡಬಹುದು.

**ಸಾವು ಅರ್ಥ ಕಳಕೊಂಡ ನೆಲದಲ್ಲಿ**
**ಹುಟ್ಟು ಹಬ್ಬವಾಗುವುದಿಲ್ಲ ಮಗೂ**

**(ಮುಲುಗುಡುವ ತಾಯ ಬಸಿರು – ಬಾಯಾರಿಕೆ – ಪುಟ ೨೭)**

'ಯುದ್ಧ' 'ಭಯೋತ್ಪಾದನೆ'ಗಳೆಂಬ ಕರಾಳ ಅಧ್ಯಾಯಗಳು ಮನುಕುಲದ ಅಶಾಂತಿಗೆ ವಿನಾಶಕ್ಕೆ ಸದಾ ತೆರೆದೇ ಇರುವ ದುಷ್ಟ ಶಕ್ತಿಗಳು. ಯಾರದೋ ಚಾರಿತ್ರಿಕ ಸಾಧನೆಗಳಾಗಿ, ಗೆಲುವುಗಳಾಗಿ ದಾಖಲಾಗುವ ಇವು ಜೀವಪ್ರೇಮವನ್ನು ತೊರೆದ ಅಮಾನವೀಯ ಕೃತ್ಯಗಳು ಸಾಮಾನ್ಯರ ಹಿಡಿತಕ್ಕೆ ಸಿಗದ ಇಂತಹ ಕರಾಳತೆಯನ್ನು ಸಂವೇದನಾಶೀಲ ಮನಸ್ಸೊಂದು ವಿಷಾದದೊಂದಿಗೆ ಮಂಡಿಸಲು ಮಾತ್ರ ಸಾಧ್ಯವಿದೆ. ಯಾವ ಹುಟ್ಟು ಸಂಭ್ರಮವಾಗಬೇಕಿತ್ತೋ ಅದು ಯಾವಾಗಲಾದರೂ ಬಂದೆರಗಬಹುದಾದ ಸಾವಿನ ಕಾರಣದಿಂದಾಗಿ ಸಾಮಾನ್ಯ ಸಂಗತಿಯಾಗಿಬಿಡುವ ಒಂದು ಹಂತದಲ್ಲಿ ಆತಂಕವನ್ನೂ ಹುಟ್ಟುಹಾಕಿ ಬಿಡುವ ಸಾಧ್ಯತೆಯೂ ಇದೆ.

ಹೀಗೆ ವ್ಯಂಗ್ಯವನ್ನು ಗಂಭೀರ ವಿಷಯಗಳ ಮಂಡನೆಯ ಕಾಲಕ್ಕೆ ಮಹಿಳಾಕಾವ್ಯ ಹೆಚ್ಚು ಹೆಚ್ಚು ಬಳಸಿಕೊಂಡಿರುವುದು ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಎಚ್.ಎಸ್. ರಾಘವೇಂದ್ರರಾವ್, 'ಕಣ್ಣ ಹನಿಗಳೆ ಕಾಣಿಕೆ', ಪುಟ ೯೪.

೨. ಅದೇ, ಪುಟ ೧೧, ೧೨.

೩. ಎಂ.ಎಸ್. ಆಶಾದೇವಿ, 'ನಡುವೆ ಸುಳಿವ ಆತ್ಮ', ಪುಟ ೫೨.

೪. ಓ.ಎಲ್. ನಾಗಭೂಷಣಸ್ವಾಮಿ, 'ವಿಮರ್ಶೆಯ ಪರಿಭಾಷೆ', ಪುಟ ೪೫.

೫. ಅದೇ, ಪುಟ ೪೬.

೬. ಅದೇ, ಪುಟ ೪೬.

೭. ಅದೇ, ಪುಟ ೪೭.

೮. ಅದೇ, ಪುಟ ೫೫.

೯. ಆರ್. ತಾರಿಣಿಶುಭದಾಯಿನಿ, 'ಚಿತ್ತಗ್ಲಾನಿಯ ಮಾತು', ಮುನ್ನುಡಿ, ಪುಟ ೮.

೧೦. ಓ.ಎಲ್. ನಾಗಭೂಷಣಸ್ವಾಮಿ, 'ವಿಮರ್ಶೆಯ ಪರಿಭಾಷೆ', ಪುಟ ೩೧೬.

೧೧. ಅದೇ, ಪುಟ ೩೧೬.

೧೨. ಅದೇ, ಪುಟ ૩೧೬.

೧૩. ಸ. ಉಷಾ. 'ನೀರುತೇರು' ಮುನ್ನುಡಿ.

೧೪. ಅಕ್ಷರ ಕೆ.ವಿ.(ಸಂ), ಸದ್ಯದ ಮಾತು ಬೇರೆ, ಪುಟ ೮೦.

೧೫. ಓ.ಎಲ್. ನಾಗಭೂಷಣಸ್ವಾಮಿ, 'ವಿಮರ್ಶೆಯ ಪರಿಭಾಷೆ', ಪುಟ ೭೧.

೧೬. ಅದೇ, ಪುಟ ೧೦೦.

೧೭. ಅದೇ, ಪುಟ ೧೦೫.

೧೮. ಅದೇ, ಪುಟ ೧೦೬.

◆◆

## ಅಧ್ಯಾಯ : ಆರು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಸಂವಹನದ ನೆಲೆಯಲ್ಲಿ

೬.೧. ಸ್ವಗತದ ಮಾದರಿ

೬.೨. ಸಂವಾದದ ಮಾದರಿ

೬.೩. ಕಥನ ಮಾದರಿ

೬.೪. ಪ್ರಶ್ನೆ ಮಾದರಿ

೬.೫. ಹೇಳಿಕೆಗಳ ಮಾದರಿ

## ಅಧ್ಯಾಯ : ಆರು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಸಂವಹನದ ನೆಲೆಯಲ್ಲಿ

ಮಾನವ ಸಮಾಜಜೀವಿಯಾಗಿದ್ದು, ನಾಗರಿಕ ಪ್ರಪಂಚದಲ್ಲಿ ಮೊಟ್ಟಮೊದಲ ಶ್ರೇಣಿಯ ಜೀವಿಯಾಗಿರುವುದಕ್ಕೆ ಬಹುಮುಖ್ಯ ಕಾರಣವೇ ಸಂವಹನ. ಭಾಷೆಯೆಂಬ ಅದ್ಭುತ ಅಸ್ತ್ರ ಇದನ್ನು ಸಾಧ್ಯವಾಗಿಸಿದ ಬಹುಮುಖ್ಯ ಸಾಧನಗಳಲ್ಲೊಂದು. 'ಸಂವಹನ' ನಿಘಂಟು ನೀಡುವ ಅರ್ಥ 'ಸಾಗಿಸುವುದು', 'ತಿಳಿಯಪಡಿಸುವುದು'.[1] ಇದಕ್ಕೆ ಸಂವಾದಿಯಾದ ಇಂಗ್ಲಿಶ್ ಪದ Communication.

ಮನುಷ್ಯರು ಸಮಾಜಜೀವಿಗಳು ಮತ್ತು ಬಾಲ್ಯದಿಂದಲೇ ಸಂವಹನೆಯ ಕ್ರಿಯೆಯಲ್ಲಿ ತೊಡಗಿರುವವರು. ಹೀಗಾಗಿ ನಮ್ಮ ಅನುಭವಗಳು, ಭಾವನೆಗಳು, ಯೋಚನೆಗಳು ಮತ್ತು ಮನಸ್ಸು ಕೆಲಸ ಮಾಡುವ ವಿಧಾನವನ್ನು ಸಂವಹನೆಯ ಅಗತ್ಯವೇ ನಿರ್ಧರಿಸಿ, ರೂಪಿಸುತ್ತದೆ. "ಒಂದು ಮನಸ್ಸು, ಇನ್ನೊಂದು ಮನಸ್ಸನ್ನು ಪ್ರಭಾವಿತಗೊಳಿಸುವಂತೆ ಸುತ್ತಲ ಪರಿಸರದಲ್ಲಿ ತೊಡಗಿಸಿಕೊಂಡಾಗ, ಆ ಮನಸ್ಸಿನಲ್ಲಿ, ಮೊದಲ ಮನಸ್ಸಿನಲ್ಲಿ ಇದ್ದಂತಹ ಅನುಭವ ಉಂಟಾಗುತ್ತದೆ ಮತ್ತು ಹಾಗಾಗುವುದಕ್ಕೆ ಆ ಮೊದಲ ಮನಸ್ಸಿನ ಅನುಭವ ಭಾಗಶಃ ಕಾರಣವಾಗುತ್ತದೆ" ಎಂದು ಐ.ಎ. ರಿಚರ್ಡ್ಸ್ ಸಂವಹನೆಯ ಪ್ರಕ್ರಿಯೆಯನ್ನು ವಿವರಿಸುತ್ತಾನೆ. ಮಾತು, ಬರವಣಿಗೆ, ಸಂಜ್ಞೆ, ಮುಖಭಾಗ ದೇಹದ ಭಂಗಿ ಇವು ಸಂವಹನೆಯ ಮಾಧ್ಯಮಗಳಾಗಿ ವರ್ತಿಸುತ್ತವೆ.[2]

ಕಾವ್ಯವನ್ನೂ ಒಳಗೊಂಡಂತೆ ಯಾವುದೇ ಕಲಾ ಪ್ರಕಾರ ಅಭಿವ್ಯಕ್ತಗೊಳ್ಳುವಾಗ ಸಂಹವನದ ದೃಷ್ಟಿಯಿಂದ ಕೆಲವೊಮ್ಮೆ ಸರಳವಾಗಿಯೂ, ಇನ್ನೂ ಕೆಲವೊಮ್ಮೆ ಸಂಕೀರ್ಣವಾಗಿಯೂ ಇರುವುದುಂಟು. ಕನ್ನಡ ಕಾವ್ಯಪ್ರಪಂಚಕ್ಕೆ ಬಂದಾಗ ವಿಶೇಷವಾಗಿ ಮಹಿಳಾಕಾವ್ಯ ಅನೇಕ ತಂತ್ರಗಳ ಮೂಲಕ ಸಹೃದಯವನ್ನು ತಲುಪಲು, ಹೊಸ ಹೊಸ ಸಾಧ್ಯತೆಗಳನ್ನು ಅರಸಿಕೊಂಡು, ನಾವೀನ್ಯತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಅಂತಹ ಕೆಲವು ಪ್ರಯತ್ನಗಳ ಮಾದರಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

೬.೧. ಸ್ವಗತದ ಮಾದರಿ

ಇದೊಂದು ರಂಗತಂತ್ರದ ಪರಿಭಾಷೆ. ನಾಟಕಗಳಲ್ಲಿ ಪಾತ್ರವೊಂದು ತನ್ನಷ್ಟಕ್ಕೆ ಆಡುವ ಮಾತು ತನ್ನ ವಿಚಾರಗಳನ್ನು ಗಟ್ಟಿಯಾಗಿ ಅಭಿವ್ಯಕ್ತಿಸಲು ಅಥವಾ ಮತ್ತೊಂದು ಪಾತ್ರಕ್ಕೆ ಇಲ್ಲವೇ ಪ್ರೇಕ್ಷಕರಿಗೆ ನೇರವಾಗಿ ಹೇಳಲು ಉದ್ದೇಶಿಸಿದ ಮಾತುಗಳೂ ಆಗಿರಬಹುದು. ಆಧುನಿಕ ಮಹಿಳಾ ಕಾವ್ಯದಲ್ಲಿ ಕಾವ್ಯದೊಳಗೆ ಒಂದು ಸಂವಾದವನ್ನು ಬೆಳೆಸಲು ಈ ವಿಧಾನ ದೊಡ್ಡ ಪ್ರಮಾಣದಲ್ಲಿ ಬಳಸಿಕೊಂಡಿರುವುದನ್ನು ಕಾಣಬಹುದು. ಅನೇಕ ಪೌರಾಣಿಕ ಪಾತ್ರಗಳ ಮೂಲಕ ವ್ಯಕ್ತಗೊಳ್ಳುವ ಹಾಗೆ ಸ್ವಗತ ಬಳಕೆಯಾಗಿದೆ. ಕೆಲವೊಮ್ಮೆ ಬಿಡಿ ಕವನದಲ್ಲಿ ಸ್ವಗತತಂತ್ರವಿದ್ದರೆ, ಇಡೀ ಸಂಕಲನವೇ ಸ್ವಗತದ ಹೆಸರಿನಲ್ಲಿ ಪ್ರಕಟವಾಗಿರುವುದೂ ಇರುತ್ತದೆ. ಇದಕ್ಕೆ ಶೈಲಜಾ ಉಡಚಣ ಅವರ 'ಸ್ವಗತ.' ಸರಸ್ವತಿ ಗೌಡ ಅವರ 'ದ್ರೌಪದಿಯ ಸ್ವಗತ', ಎಚ್.ಎಲ್. ಪುಷ್ಪ ಅವರ 'ಅಮೃತಮತಿಯ ಸ್ವಗತ' ಸಂಕಲವನ್ನು ಹೆಸರಿಸಬಹುದು.

ಸಂಬಂಧಗಳ ಪಾವಿತ್ರದ ದೃಷ್ಟಿಯಿಂದ 'ಅನೈತಿಕ ಮಾರ್ಗ ತುಳಿದ ಅಮೃತಮತಿಯ ಮನೋವಿಶ್ಲೇಷಣೆ ಎಚ್.ಎಲ್. ಪುಷ್ಪ ಅವರಲ್ಲಿ ಪ್ರಕಟವಾಗಿರುವುದು ಹೀಗೆ:

**ಮೈಯ ವಾಸನೆಗೆ ಜನ್ಮಾಂತರಗಳಿಲ್ಲ**
**ಬಂಧವಿಲ್ಲ ಈ ಪಾಡುಗಳಿಗೆ**
**ಹೊರುವ ಪಾಪಗಳಿಲ್ಲ**
**ಹಸಿವಿನದು ಏನಿಲ್ಲ, ಏನಿಲ್ಲ ಭೀತಿ**
**ಕತ್ತಿಯೂ ಕೂಡ ಅಳುಕುತ್ತದೆ.**
**ಕಂಪಿಸುತ್ತದೆ ಧರ್ಮದ ಸೂಕ್ಷ್ಮ ಜಂಜಾಟದಲ್ಲಿ**
**(ಅಮೃತಮತಿಯ ಸ್ವಗತ – ಪುಟ ೨)**

ಮನೋವಿಜ್ಞಾನದ ಪ್ರಕಾರ ಹಸಿವು, ಬಾಯಾರಿಕೆಗಳಂತೆ ಲೈಂಗಿಕತೆ ಕೂಡ ಜೀವಿಯ ಮೂಲಭೂತ ಅವಶ್ಯಕತೆಗಳಲ್ಲೊಂದು. ಪ್ರತಿ ಜೀವಿಯೂ ತನ್ನ ಇಷ್ಟದಂತೆ ಲೈಂಗಿಕ ತೃಪ್ತಿ ಪಡೆದುಕೊಳ್ಳುವ ಮೂಲಭೂತ ಅಧಿಕಾರ ಹೊಂದಿದೆ. ಆದರೆ ಇದು ಮಹಿಳೆಯ ವಿಷಯದಲ್ಲಿ ಶಾಪವಾಗಿ, ಪಾಪವಾಗಿ ಜನ್ಮಜನ್ಮಾಂತರಗಳಲ್ಲಿ ಮುಂದುವರಿಯುವ ಭಯ ಸೃಷ್ಟಿಯನ್ನು ಮಹಿಳಾಕಾವ್ಯ ಧಿಕ್ಕರಿಸುತ್ತದೆ. ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳುವ ಮೂಲಕ ಮಹಿಳೆ ತೋರಬೇಕಾದ ದಿಟ್ಟತನ ಅಮೃತಮತಿಯೆಂಬ ಪೌರಾಣಿಕ ಪಾತ್ರದ ಮೂಲಕ ಅನಾವರಣಗೊಳ್ಳುತ್ತಿದೆ. ಪುರುಷಪ್ರಧಾನ ಸಂಸ್ಕೃತಿ ತನ್ನೆಲ್ಲ ಸ್ವಾರ್ಥಕ್ಕೆ, ಪ್ರತಿಷ್ಠೆಗೆ ಸ್ತ್ರೀಯರನ್ನು ಪದೇ ಪದೇ ದಾಳವಾಗಿ ಬಳಸಿಕೊಂಡಿರುವುದು ಪರಂಪರೆಯಿಂದಲೂ ಬಂದ ಸತ್ಯವೇ ಆಗಿದೆ. ಇಂತಹ ವ್ಯವಸ್ಥೆಯನ್ನು ಪ್ರತಿರೋಧಿಸುವ ನೆಲೆಯಲ್ಲಿ ಚರಿತ್ರೆ, ವರ್ತಮಾನ, ಭವಿಷ್ಯಗಳನ್ನೆಲ್ಲ ಬಳಸಿಕೊಂಡಿರುವ ಮಹಿಳಾ ಕಾವ್ಯದ ವೈಶಿಷ್ಟ್ಯ

ನಾಲ್ಕು ಚಕ್ರವರ್ತಿ ಪುತ್ರರಿಗೆ ತಾಯಿಯಾದರೂ, ತಾಯಿಯಾಗಿ ಉಳಿಯದ ಮಾಧವಿಯನ್ನು ವಿಶ್ವಾಮಿತ್ರನಿಗೆ ಕೊಡಬೇಕಾದ ಗುರುದಕ್ಷಿಣೆಗಾಗಿ ಗಾಲವ ಬಳಸಿಕೊಂಡಾಗ ಆಕೆ ಗಾಲವನನ್ನು ನಿರಾಕರಿಸಿದ್ದೇ ದೊಡ್ಡ ಪ್ರತಿಭಟನೆಯಾಗಿದೆ.

ಭಲೇ ದಾನವೀರ ಯಯಾತಿ ಭಲೇ ಆದರ್ಶ ಶಿಷ್ಯಗಾಲವ
ಮೈಮನಗಳ ನಿಮಗಾಗಿ ಬಲಿ ಕೊಟ್ಟು
ನನಗ್ಯಾವ ಬಿರುದು ಹೇಳಿ ನನಗ್ಯಾವ ಬಾವಲಿ
ಪ್ರತಿಬಾರಿ, ಬಾರಿಯ ಅನುಷ್ಠಾನದಿಂದ
ಕನ್ಯೆಯಾದರೂ ನನ್ನ ಮಡಿಲ ಮಕ್ಕಳ
ನೀರು, ರಕ್ತ, ಮಾಸು, ಹೊಕ್ಕಳ ಬಳ್ಳಿಯ ಬೇರು
ಹಾಗೇ ಇದೆ ನನ್ನಲ್ಲಿ ಕದಲದೆ
(ಮಾಧವಿಯ ಸ್ವಗತ – ಅಮೃತಮತಿಯ ಸ್ವಗತ – ಪುಟ ೪೨)

ಇಲ್ಲಿ 'ಭಲೇ' ಎನ್ನುವ ಉದ್ಗಾರ ವ್ಯಂಗ್ಯವಾಗಿ ಮಾಧವಿಯ ತಿರಸ್ಕಾರ ತೀಕ್ಷ್ಣವಾಗಿ ಮೂಡಿಬರಲು ಸಹಾಯಕವಾಗಿದೆ.

ನೀನು ಶಂಕಿಸಿ ಪ್ರಶ್ನಿಸಿದ್ದು ಬರೀ ನಿನ್ನ ಸತಿಯನ್ನಲ್ಲ
ಇಡೀ ಸ್ತ್ರೀಕುಲವನ್ನು ದಹಿಸಿದ್ದು ನಂಬಿಕೆ ನಿರೀಕ್ಷೆಗಳನ್ನು
ಆಸೆ ಆಕಾಂಕ್ಷೆಗಳ ಧರೆಯನ್ನು ಥೇ..... ನೀನು ನನ್ನ
ಸ್ಪರ್ಶಿಸಲೇ ಬಾರದಿತ್ತು
ನಿನ್ನ ಅನುಮಾನದ ಮುಖದರ್ಶನ
ನನಗೆ ಬೇಡವಾಗಿತ್ತು
(ಅಹಲ್ಯೆಯ ಸ್ವಗತ – ಕಾಗದದ ಕುದುರೆ)

ನಿಜಸತಿಗೆ ದೂರವಾಗಿ ಪರಸತಿಯ ಉದ್ಧಾರ ಮಾಡುವ ಈ ರಾಮನೀತಿಯನ್ನು ಅಹಲ್ಯೆಯ ಮೂಲಕ ಇಡೀ ಸ್ತ್ರೀಕುಲವೇ ತಿರಸ್ಕರಿಸುತ್ತದೆ ಎಂಬ ಸಂದೇಶವನ್ನು ಈ ಕವನದ ನಿರೂಪಕಿ ರವಾನಿಸುತ್ತಿದ್ದಾಳೆ. ಪುರಾಣ ಪಾತ್ರಗಳಿಗಷ್ಟೇ ಸೀಮಿತವಾಗುವ ಈ ಕ್ರಮ ಬೇರೆ ಬೇರೆ ಪ್ರತಿಮಾ ಧ್ವನಿಗಳ ಮೂಲಕವೂ ಪ್ರಕಟವಾಗಿದೆ. ವೈದೇಹಿಯವರ 'ಹೊಳೆಯ ಸ್ವಗತ' ಜ್ಯೋತಿಯವರ 'ಒಂದು ಖಾಲಿ ಮನೆಯ ಸ್ವಗತ'ಗಳು ಹೊಳೆ, ಖಾಲಿ ಮನೆಗಳ ಪ್ರತಿಮೆಗಳ ಮೂಲಕ ತನ್ನನ್ನು ಗುರುತಿಸದ ಹೆಣ್ಣಿನ ಆರ್ತತೆಯನ್ನೇ ಪ್ರಕಟಿಸುತ್ತಿವೆ. ರಜಿಯಾ ಅವರು ಪ್ರೇಮ ನಿವೇದನೆಗೆ ಸ್ವಗತವನ್ನು ಬಳಸಿಕೊಳ್ಳುತ್ತಾರೆ.

ಯಾಕೆ ನೀನಿಷ್ಟು ಪ್ರಿಯವಾದೆ? ।
ನಿನಗೇನು ಗೊತ್ತು ।
ಲೋಕಕ್ಕಿಂತ ನೀನೆಷ್ಟು ಗಾಢವೆಂದು
(ಸ್ವಗತ – ರಜಿಯಾ ಅವರ ಕವಿತೆಗಳು – ಪುಟ ೬೩)

ವಿಜಯಾ ಸುಬ್ಬರಾಜ್ ಅವರು ವೃದ್ಧಾಪ್ಯದಲ್ಲಿ ಕಾಡುವ ಏಕಾಕಿತನ ದೂರವಾಗುವ ಸಂಬಂಧಗಳು, ಒಂಟಿತನದ ಭಯವನ್ನು ಅನಾವರಣಗೊಳಿಸಿದ್ದಾರೆ.

ಎಂಭತ್ತಾರರ ಪ್ರಾಯದಲ್ಲಿ । ಮುಚ್ಚಿದ ಬಾಗಿಲುಗಳ । ದಿಗಿಲು ಕಾಡುತ್ತದೆ.
ಗುಟುಕುಕೊಟ್ಟು । ಗರಿಬೆಳೆಸಿದ ಹಕ್ಕಿ । ಮರಿಯ ಕೇಳುವುದೇನು ।
ಸಾಕಿಸಲಹೆಂದು । ಕೇಳುವ ಈ ಸವಾಲಿಗೆ । ಉತ್ತರವೆಲ್ಲಿದೆ ನನಗೆ !

ಹೀಗೆ ಮಹಿಳಾ ಕಾವ್ಯದಲ್ಲಿ 'ಸ್ವಗತ' ಅನೇಕ ಸಾಧ್ಯತೆಗಳಲ್ಲಿ ಪ್ರಯೋಗವಾಗಿದೆ.

ಸ್ವಗತವೆಂದು ಹೇಳಿಕೊಳ್ಳದಿದ್ದರೂ 'ಸ್ವಗತ'ದ ಮಾದರಿಯಲ್ಲಿರುವ ಅನೇಕ ಕವಿತೆಗಳು ಇವೆ.

ನನಗೆ ಗೊತ್ತು
ಮತ್ತೆ ಗೌತಮನ ಸರ್ಪ
ಹೆಡೆಯೆತ್ತಲಾರದು
ನನ್ನೊಳಗೆ ಏನನ್ನೂ ಬಿತ್ತಲಾರದು
ರಾಮ ಸ್ಪರ್ಶಕ್ಕೆ
ಶಿಲೆ ಸ್ಫೋಟವಾಗಿದೆ ಅಷ್ಟೇ
ಹೆಣ್ಣಾಗಲಿಲ್ಲ

('ಅಹಲ್ಯೆ' – ನಾನೆಂಬ ಮಾಯೆ – ಪುಟ ೮೮)

ದುಶ್ಯಾಸನ ಉಲ್ಲಂಘಿಸಿದ
ನನ್ನನ್ನೇ ಸುಡ ಬಯಸುವ
ಹಸಿ ಹಸಿ ಮನಸ್ಸುಗಳ
ಅಪ್ರಬುದ್ಧ ಯತ್ನಗಳು
ಸೋಜಿಗ ಹುಟ್ಟಿಸುತ್ತವೆ
ನಿಗಿನಿಗಿ ಕೆಂಡ ನುಂಗಿದಳು
ಮತ್ತೇನು ಸುಡಬಹುದು ನನ್ನ?

(ಅಗ್ನಿಪುತ್ರಿ – ನಾನೆಂಬ ಮಾಯೆ – ಪುಟ ೨೨೫)

ಈ ಎರಡೂ ಕವನಗಳಲ್ಲಿ ಸಾಮಾನ್ಯವಾಗಿರುವ ಸಂಗತಿಯೆಂದರೆ ತಿರಸ್ಕಾರ. ಆತ್ಮಮರುಕದಿಂದ ಅನುಕಂಪ ಗಳಿಸಿಕೊಳ್ಳುವ ಹಂತವನ್ನು ಹೆಣ್ಣು ದಾಟಿ ಬಂದಿದ್ದಾಳೆ ಎಂಬುದನ್ನು ಸೂಚಿಸುವ ಪ್ರಯತ್ನವೂ ಇಲ್ಲಿದೆ. ಯಾವುದೇ ಅನುಕಂಪ, ಆತ್ಮಮರುಕಗಳಿಲ್ಲದೆಯೂ ಆಕೆ ದಿಟ್ಟಹೆಜ್ಜೆಯನ್ನು ಇಡಲು ತೀರ್ಮಾನಿಸಿರುವ ಈ ಬಗೆ ಒಟ್ಟಾರೆ ಮಹಿಳಾಕಾವ್ಯದ ದೃಷ್ಟಿಕೋನವನ್ನೂ ಕೂಡ ಪ್ರತಿನಿಧಿಸುತ್ತಿದೆ.

ಪ್ರಧಾನಧಾರೆ ಸಾಹಿತ್ಯ ಪರಂಪರೆಯಲ್ಲಿ ಪಡೆದುಕೊಳ್ಳದ ಪ್ರಾಧಾನ್ಯತೆಯನ್ನು ಮಹಿಳಾ ಕಾವ್ಯದಲ್ಲಿ ಮಾತ್ರ ಈ 'ಸ್ವಗತ' ತಂತ್ರ ತನ್ನೆಲ್ಲಾ ಸಾಧ್ಯತೆಗಳೊಂದಿಗೆ ಬಳಕೆಯಾಗಿದ್ದರ ಹಿಂದಿನ

ಕಾರಣಗಳನ್ನು ಪರಿಶೀಲಿಸಬೇಕಾಗಿದೆ. ಇದರ ಆಯ್ಕೆಗೆ ಇರಬಹುದಾದ ಆಂತರಿಕ ಒತ್ತಡಗಳನ್ನು ಇಲ್ಲಿನ ಸಾಂಸ್ಕೃತಿಕ ಬೇರುಗಳಲ್ಲಿ ಡಾ. ಬಿ.ಎನ್. ಸುಮಿತ್ರಾಬಾಯಿಯವರು ಗುರುತಿಸುತ್ತಾರೆ. ಮೌನದಿಂದ ಈಗಷ್ಟೆ ಹೊರಬಂದು ತಾನೇ ಮಾತಾಡಲು ಹೊರಟವಳಿಗೆ ಹಿಂದಿನಿಂದಲೂ 'ಬಾಯಿಮುಚ್ಚು' ಎನ್ನುತ್ತಲೇ ಬಂದ ವ್ಯವಸ್ಥೆಯು ತನ್ನ ಮಾತನ್ನು ಆಲಿಸಬಲ್ಲುದೇ ಎನ್ನುವ ಆತಂಕ, ಅಳುಕು, ಅನುಮಾನ ಸಹಜ. ತನ್ನ ಮಾತನ್ನು ಆಲಿಸುವ ಪ್ರತಿಕ್ರಿಯಿಸುವ ಕೇಳುಗರು ಯಾರು ಎನ್ನುವುದು ಇಲ್ಲಿ ಅಸ್ಪಷ್ಟವಾದದ್ದು. ವ್ಯಕ್ತಿ–ವ್ಯಕ್ತಿಯ ನೇರವಾದ ಮುಖಾಮುಖಿ ಸಂವಾದದ ಜಾಗ ಇನ್ನೂ ಅವಳಿಗೆ ಸಿಕ್ಕಿಲ್ಲ. ಈ ಸ್ಥಿತಿಯಲ್ಲಿ ಹುಟ್ಟುವ ಅನಾಥತೆ, ಅಸ್ಥಿರತೆಯ ಭಾವನೆಗಳನ್ನು ಹೇಗಾದರೂ ಮೀರಲೇಬೇಕಿದೆ. ಆದ್ದರಿಂದ ತನ್ನಷ್ಟಕ್ಕೆ ತಾನೇ ಆದರೂ ತನ್ನೊಳಗೆ ಕಟ್ಟಿಟ್ಟುಕೊಂಡಿದ್ದ ತನ್ನ ನಿಜಗಳನ್ನು ಹೊರಹಾಕಲು ಸ್ವಗತದ ದಾರಿಯನ್ನು ಹೆಣ್ಣು ಆಯ್ದುಕೊಳ್ಳುತ್ತಾಳೆ ಎನ್ನಬಹುದು. ಮೌನದ ಬಿಗಿತದ ಕಟ್ಟುಗಳನ್ನು ಮೀರುವ ಈ ಪ್ರಯತ್ನ ಕಾವ್ಯರೂಪ ಪಡೆದಾಗ ಅದು ಅಂತಿಮವಾಗಿ ತಲುಪಬೇಕಾದದ್ದು ಓದುಗ ಸಮುದಾಯವನ್ನು. ಈ ಸಮುದಾಯವು ತಾನು ಬದುಕಬೇಕಾಗಿರುವ ಸಮಾಜದ್ದೇ. ಅದೇ ಸಮಾಜಕ್ಕೆ ಅದರ ಹುಳುಕುಗಳನ್ನು ಅಥವಾ ಕ್ರೂರ ಮುಖಗಳನ್ನು ತನ್ನ ಒಳ ಕುದಿತ, ಅಸಹನೆ ಸಂಕಟಗಳನ್ನು ಇದ್ಯಾವುದೂ ಇಲ್ಲದಿದ್ದಲ್ಲಿ ಬದುಕನ್ನು ತಾನು ಹೇಗೆ ಭಾವಿಸುತ್ತೇನೆ ಎನ್ನುವುದನ್ನೇ ಇರಲಿ, ಹೇಳಬೇಕಾಗಿರುವಾಗ ತನ್ನ ಸುತ್ತಲೂ ಕಾವಲು ಕೂತ ವ್ಯವಸ್ಥೆಯ ಕಣ್ಣುಗಳ ಕುಹಕ ಮತ್ತು ನಾಲಿಗೆಗಳ ಚಾವಟಿಯಿಂದ ತನ್ನನ್ನು ಕಾಯ್ದುಕೊಳ್ಳಲಿಕ್ಕೆ 'ಸ್ವಗತ'ದ ಹಾದಿ ಒಂದು ರಕ್ಷಣಾ ತಂತ್ರ ಕೂಡ ಆಗಿರಬಹುದೆಂಬುದು ಸುಮಿತ್ರಾಬಾಯಿ ಅವರ ಅಭಿಪ್ರಾಯ.

ಇಡೀ ಸಮುದಾಯದ ಗಮನ ಸೆಳೆಯುವಂಥ ಸ್ವಗತವೆಂಬ ನಾಟ್ಯಕ್ರಮದ ಬಳಕೆಗೆ ಮಹಿಳಾ ಕಾವ್ಯದೊಳಗೇ ಇರಬಹುದಾದ ಸಾಂಸ್ಕೃತಿಕ ಕಾರಣವೊಂದನ್ನು ನಾವು ಹುಡುಕುವುದಾದರೆ ಅದು ನಮ್ಮ ಪಿತೃಪ್ರಧಾನ ವ್ಯವಸ್ಥೆ. ಈ ಪಿತೃಸಂಸ್ಕೃತಿ ನಿಂತಿರುವುದು ಹೆಣ್ಣಿನ ಲೈಂಗಿಕ ನಿಷ್ಠೆಯ ತಳಪಾಯದ ಮೇಲೆ. ಗತಕಾಲದಲ್ಲಿ ಯಾರೆಲ್ಲ ಇಂಥ ನಿಷ್ಠೆಯನ್ನು ಉಲ್ಲಂಘಿಸಿದ್ದಾರೋ ಅವರನ್ನು ಪಿತೃಸಂಸ್ಕೃತಿಯ ಪರಂಪರೆ ಕೀಳಾಗಿ ಚಿತ್ರಿಸಿರುತ್ತದೆ. ಹಾಗೆಯೇ ಈ ನಿಷ್ಠೆಯನ್ನು ಪಾಲಿಸಿದವರನ್ನು ಉಜ್ವಲ ಮಾದರಿಗಳೆಂದು ಹೊಗಳಲಾಗಿದೆ. ಇಂಥ ದ್ವಿಮುಖ ಚಿತ್ರಣದ ಹಿಂದಿರುವ ಲಿಂಗರಾಜಕಾರಣವನ್ನು ಬಯಲಿಗೆಳೆಯಲು ಆ ಪುರಾಣ ಪ್ರತೀಕಗಳನ್ನು ವರ್ತಮಾನಕ್ಕೆ ತಂದು ಅವರೊಳಗೆ ಒಬ್ಬ ಇಂದಿನ ಹೆಣ್ಣನ್ನು ಇರಿಸಿ ಮಾತನಾಡಿಸುವುದು ಕಾವ್ಯದೊಳಗೆ ಪುರಾಣಭಂಜನೆಯ ಒಂದು ವಿಧಾನವೂ ಆಗುತ್ತದೆ. ಯಾವ ಪುರಾಣ ಪ್ರತೀಕಗಳಿಗೆ ಈ ಸಂಸ್ಕೃತಿಯಲ್ಲಿ ಹೆಚ್ಚಿನ ಆಸ್ಥೆ ಇದೆಯೋ ಅದೇ ಪರಿಚಿತ ಮಾದರಿಗಳನ್ನು ಬಳಸಿರುವುದರಿಂದ ಮಹಿಳಾಕಾವ್ಯದತ್ತ ನೋಡುಗರ ಪ್ರಮಾಣವೂ ಗಣನೀಯವಾಗಿರುತ್ತದೆ. ಕಾವ್ಯದೊಳಗೊಂದು ಹೊಸತನವೂ ಮೂಡಿಬಂದಿದ್ದು, ಮಹಿಳಾಕವಿಗಳ ಉದ್ದೇಶ ಈಡೇರಿಕೆ ಸುಲಭವಾಗಿದೆ. ಪ್ರಿಯವಾಗಿದ್ದರ ಜೊತೆಗೇ ಅಪ್ರಿಯ ಸತ್ಯವನ್ನೂ ಮನವರಿಕೆ ಮಾಡಿಕೊಡುವ ಈ ತಂತ್ರ ಮಹಿಳಾಕಾವ್ಯದ ವಿಶಿಷ್ಟತೆಯಾಗಿಯೂ ಕಾಣಿಸಿಕೊಳ್ಳುತ್ತದೆ.[೬]

### ೬.೨. ಸಂವಾದದ ಮಾದರಿ

ಆಧುನಿಕ ಮಹಿಳಾಕಾವ್ಯ ಸಂವಹನಿಸಿದ ಮಾದರಿಗಳಲ್ಲಿ ಸಂವಾದ ಕೂಡ ಒಂದಾಗಿದೆ. ಅಕ್ಕಮಹಾದೇವಿ ಕೂಡ ಆಧ್ಯಾತ್ಮಿಕ ಶೋಧದಲ್ಲಿರುವಾಗ ಪ್ರಕೃತಿಯೊಂದಿಗೆ ಸಂವಾದ ನಡೆಸುತ್ತಾ ಉಳಿದ ವಚನಕಾರರಿಗಿಂತ ಭಿನ್ನವಾಗಿ ಸಂವಹನಿಸಿದ್ದನ್ನು ಕಾಣಬಹುದಾಗಿದೆ. ಇದನ್ನು ಸ್ವಗತದ ಮುಂದುವರಿದ ಮಾದರಿಯೆಂದೂ ಗುರುತಿಸಬಹುದಾಗಿದೆ. ಕೇಳುಗರಿಲ್ಲದ ಮುಜುಗರದಿಂದ ಸ್ವಗತ ಬಳಕೆಯಾದರೆ ಸಂವಾದ ತನ್ನ ಎದುರಿಗೆ ಕೇಳಿಸಿಕೊಳ್ಳುವ ಇನ್ನೊಂದು ಕಿವಿಯಿರುವ ಬಗೆಗಿನ ನಂಬಿಕೆ ಹೊಂದಿದೆ. ಬಹುಪಾಲು ಸಂದರ್ಭಗಳಲ್ಲಿ ಈ ಸಂವಾದ ಏಕಮುಖಿಯಾಗಿದ್ದುದಿದೆ. ಪರಸ್ಪರ ಸಂಭಾಷಣೆಗಿಂತಲೂ ಸಂವಾದದ ಆರಂಭ, ಸಮಾರೋಪಗಳೆಲ್ಲವೂ ಒಂದೇ ಕಡೆಯಿಂದ ಬಂದಂತೆ ಭಾಸವಾಗುವುದೂ ಇದೆ. ಸಂಬೋಧನೆಯನ್ನು ಆಧರಿಸಿ ಸಂವಾದ ನಡೆಯುವ ನೆಲೆಗಳನ್ನು ಹೀಗೆ ಗುರುತಿಸಬಹುದಾಗಿದೆ.

ಅ. ಗೆಳತಿ ಅಥವಾ ಸಖನೊಂದಿಗೆ ನಡೆಸುವ ಸಂವಾದ

ಆ. ಕೌಟುಂಬಿಕ ಆವರಣದಲ್ಲಿ ನಡೆಯುವ ಸಂವಾದ

ಇ. ಪ್ರಕೃತಿಯೊಂದಿಗಿನ ಸಂವಾದ

**ಅ. ಗೆಳತಿ ಅಥವಾ ಸಖನೊಂದಿಗೆ ನಡೆಸುವ ಸಂವಾದ**

ಜಗತ್ತಿನಲ್ಲಿ ಎಲ್ಲ ಸಂಬಂಧಗಳನ್ನೂ ಮೀರಿ ನಿಲ್ಲುವ ಸಾಮರ್ಥ್ಯ ಸ್ನೇಹಕ್ಕಿದೆ ಎಂಬುದು ಸಾಮಾನ್ಯ ನಂಬಿಕೆ. ತನ್ನದೇ ವಯಸ್ಸಿನ, ಸಮಾನ ಮನಸ್ಕ ಗೆಳತಿ ಅಥವಾ ಗೆಳೆಯನೊಂದಿಗೆ ತನ್ನೆಲ್ಲ ದುಗುಡ-ದುಮ್ಮಾನಗಳನ್ನು ಹಂಚಿಕೊಳ್ಳುವುದು ಆಪ್ಯಾಯಮಾನವೆನಿಸುವ ಸಂಗತಿ.

**ಎಂಥ ಗೂಡಿದು ಸಖೀ ದ್ವಾಸುಪರ್ಣ ಕುಟಿ**
**ತಗ್ಗು ಮಾಡು ನೋಡು ಬಗ್ಗು ಕಿಟಕಿ**

**('ಗಗನ ಚುಕ್ಕಿ - ಪರ್ಣಕುಟಿ' - ಪಾರಿಜಾತ - ಪುಟ ೯)**

ಇಲ್ಲಿ ಕನಸೊಂದನ್ನು ಹಂಚಿಕೊಳ್ಳುತ್ತಿರುವ ಹೆಣ್ಣು ತನ್ನ ಸಖಿಯೊಂದಿಗೆ ನಡೆಸುವ ಏಕಮುಖಿ ಸಂವಾದವಿದೆ. ಮುಂದುವರಿದು ಹೆಣ್ಣು ತನ್ನ ಮನಸ್ಸಿನ ಭಾವನೆಗಳನ್ನು ಹಂಚಿಕೊಳ್ಳಲು ಗೆಳತಿಯನ್ನೂ ಒಳಗೊಂಡು ಸಾಮೂಹಿಕ ದನಿಯಲ್ಲಿ ಮಾತನಾಡುವುದೂ ಇದೆ.

**ಹೌದು ಕಣೆ ಉಷಾ**
**ನಾವು ಹುಡುಗಿಯರೇ ಹೀಗೆ...**

ಎಂದು ಪ್ರಾರಂಭವಾಗುವ ಪ್ರತಿಭಾ ಅವರ ಕಾವ್ಯ ಇಡೀ ಸ್ತ್ರೀಕುಲದ ಒಟ್ಟಾರೆ ಲಕ್ಷಣವನ್ನು ತನ್ನನ್ನೂ, ತನ್ನ ಗೆಳತಿಯನ್ನೂ ಒಳಗೊಂಡಂತೆ ನಿರೂಪಿಸುತ್ತದೆ. ಇಲ್ಲಿ ತನ್ನ ಮಿತಿಯನ್ನು ತನ್ನ

ನಡವಳಿಕೆಯಲ್ಲೇ ಗುರುತಿಸಿಕೊಂಡು ವ್ಯಂಗ್ಯಕ್ಕೀಡು ಮಾಡಿಕೊಳ್ಳುವುದರ ಮೂಲಕ ತನ್ನ ಮಿತಿಯನ್ನು ಮೀರಬೇಕಾದ್ದು ತಾನೇ ಹೊರತು ಅನ್ಯರ ಸಹಾಯದಿಂದಲ್ಲ ಎಂಬ ಸ್ವವಿಮರ್ಶೆ ಕೂಡಾ ಕಾಣುತ್ತದೆ. ಈ ಮಾತುಗಳನ್ನು ಕೇಳಿಸಿಕೊಳ್ಳುವ ಸಖಿ ವರ್ತಮಾನದವಳೇ ಆಗಬೇಕೆಂದೇನೂ ಇಲ್ಲ. ಆಕೆ ಪುರಾಣದ ಸ್ತ್ರೀ ಪ್ರತೀಕ ಇದ್ದಿರಬಹುದು. ಹಾಗಾಗಿಯೇ ಡಾ. ಎಸ್.ವಿ. ಪ್ರಭಾವತಿಯವರು ಕಾರ್ತಿಕ ಋಷಿಯ ತಾಯಿ ಕೃತಿಕೆಯೊಂದಿಗೆ ಸಂಭಾಷಿಸುತ್ತಾರೆ.

**ಹೇಳೇ ಕೃತ್ತಿಕಾ**

**ಅಂದು ಆಟವಾಡಿ ಬೆಳೆದ ತಂದೆಯ ತೊಡೆಯೇ**

**ಇಂದು ನಿನ್ನ ತೊಡೆಯ ಬೆಂಕಿಗೆ ಆಜ್ಯವಾದಾಗ**

**ಮೊಲೆಯೂಡಿ ಬೆಳೆಸಿದ ತಾಯಿಯೇ ಆ ಬೆಂಕಿಗೆ**

**ನಿನ್ನನ್ನು ನಿಶ್ಶಬ್ದವಾಗಿ ಒಪ್ಪಿಸಿದಾಗ**

**..................................**

**ಎಲ್ಲಿಯ ಬಾಂಧವ್ಯ**

**ಎಲ್ಲಿಯ ವ್ಯಾಮೋಹ**

**(ಕೃತ್ತಿಕಾ – ಉಳಿದದ್ದು ಆಕಾಶ – ಪುಟ ೧೩)**

ಮಗಳನ್ನೇ ಮದುವೆಯಾದ ತಂದೆಯಿಂದ ಹುಟ್ಟಿದ ಕಂದ ತನ್ನ ತಾತ, ಅಪ್ಪ ಒಬ್ಬನೇ ಎಂಬ ಸತ್ಯ ತಿಳಿದರೆ ಉತ್ತರಿಸಬೇಕಾದ ಕೃತ್ತಿಕೆಯ ಮನಸ್ಥಿತಿ ಇಲ್ಲಿನ ಊಹೆ. ಇದು ಕೂಡ ಏಕಮುಖಿ ಸಂವಾದವಾಗಿ ಕೃತಿಕೆಯ ಮೌನ ಓದುಗರನ್ನು ಕಾಡುವ ಮೌನವಾಗಿಯೇ ಉಳಿಯುತ್ತದೆ.

ಸಖನೊಂದಿಗೆ ಸಂವಾದಿಸುವಾಗ ಬಹುಪಾಲು ನಾನು–ನೀನು ಎಂಬ ಸರ್ವನಾಮ ಬಳಕೆಯಾಗಿದ್ದೇ ಹೆಚ್ಚು. ಇದು ಲಿಂಗದ ನಡುವಿನ ಅಂತರವನ್ನು ದೃಢೀಕರಿಸುವ ಅಂಶವೂ ಆಗಿ ಕಾಣಿಸುತ್ತದೆ.

**'ಈಗ ಹೇಳು ಯಾರು ನಿನ್ನ ನೀ ಗತಿಗೆ ತಂದರು**

**ಅಥವಾ ಮರೆತು ಬಿಡು**

**ನಿನ್ನೆಗಳು ನಾಳೆಗಳು ಕೊಚ್ಚಿ ಹೋಗಲಿ**

**ಒಂದು ಬಿಸಿ ಚುಂಬನದಲಿ'**

**(ಮೋದಾಳಿ – ಈ ನೆಲದ ಹಾಡು – ಸ. ಉಷಾ)**

ಪುರುಷನನ್ನು ಗೆಳೆಯ ಎಂದು ಕರೆದು, ಈ ನೆಲದ ಕಣ್ಣೀರನಳಿಸಲು ಕೈಯನ್ನಾದರೂ ಎತ್ತೋಣ ಎಂದು ಲಿಂಗತಾರತಮ್ಯದ ವಿರುದ್ಧ–ದಮನದ ವಿರುದ್ಧ ಮಾತನಾಡುತ್ತಲೇ ಸಮಾನತೆಯ ಹೊಸ ಕನಸನ್ನು ಕಾಣುವ ಮನುಕುಲದ ಅಸಲಿ ನೋವುಗಳನ್ನು ಅಳಿಸಲು ಹೆಣ್ಣು ಗಂಡು ಕೂಡಾ ಒಂದಾಗಿ ದುಡಿಯಬೇಕೆನ್ನುವುದರ ಕಡೆಗೆ ನಿರೂಪಕಿಯ ಕನಸು ಇದೆ.

**ನೀನು ಬರಿ ಹವಳವಲ್ಲ**
**ನಾನು ಬರಿ ಸಾಲ್ಮನ್ ಅಲ್ಲ**
**ಹಾರು ನನ್ನೊಡನೆ ಈ ಅನಂತ ನೀಲಧಿಯಲಿ**
**ನಾನೂ ತಂಗುತ್ತೇನೆ ನಿನ್ನ ಹವಳ ವಕ್ಷದಲ್ಲಿ**
**ಬೆಳೆಯಲಿ ಸಾಲ್ಮನ್ ಕುವರಿಯರು**
**ಹವಳ ಕುಮಾರರು ನನ್ನ ನಿನ್ನ ಆಸರೆಯಲಿ**

**(ಹವಳ ಹಾರಿದ ಹೊತ್ತು – ಸ. ಉಷಾ)**

ಹವಳ ಮತ್ತು ಸಾಲ್ಮನ್‌ಗಳನ್ನು ಹೆಣ್ಣು ಮತ್ತು ಗಂಡಿಗೆ ಸಮೀಕರಿಸಿಕೊಂಡಿರುವ ನಿರೂಪಕಿ ಹವಳಕ್ಕೆ ತನ್ನ ಸೌಂದರ್ಯದ ಮನೆಯಲ್ಲೇ ಸಮಾಧಿ. ಸಾಲೊಮನ್ನಿಗೆ ಅಲೆತದ ಶಿಕ್ಷೆ. ಈ ಸ್ಥಿತಿ ಬೇಕಾದರೆ ತಿರುವು ಮುರುವು ಆಗಬಹುದು. ಅಲೆಮಾರಿಯ ಸ್ವಾತಂತ್ರ್ಯವನ್ನು ಹೆಣ್ಣೂ ತಂಗುವ ನೆಮ್ಮದಿಯನ್ನು ಗಂಡೂ ಅನುಭವಿಸಬಹುದು. ಹೆಣ್ಣಿನೊಳಗೊಂದು ಗಂಡಿದೆ. ಗಂಡಿನೊಳಗೊಂದು ಹೆಣ್ಣಿದೆ. ಅವರಿಬ್ಬರ ಆರೋಪಿತ ಸ್ಥಾಯಿಗುಣಗಳು ಪಲ್ಲಟಗೊಂಡಾಗ ಬದುಕು ಚೆಲುವಾಗುತ್ತದೆ ಎಂಬುದು ನಿರೂಪಕಿಯ ಅಭಿಪ್ರಾಯ.

**ಆ. ಕೌಟುಂಬಿಕ ಆವರಣದಲ್ಲಿ ನಡೆಯುವ ಸಂವಾದ**

ಸಂಬಂಧಗಳಲ್ಲಿನ ಮಮಕಾರ, ಜೀವನ ರೀತಿಯ ಬಗೆಗಿನ ಚಿಂತನೆಗಳನ್ನು ತೀರಾ ಖಾಸಗಿಯಾಗಿ, ಆತ್ಮೀಯವಾಗಿ ಚರ್ಚಿಸುವ ಅಂಶಗಳ ಹಿನ್ನೆಲೆಯಲ್ಲಿ ಈ ಮಾದರಿ ಬಳಕೆಯಾಗಿರುತ್ತದೆ. ವೈದೇಹಿಯವರ 'ಅಮ್ಮನ ಪದ್ಯಗಳು' ತಾಯಿ ಮಗುವಿನ ನಂಟು ಒಂದು ಹಂತದಲ್ಲಿ ಅದು ಕಳಚಿಕೊಳ್ಳುವಿಕೆ, ಅದರಿಂದ ಉಂಟಾಗುವ ತೀವ್ರ ವೇದನೆಯನ್ನು ನಿರೂಪಿಸುತ್ತಿವೆ.

**ಮಗೂ, ಕೈ ಹಿಡಿಕೋ ಸರಿಯಮ್ಮ**
**ಕೈ ಬಿಡಬೇಡ ಆಯಿತಮ್ಮ**
....................
..................
**ಅಕ ಅಲ್ಲಿ ನೋಡು ಇಕ ಇದನು ಓದು**
**ಇಲ್ಲಿ, ಇದು, ಕಂಡೆಯ?**
................
**ಮಗೂ..................**
**ಅಮ್ಮಾ....................**
.........................
**ಅಂಂ ಮ್ಮಾ**

**(ಅಮ್ಮನ ಪದ್ಯಗಳು – ಹೂವ ಕಟ್ಟುವ ಕಾಯಕ – ಪುಟ ೧೦೨)**

ಜೀವನದ ಒಂದು ಹಂತದಲ್ಲಿ ಅಮ್ಮನ ಸಂವಾದ ನಿಂತುಹೋಗುವುದು ಪ್ರತಿ ಸಂಬಂಧವೂ ಕಾಲಗರ್ಭದಲ್ಲಿ ಕಳೆದುಹೋಗುವ ಕಹಿಸತ್ಯವನ್ನು ಇಲ್ಲಿನ ಸಾಲುಗಳು ನಿರೂಪಿಸುತ್ತಿವೆ. ಅಮ್ಮನ ಕಾಳಜಿ, ಅಮ್ಮನಿಲ್ಲದ ಬದುಕಿನಲ್ಲಿ ಆವರಿಸುವ ಶೂನ್ಯ ಕೇವಲ ಈ ಸಂವಾದ ಮಾತ್ರದಿಂದಾಗಿ ಪ್ರಕಟಗೊಳ್ಳುತ್ತವೆ. ಆದರೆ ಅಮ್ಮ ಮಗುವಿನ ನಂಟು ಈ ಲೋಕಕ್ಕೆ ಬಂದ ನಂತರದ್ದು ಮಾತ್ರವಲ್ಲ. ಅದಕ್ಕಿಂತ ಪೂರ್ವದ್ದು. ಜೀವಾಂಕುರವಾದಂದಿನಿಂದ ಬೆಳೆಯುವ ನಂಟು. ಲಿಂಗದ ಕಾರಣದಿಂದಾಗಿ ಜಗತ್ತಿಗೆ ಬರುವ ಮುನ್ನವೇ ಹೊಸಕಿ ಹಾಕುವ ಕ್ರೌರ್ಯವನ್ನು ಮಾಧವಿ ಭಂಡಾರಿಯವರು ಅಮ್ಮಾ-ಮಗುವಿನ ಸಂವಾದದಲ್ಲಿ ಕಟ್ಟಿಕೊಟ್ಟಿದ್ದಾರೆ.

**'ಅಮ್ಮಾ**
**ಒಡಲಿಂದ ಬಂದ ಎಳೆದನಿಗೆ**
**ಬೆಚ್ಚಿ ಬಿದ್ದಳು ಅಮ್ಮಾ ಇಲ್ಲಿ ಇಲ್ಲಿ ನಾನಮ್ಮಾ**
**ನಿನ್ನ ಹೊಟ್ಟೆಯೊಳಗಿನ ಕಂದ**
**ಸ್ವಲ್ಪ ಹೊತ್ತು ಮಾತನಾಡಬಾರದೆ ಅಮ್ಮಾ?'**

**ನೀನಿತ್ತ ಗುಟುಕು ಗುಟುಕರಿಸುತ್ತ**
**...................... ಬೆಚ್ಚಗಿನ ಈ ನಿನ್ನ**
**ಗರ್ಭ ಗುಡಿಯೇ ಹಿತವಮ್ಮಾ ನನಗೆ**
**ಅದೇ ಇರಲಮ್ಮಾ ನನಗೆ**
**('ಹೊಟ್ಟೆಯೊಳಗಿನ ಕಂದ' – ಹರಿದ ಸ್ಕರ್ಟಿನ ಹುಡುಗಿ – ಪುಟ ೩೦)**

ಭ್ರೂಣಪತ್ತೆಯಂತಹ ವೈದ್ಯಕೀಯ ಬೆಳವಣಿಗೆ ಹೆಣ್ಣು ಮಗುವಿನ ಜೀವಕ್ಕೆ ತಾಯಿಯ ಗರ್ಭದಲ್ಲಿಯೇ ಅಪಾಯವನ್ನು ತಂದಿತ್ತಿರುವ ಸಂಗತಿ ಹೆಣ್ಣಿನ ಬದುಕಿನ ಮೇಲೆ ವೈಜ್ಞಾನಿಕ ಅನ್ವೇಷಣೆಗಳೂ ಕೂಡ ದಾಳಿ ಮಾಡುವುದನ್ನು ಸೂಚಿಸುತ್ತದೆ.

ಜೀವನದ ಅನಿಶ್ಚಿತತೆಯ ನಡುವೆಯೇ ತಾಳಿಕೊಳ್ಳಬೇಕಾದ ಅನಿವಾರ್ಯತೆ, ಯಾವುದನ್ನೂ ಬಹಳ ಕಾಲ ಹತ್ತಿಡಲಾಗದೆಂಬ ಜೀವನ ಸತ್ಯವನ್ನು 'ಉಸ್ರುಬುಂಡೆ' ಎಂಬ ಕವನದಲ್ಲಿ ನಡೆಯುವ ಅಪ್ಪ – ಮಗನ ಸಂವಾದ ನಿರೂಪಿಸುತ್ತಿದೆ.

**ತತ್ತಾ ಮಗ ......... ಒಡೆದೋದಾತು,**
**.........................**
**ಸುಮ್ನಿರಪ್ಪೊ ಅದೇನು.............ಒಂದೇ ಸಮ್ನೆ**
**.........................**
**ಜಾರೇ ಹೋಯ್ತದೆ ಕನಪ್ಪ ಈ ದಾರ**

ಯಾವ್ಳ ಅಂಗೆ ಕೂಡಾಕಕಾಗ್ನು ಮಗ.............
ಇಸ್ಕೂಲಲ್ಲಿ ಆ ಟೀಚರಮ್ಮನೂ ಅಂಗೇ ಏಳ್ತರೆ
ತುಂಬಿದ್ದ ಚೆಲ್ಲಿ ಮತ್ತೆ ಕೂಡ್ಕತದೆ ಅಂತ

(ಉಸ್ರುಬುಂಡೆ – ಜ.ನಾ. ತೇಜಶ್ರೀ – ಪುಟ ೧೧)

ಹೀಗೆ ಮುಂದುವರಿಯುವ ಸಂವಾದ ವ್ಯಕ್ತಿಸ್ವಾತಂತ್ರ್ಯ, ವರ್ಗತಾರತಮ್ಯದಂತಹ ಗಂಭೀರ ಆಲೋಚನೆಗಳನ್ನೂ ತನ್ನ ಒಡಲಲ್ಲಿರಿಸಿಕೊಂಡಿದೆ. ಈ ಸಂವಾದ ಮಾತ್ರದಿಂದಾಗಿ ವಿಷಯ ನಿರೂಪಣೆ ಬಹಳ ಸರಾಗಗೊಂಡಿರುವಂತೆ ಕಾಣುತ್ತದೆ. ದೈನಂದಿನ ಆಡುಭಾಷೆ ಕೂಡ ಕವನಕ್ಕೆ ಕಳೆಕಟ್ಟಿದೆ.

ಇನ್ನು ದಾಂಪತ್ಯದಲ್ಲಿ ನಡೆಯುವ ಸಂವಾದ ಕೆಲವೊಮ್ಮೆ ಸರಸ, ಕೆಲವೊಮ್ಮೆ ವಿರಸ, ಕೆಲವೊಮ್ಮೆ ಸಂತೈಸುವಿಕೆ ಇತ್ಯಾದಿಯಾಗಿ ಮೂಡಿಬರುತ್ತದೆ. ತಾರಿಣಿಯವರಲ್ಲಿ ದಾಂಪತ್ಯದಲ್ಲಿನ ವಿರಸವೂ ಜಿ. ಪೂರ್ಣಿಮಾ ಕವನದಲ್ಲಿ ಸಂತೈಸುವಿಕೆಯನ್ನು ಕಾಣಬಹುದು.

'ಕೆಲಸಕ್ಕೆ ಬಾರದವಳೇ ಜಗಳಗಂಟಿ ಚೌಡಿ
ನೀನು ಮನೆತನ ಮಾಡ್ತೀಯಾ? ಸ್ವಲ್ಪ ಬಂದು ಬೆನ್ನುಜ್ಜು
ಅಂತ ನಾನು ನಿನ ಗಂಡ ಕೇಳಬಾರದೇನೆ?
ಅಮ್ಮಾ ಅವಳ ಧಿಮಾಕು ನೋಡಿದೆಯಾ?

ದನಿಯೆತ್ತಿ ನಾನೂ
ಕೇಳಲೆ?
ಅಮ್ಮಾ ಅವನಿಗೆಷ್ಟು ಧಿಮಾಕು
ನೋಡಿದೆಯಾ?
ಯಾವತ್ತಾದರೂ ನಾನವನಿಗೆ ಹೊಡೆಯುತ್ತೇನೆಂದು
ಹೇಳುತ್ತೇನೆಯೇ?

(ಅಮ್ಮಾ ಅವಳ ಧಿಮಾಕು ನೋಡಿದೆಯಾ? – ತೋಡಿರಾಗ – ಪುಟ ೪೮)

ಇಲ್ಲಿ ಮೊದಲ ಭಾಗ ಪ್ರಕಟಗೊಂಡಿದೆ. ಎರಡನೇ ಭಾಗ ಅವಳ ಮನಸ್ಸಿನಲ್ಲಿಯೇ ಉಳಿದುಬಿಟ್ಟಿದೆ. ಕುಟುಂಬದಲ್ಲಿ ಇದು ಸಂಭವಿಸಿದಂದು ಸಂಬಂಧವೊಂದು ವಿಘಟಿತವಾಗುವ ಆತಂಕ ಹೆಣ್ಣನ್ನು ಕಾಡಿದಷ್ಟು ಗಂಡನ್ನು ಕಾಡಲಾರದು. ಅನಿಸಿದ್ದೆಲ್ಲವನ್ನೂ ಹೇಳದ ಹೆಣ್ಣಿನ ಈ ಗುಣವೇ ಪಿತೃಪ್ರಧಾನ ಸಂಸ್ಕೃತಿಯ ಆಧಾರಗಳಲ್ಲೊಂದಾಗಿದೆ.

ಪರಸ್ಪರ ಪ್ರೇಮಿಸಿ ಮದುವೆಯಾದ ಅಂತರ್ಜಾತಿ ದಂಪತಿಗಳು ಸಮಾಜದಲ್ಲಿ ಎದುರಿಸಬೇಕಾದ ಸಂದಿಗ್ಧಗಳನ್ನು ಪೂರ್ಣಿಮಾರ 'ಹೀಗೇಕೆ' ಕವನ ಸಂವಹನಿಸುತ್ತಿದೆ :

"ರೀ ನಾನು ಆ ಜಾತಿ, ನೀವ್ ಈ ಜಾತಿ
ನಮ್ಮ ಮಕ್ಕಳೂ
ಎಲ್ಲ ಮಕ್ಕಳಂತೆಯೇ?!" ಎಂದಳಾಕೆ,
..................................
"ಅಯ್ಯೋ ಹುಚ್ಚಿ, ಮತ-ಪಂಥದ ಮಾತೇಕೆ?
ನೀ ಹೆಣ್ಣು – ನಾ ಗಂಡು
ನಮ್ಮದು ಮಾನವ ಜಾತಿ" ಎಂದನಾತ

('ಹೀಗೇಕೆ' – ಕತ್ತಲ ಇಬ್ಬನಿ ಬಣ್ಣದ ಚಿತ್ತಾರ – ಪುಟ ೫೨)

ಇಲ್ಲಿ ಪರಸ್ಪರ ತಂದುಕೊಳ್ಳುವ ಈ ಸಮಾಧಾನ, ತಾಳುವ ನಿರ್ಧಾರ ಬದುಕನ್ನು ಮುನ್ನಡೆಸುವ ಮೂಲ ಚೈತನ್ಯವಾದರೂ ಕೂಡ ಸಮಾಜದಲ್ಲಿ ಅದು ಪಡೆದುಕೊಳ್ಳುವ ತಿರುವುಗಳನ್ನು ಕವಿತೆ ಮುಂದುವರಿಸುತ್ತದೆ. ಗಂಡಿಗಿಲ್ಲದ ಆತಂಕ ಹೆಣ್ಣಿನಲ್ಲಿಯೇ ಹೆಚ್ಚಾಗಿರುವ ಸಾಮಾಜಿಕ ಸತ್ಯವನ್ನೂ ಕೂಡ ಈ ಕವನ ಧ್ವನಿಸುತ್ತಿದೆ.

**ಇ. ಪ್ರಕೃತಿಯೊಂದಿಗೆ ಸಂವಾದ**

ಕನ್ನಡ ಕಾವ್ಯ ಪರಂಪರೆಯಲ್ಲಿ ಸೂರ್ಯ, ಚಂದ್ರ, ಭೂಮಿ, ಆಕಾಶ, ನದಿ, ಪರ್ವತ, ಪಕ್ಷಿಗಳು ಹೀಗೆ ಪ್ರಕೃತಿಯ ಚೈತನ್ಯಗಳೊಂದಿಗೆ ಒಂದಲ್ಲಾ ಒಂದು ಬಗೆಯಲ್ಲಿ ಕವಿಗಳು ನಂಟು ಹೊಂದಿರುವುದು ಕಂಡುಬರುತ್ತದೆ. ಆಧುನಿಕ ಮಹಿಳಾಕಾವ್ಯದಲ್ಲೂ ಅದು ಮುಂದುವರಿದಿದೆ. ಕೆಲವೊಮ್ಮೆ ಅದು ಸಂವಾದ ರೂಪ ಪಡೆದಿದೆ. ತುಂಬ ಸಲ ಇದು ಏಕಮುಖಿ ಸಂವಾದವಾಗಿರುತ್ತದೆ. ಇಲ್ಲಿ ಕವಿಯ ಮುಗ್ಧತೆ, ಕುತೂಹಲಗಳೆರಡೂ ಪ್ರಕಟಗೊಳ್ಳುತ್ತದೆ.

ಕೋಗಿಲೆ ಕೋಗಿಲೆ
ಮತ್ತೆ ನನ್ನ ಕರೆಯಬೇಡವೇ
ಹೊಸಿಲ ದಾಟಿ ಪರದೆ ಸರಿಸಿ
ಇದೀಗ ಹೊಕ್ಕಿದ್ದೇನೆ ಮನೆ
ಮತ್ತೆ ಮತ್ತೆ ಹೀಗೆ ನನ್ನ ಕೂಗಬೇಡವೇ

(ಕೊಲ್ಲುವ ಹಾಡು – ಪುಸ್ತಕ ಮತ್ತು ನವಿಲುಗರಿ – ಪುಟ ೪೦)

ಈ ಕೋಗಿಲೆ ಮರದ ಮೇಲೆ ಕುಳಿತು ತನ್ನ ಪಾಡಿಗೆ ತಾನು ಕೂಗಿಕೊಳ್ಳುವ ಕೋಗಿಲೆ ಮಾತ್ರವಾಗಿರದೆ ಹೊರಗಿನ ಆವರಣಕ್ಕೆ 'ಹುಡುಗಿ'ಯನ್ನು ಕರೆಯುವ ಯಾವುದೋ ಅಯಾಚಿತ ಕರೆಯೂ ಆಗಿರಬಹುದು. ಹೀಗೆ ಕೋಗಿಲೆಯೆಂಬ ರೂಪಕ ಇನ್ನೇನನ್ನೊ ಪ್ರತಿನಿಧಿಸುವ ಈ ಕಾವ್ಯತಂತ್ರ ಸಂವಹನದ ದೃಷ್ಟಿಯಿಂದ ಭಿನ್ನವಾಗಿರುವ ಪ್ರಯತ್ನದಂತೆಯೇ ಕಾಣಿಸುತ್ತದೆ.

ಪ್ರಕೃತಿಯ ಎರಡು ಅಂಶಗಳೇ ಪರಸ್ಪರ ಸಂವಾದಿಸಿದಂತೆ ಒಂದು ಕಲ್ಪನೆ ರೂಪ ಹಾಸನ ಅವರ 'ನಟ್ಟಿರುಳಿನಲ್ಲೊಂದು ಸಂವಾದ'ದಲ್ಲಿ ಮೂಡಿಬಂದಿದೆ. ಇಲ್ಲಿ ಬೆಳಕು ಮತ್ತು ಕತ್ತಲೆಯ ನಡುವೆ ಏರ್ಪಟ್ಟಿರುವ ಸಂವಾದ ಮನಸ್ಸಿನ ಚಿಂತನೆಯನ್ನು ಮುಖಾಮುಖಿಗೊಳಿಸುತ್ತಿದೆ. ಒಂದು ಧನಾತ್ಮಕ ಧೋರಣೆಯಾದರೆ, ಇನ್ನೊಂದು ಎದುರಾಗುವ ಅಡ್ಡಿ ಆತಂಕಗಳ ಕುರಿತು ಇರುವ ಎಚ್ಚರದ ಭಾವನೆ. ಕೊನೆಯಲ್ಲಿ ಬೆಳಕು ಪ್ರತಿಮಿಸುವ ಧನಾತ್ಮಕತೆಯೇ ಮೇಲುಗೈ ಸಾಧಿಸುವ ಮೂಲಕ ನಿರೂಪಕಿಯ ಆಶಯ ಕೂಡಾ ಸಾಕಾರವಾಗುತ್ತದೆ.

**ಬೆಳಕು :** **ಬೇಡವಾದರೆ । ಇಲ್ಲ । ಇಲ್ಲಿ ಏನೂ ಆಗಿಯೇ ಇಲ್ಲ ।**
**ಆಗಿದ್ದು ಆಟವಷ್ಟೇ । ಲೆಕ್ಕವಲ್ಲ ।.................**
**..............ಎನ್ನುತ್ತಾ ಯಾವುದಕ್ಕೂ ಬದ್ಧವಾಗದೇ**
**ಎಲ್ಲಾ ಕೊಡವಿ । ಎದ್ದು ಹೋಗಿಬಿಡಬಹುದು**

**ಬೆಳಕು :** **ಬಿಡು ಮನಸು ಮಾಡಿದರೆ**
**ಸಮುದ್ರಗಳನ್ನೇ ದಾಟಿ ಬಿಡಬಹುದು**

**ಕತ್ತಲು :** **ಹೌದು ಆದರೆ ಎಲ್ಲಕ್ಕೂ ಮೊದಲು**
**ದಾಟಬೇಕು ಹೊಸಿಲು !**

**ಕತ್ತಲು :** **ಹೊಸಿಲು ದಾಟಿದವರಿಗೆಲ್ಲ । ಒಂದೋ ಪ್ರಪಾತ ।**
**ಇಲ್ಲವೆ ಆಕಾಶ । ಬೇರೆಲ್ಲಿದೆ ಅವಕಾಶ?**

**ಬೆಳಕು:** **ಅಳತೆಗಾಗಿಯೇ । ಬದುಕಲಾಗುವುದಿಲ್ಲ । ಅತೀತರೆಲ್ಲ ಅಳತೆಗೆ ಸಿಕ್ಕುವುದಿಲ್ಲ**
**ಅಳತೆಗಳ ಮಿತಿಗೆ ಬದ್ಧವರು । ಬಿಡು ಅತೀತರಾಗುವುದಿಲ್ಲ!**
**(ನಟ್ಟಿರುಳಿನಲ್ಲೊಂದು ಸಂವಾದ – ಬಾಗಿಲಾಚೆಯ ಮೌನ – ಪುಟ ೧)**

### ೬.೩. ಕಥನ ಮಾದರಿ

ಬಹಳ ಬೇಗನೆ ಸಹೃದಯರನ್ನು ಆಕರ್ಷಿಸಬಲ್ಲ ಹಾಗೆಯೇ ಬಹಳ ಸಮಯ ನೆನಪಿನಲ್ಲಿ ಉಳಿಯುವ ಸಂವಹನ ಮಾದರಿಯಿದು. ಕಥೆಯನ್ನು ಇಷ್ಟಪಡದ ಯಾವ ಜೀವವೂ ಬಹುಶಃ ಅಪರೂಪ. ಪರಂಪರೆಯ ಆಳ–ವಿಸ್ತಾರ, ಪ್ರೀತಿ–ಪ್ರಣಯಗಳ ಏಳು–ಬೀಳುಗಳು, 'ಹೆಣ್ಣು' ಪ್ರೀತಿಯ ಅಪಾರ ಸಾಧ್ಯತೆಗಳನ್ನು ಹೇಳುವ ಸಂದರ್ಭದಲ್ಲಿ ಈ ಕ್ರಮ ಬಳಕೆಯಾಗಿದ್ದನ್ನು ಗುರುತಿಸಬಹುದಾಗಿದೆ.

**ಆಗೋeeeee ಅಲ್ಲಿ**
**ಆಳ ಪಾತಾಳದಾಳದೊಳಗೊಂದು । ಜೀವ ಸಂಪಿಗೆ ಮರ**
**(ಜೀವ ಸಂಪಿಗೆ – ಪುಟ ೯)**

ಎಂದು ಪ್ರಾರಂಭವಾಗುವುದು ಸರಸ್ವತಿಯವರ ಕವನ ಸಂಪಿಗೆ ಮರದ ಪ್ರತಿಮೆಯ ಮೂಲಕ ಪರಂಪರೆಯ ಆಳವೊಂದನ್ನು ಚಿತ್ರಿಸುತ್ತಾ ಹೋಗಿದ್ದಾರೆ. ಮೊದಲ ಸಾಲಿನಲ್ಲಿ ಬಂದಿರುವ ದೀರ್ಘಸ್ವರವೇ... ಕವನ ಮುಂದೆ ಪ್ರಸ್ತುತಪಡಿಸುತ್ತಿರುವ ವಿಷಯದತ್ತ ತದೇಕ ಚಿತ್ತದಿಂದ ಗಮನಹರಿಸುವಂತೆ ಮಾಡುತ್ತದೆ.

> **ಒಂದು ಒಳ್ಳೆಯ ಊರು । ಅಂದ ಮೇಲೆ ಎಲ್ಲರೂ ಸಭ್ಯರು ಸಾಚಾಗಳು**
> **ಎಲ್ಲಾ ನಾರಿಯರು ಗರತಿಯರು । ಎಲ್ಲಾ ಸರಿಯಾಗಿತ್ತು?**
> ..........................................................................
> **ಅಲ್ಲಿಗೆ ಅಚಾನಕವಾಗಿ ಬಂದ ಸುಬ್ಬಿಯೊಬ್ಬಳು । ದೃಷ್ಟಿ ಬೊಟ್ಟು**
> **(ಒಂದು ಊರಿನ ಕಥೆ – ಭಾವ ಸಿಂಚನ – ಪುಟ ೫೮)**

ಹೀಗೆ ಅಚಾನಕ್ಕಾಗಿ ಏಕಾಂಗಿಯಾದ ಹೆಣ್ಣೊಬ್ಬಳ ಪ್ರವೇಶ ಆ ಊರಿನ ಗಂಡಸರು ಹೆಂಗಸರು ಮಕ್ಕಳು, ಪ್ರಾಣಿಗಳ ಸಹಿತವಾಗಿ ಉಂಟುಮಾಡುವ ಮಾನಸಿಕ ತಲ್ಲಣಗಳನ್ನು ಕವನ ಚಿತ್ರಿಸುತ್ತದೆ. ಎಲ್ಲವೂ ಸರಿಯಾಗಿದೆ ಎಂದುಕೊಂಡು ಭ್ರಮಿಸುವ ಯಾವುದೇ ವ್ಯವಸ್ಥೆಯೊಳಗೆ ಹೊಸತನವೊಂದು ಪ್ರವೇಶಿಸಿದಾಗ ಉಂಟಾಗಬಹುದಾದ ಎಲ್ಲ ಬಗೆಯ ಸಾಧ್ಯತೆಗಳನ್ನೂ ಕವನ ಸೂಚಿಸುತ್ತದೆ. ಇದೇ ರೀತಿ ಹೊಸ ಚಿಂತನೆಯೊಂದರ ಪ್ರವೇಶ ಎದುರಿಸುವ ಅಡ್ಡಿಗಳು, ಉಂಟುಮಾಡುವ ಪರಿಣಾಮಗಳನ್ನು ರೂಪ ಹಾಸನ ಅವರ 'ಪ್ರತಿಫಲನ' ಕವನ ನಿವೇದಿಸಲು ಕಥನ ಕ್ರಮವನ್ನು ಅನುಸರಿಸಿದೆ.

> **ಮಾಮೂಲಿನಂತೆ ಒಂದೂರು । ಅಂತೆಯೇ ರಾಜರ ತಲೆಮಾರು**
> **ದಟ್ಟ ನೀಳ ಕೂದಲಿನ ರಾಜಕುಮಾರಿ । ಹೆಸರು ನೆನಪಿಲ್ಲ ಸಹಜ ಸುಂದರಿ**
> **ಇಂತಿರಲು ಮಾಟಗಾರನೊಬ್ಬ ಊರ ತುಂಬೆಲ್ಲಾ । ಹುಸಿಕನ್ನಡಿ ನೆಟ್ಟು ಬಿಟ್ಟನಲ್ಲಾ**
> **ಕಪಟ ಕಾಣದೂರಿನಲ್ಲಿ । ಮಾಟದಾಟ ಕಂಡಿತು ಕನ್ನಡಿಯಲಿ**
> **(ಪ್ರತಿಫಲನ – ಕಡಲಿಗೆಷ್ಟೊಂದು ಬಾಗಿಲು – ಪುಟ ೫೩)**

ಹೀಗೆ ಏಕಾಏಕಿ ಪ್ರವೇಶಿಸಿದ ಮಾಟದಾಟ ಕುತಂತ್ರವನ್ನು ರಾಜಕುಮಾರಿ ಭೇದಿಸುತ್ತಾಳೆ. ಮಾಯಗಾರನನ್ನೂ, ಕುಟುಂಬವನ್ನೂ ಎದುರುಹಾಕಿಕೊಳ್ಳುತ್ತಾಳೆ. ಇದು ಹೊಸ ನಿರ್ಧಾರ ತೆಗೆದುಕೊಳ್ಳುವ ಹೆಣ್ಣು ತನ್ನ ಪರಂಪರೆಯ ವಿರೋಧ, ಹೊಸತನದ ಆತುರದಲ್ಲಿರುವ ಅಪಾಯಗಳೆರಡರ ಬಗ್ಗೆಯೂ ವಹಿಸಬೇಕಾದ ಎಚ್ಚರವನ್ನೂ ಕಥೆ ಸಂದೇಶಿಸುತ್ತಿದೆ.

### ೬.೪. ಪ್ರಶ್ನೆ ಮಾದರಿ

ಪ್ರತಿಯೊಂದು ಪ್ರಶ್ನೆಯೂ ಆಂತರ್ಯದಲ್ಲೊಂದು ಉತ್ತರವನ್ನು ಅಡಗಿಸಿಕೊಂಡಿರುತ್ತದೆ ಎಂಬುದೊಂದು ನಂಬಿಕೆ. ಕೆಲವು ಪ್ರಶ್ನೆಗೆ ಅನೇಕ ಉತ್ತರವಿರಬಹುದು ಅಥವಾ ಉತ್ತರವೇ

ಸಿಗದೆಯೂ ಹೋಗಬಹುದು. ಇದು ಆಯಾ ಪ್ರಶ್ನೆಯು ಅಡಗಿಸಿಕೊಂಡಿರುವ ವಿಷಯ ಗಾಂಭೀರ್ಯವನ್ನು ಆಧರಿಸಿರುತ್ತದೆ. ಕುತೂಹಲಕ್ಕಾಗಿ, ಮುಗ್ಧತೆಯಿಂದಾಗಿ, ಸವಾಲಾಗಿ, ಚಿಂತನೆಯಾಗಿ ಹೀಗೆ ಬಗೆಬಗೆಯಲ್ಲಿ ಪ್ರಶ್ನೆ ಪ್ರಕಟವಾಗಬಹುದು. ಸವಿತಾ ನಾಗಭೂಷಣ ಅವರಲ್ಲಿ ಅದು ಪ್ರಕೃತಿ ವಿಸ್ಮಯಗಳನ್ನು ಹೆಕ್ಕಿ ತೆಗೆಯುವಾಗಲೆಲ್ಲ ಬಳಕೆಯಾಗಿದೆ.

**ಏಯ್ ! ಯಾರು ನೀನು? ನಾನು ಹೂಗಿಡಗಳ ಮಿತ್ರ**

**ಏಯ್ ! ಯಾರು ನೀನು? ನಾನು ನದಿಯ ಪಾತ್ರ**

**(ಯಾರು ನೀನು? – ಆಕಾಶಮಲ್ಲಿಗೆ– ಪುಟ ೧೪೧)**

ಹೀಗೆ ಪ್ರಕೃತಿಯೊಂದಿಗಿನ ಸಂವಾದ ಪ್ರಶ್ನೆಯಾಗಿ ಉತ್ತರವಾಗಿ ಮುಂದುವರಿಯುತ್ತದೆ. ಅವರ ಅನೇಕ ಕವನಗಳ ಶೀರ್ಷಿಕೆಗಳೂ ಪ್ರಶ್ನೆ ರೂಪದಲ್ಲಿಯೇ ಇವೆ ಯಾಕೆ? ನೀವೇಕೆ ಬೇಕು? ಯಾರು ನೀನು? ಇನ್ನೇನು ಬೇಕು?.... ಎಂದು ಮುಂತಾಗಿವೆ.

ಆದರ್ಶಗಳನ್ನು ಪ್ರಶ್ನಿಸುವಾಗಲೂ ಪ್ರಶ್ನೆ ಮಾದರಿಯೇ ಬಳಕೆಯಾಗುತ್ತದೆ. ಗೀತಾ ವಸಂತ ಅವರ "ಆತ್ಮಸಂಗಾತಕ್ಕೆ ನೀನುಂಟೇ" ಎಂಬ ಕವನದಲ್ಲಿ ಪರಂಪರೆಯ ಆದರ್ಶವನ್ನೇ ಕವಿ ಪ್ರಶ್ನಿಸುತ್ತಿದ್ದಾರೆ.

**ಎನ್ನ ಕಾಲೇ ಕಂಬ । ದೇಹವೆ ದೇಗುಲ । ಅಣ್ಣಾ, ನೀನೆಂದದ್ದು**

**ದೇಗುಲದ ಹಂಗು ತೊರೆಯಲಿಕ್ಕಾ**

**ಒಳಗಿರುವ ಬಯಲ ತೆರೆಯಲಿಕ್ಕಾ?**

**('ಆತ್ಮಸಂಗಾತಕ್ಕೆ ನೀನುಂಟೆ!' – ಪರಿಮಳದ ಬೀಜ – ಪುಟ ೯೨)**

ದೇಹವೆಂಬ ದೇಗುಲದಲ್ಲಿರುವ ಮನಸ್ಸು ಜಂಗಮಗೊಳ್ಳುವುದು ಬೇಡವೇ? ಅದು ಕೇವಲ ನಮ್ಮ ಧಾರ್ಮಿಕ ಆಚರಣೆಗಳಿಗೆ ಮಾತ್ರ ಸೀಮಿತವಾದ ಚಿಂತನೆಯೋ, ಒಟ್ಟಾರೆ ಸಮುದಾಯದ ಹೆಣ್ಣನ್ನೂ ಒಳಗೊಂಡಂತಿರುವ ವಿಶಾಲವಾದ ಚಿಂತನೆಯೋ ಅದಕ್ಕೆ ಅಷ್ಟೊಂದು ವೈಶಾಲ್ಯತೆ ಇದ್ದಿದ್ದರೆ ಪುರುಷನಿಗಿಲ್ಲದ ನಿರ್ಬಂಧಗಳು ಮಹಿಳೆಗೆ ಮಾತ್ರ ಉಳಿದುಕೊಂಡದ್ದಾದರೂ ಏಕೆ? ಹೀಗೆ ಪ್ರಶ್ನೆಗಳು ಮುಂದುವರಿಯುತ್ತವೆ.

**ಕನಸುಗಳನ್ನೆಂದಾದರೂ ಬಿತ್ತಿದ್ದೀಯಾ?**

**ಬಿತ್ತಿದ್ದು ಬೆಳೆದಿದ್ದೀಯ? ಬೆಳೆದದ್ದು ಉಂಡಿದ್ದೀಯಾ?**

**ಹೌದಾ?**

**ಹಾಗಾದರೆ ಕಕ್ಕುತ್ತಾ । ಕುಳಿತಿದ್ದಿ ಅಲ್ಲವೆ?**

**(ಪ್ರಶ್ನೆಗಳು – ಕೋಗಿಲೆಗೆ ಕಲಿಸಲಾರೆ – ಪುಟ ೧೭)**

ಕನಸು ಕಂಡು ಸಾಕಾರಗೊಳಿಸಿಕೊಂಡ ಬದುಕಿನಲ್ಲಿ ಕಂಡದ್ದು ಹೋರಾಟದ ಕನಸಿನ ಫಲ. ಹೋರಾಟ; ಹೊಸತನದ ಕನಸಿನ ಫಲ ಅದು ಉಂಟು ಮಾಡುವ ಅನೇಕ ಬದಲಾವಣೆಗಳೇ ಆಗಿರುತ್ತದೆ ಎಂಬುದನ್ನು ಬಹಳ ಸೂಕ್ಷ್ಮವಾಗಿ ಕವಿ ನಿರೂಪಿಸಿದ್ದರೂ ಇದರ ಅರ್ಥ ಸಾಧ್ಯತೆಗಳು ಅಪಾರವಾಗಿವೆ.

**೬.೫. ಹೇಳಿಕೆಯ ಮಾದರಿ**

ಆಧುನಿಕ ಕನ್ನಡಕಾವ್ಯದಲ್ಲಿ ಹೇಳಿಕೆಗಳೇ ಪ್ರಧಾನವಾಗಿರುವಂತೆ ಮಹಿಳಾಕಾವ್ಯದಲ್ಲಿಯೂ ಇದರ ಪ್ರಭಾವವನ್ನು ಕಾಣಬಹುದು. ಇಲ್ಲಿ ಹೇಳಿಕೆ ಎಂದರೆ ವ್ಯಾಖ್ಯಾನ ರೂಪದಲ್ಲಿರುವುದು ಎಂದು ಮಾತ್ರ ಅರ್ಥವಲ್ಲ. ಒಟ್ಟಾರೆ ಓದುಗ ಸಮುದಾಯವನ್ನೇ ಕೇಂದ್ರವಾಗಿಟ್ಟುಕೊಂಡು ನಿರೂಪಿಸಿಕೊಂಡು ಹೋಗುವಂತಹ ವಿಧಾನ. ಸರಳ ರೂಪದಿಂದ ಸಂಕೀರ್ಣ ರೂಪದವರೆಗೆ ಈ ವಿಧಾನ ಹರಹಿಕೊಂಡಿದೆ. ಕೆಲವೊಮ್ಮೆ ಪ್ರಧಾನ ಹೇಳಿಕೆಯೊಂದನ್ನು ಉದ್ಧರಿಸಿ ಕೆಳಗೆ ಕವನ ಪ್ರಕಟಗೊಂಡಿರುವುದೂ ಉಂಟು. ಇದು ಓದುಗರ ಗ್ರಹಿಕೆಗೆ ಬೇಗ ದಕ್ಕಲಿ ಎಂಬ ಉದ್ದೇಶವನ್ನು ಹೊಂದಿರಬಹುದು. 'ನಾನು' ಎಂಬ ಉತ್ತಮ ಪುರುಷದೊಂದಿಗೆ ಕವನ ತೆರೆದುಕೊಳ್ಳುತ್ತಾ ಹೋಗಬಹುದು. ಇಲ್ಲವೇ ವಿವರಣೆಗಳ ಮೂಲಕವೇ ವಸ್ತುಸ್ಥಿತಿಯನ್ನು ಕಟ್ಟಿಕೊಟ್ಟಿರಬಹುದು. ಹೀಗೆ ಅಪಾರ ಸಾಧ್ಯತೆಗಳೊಂದಿಗೆ ಈ ಕ್ರಮ ಬಳಕೆಯಾಗಿರುತ್ತದೆ.

**ಟಿಪ್ಪಣಿಗಳು**

೧. ಪ್ರೊ. ಎಲ್.ಎಸ್. ಶೇಷಗಿರಿರಾವ್, **ಸುಭಾಷ್ ನಿಘಂಟು,** ಪುಟ ೧೮, ೪೪೮.

೨. ನಾಗಭೂಷಣಸ್ವಾಮಿ ಓ.ಎಲ್., **ವಿಮರ್ಶೆಯ ಪರಿಭಾಷೆ,** ಪುಟ ೨೭೫.

೩. ಬಿ.ಎನ್. ಸುಮಿತ್ರಾಬಾಯಿ, **ಮಹಿಳಾ ಕಾವ್ಯದೊಳಗಿನ ಸಂವಾದದ ನೆಲೆಗಳು,** ಲೇಖನ ಪ್ರಜಾವಾಣಿ ೬-೧-೨೦೧೩.



## ಅಧ್ಯಾಯ : ಏಳು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಶಿಲ್ಪದ ನೆಲೆಯಲ್ಲಿ

ಅಧ್ಯಾಯ : ಏಳು

# ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸ : ಶಿಲ್ಪದ ನೆಲೆಯಲ್ಲಿ

ಸಾಹಿತ್ಯ ಪ್ರಕಟಗೊಳ್ಳುವ ರೂಪಗಳಲ್ಲಿ ಕಾವ್ಯ ಕೂಡ ಒಂದು ಬಗೆ. ಈ ಕಾವ್ಯ ಕೂಡ ಕಾಲಕಾಲಕ್ಕೆ ತನ್ನ ರೂಪದಲ್ಲಿ ಬದಲಾಗುತ್ತಾ ಬಂದಿದೆ. ಇಲ್ಲಿ 'ರೂಪ' ಎಂದರೆ ಸೀಮಿತಾರ್ಥದಲ್ಲಿ ಕಾವ್ಯದ ಬಾಹ್ಯರೂಪ ಎಂದರ್ಥ. ಚಂಪೂ, ಷಟ್ಪದಿ, ರಗಳೆ, ಚೌಪದಿ, ತ್ರಿಪದಿ.... ಹೀಗೆ ಅನೇಕ ರೂಪಗಳಲ್ಲಿ ಪ್ರಾಚೀನ ಕನ್ನಡಕಾವ್ಯ ಪ್ರಕಟಗೊಂಡಿದೆ. ಇಪ್ಪತ್ತನೇ ಶತಮಾನದ ವೇಳೆಗೆ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವದಿಂದ ಛಂದೋಬದ್ಧವಾದ ಶೈಲಿಗಳು ಮರೆಯಾಗಿ ಕವಿತೆಯ ಬಂಧದಲ್ಲಿ ಸಡಿಲತೆ ಕಾಣಿಸಿಕೊಂಡಿತು. ಇಲ್ಲಿ ಬಂಧದಲ್ಲಿ ಸಡಿಲತೆಯೆಂದರೆ ರಾಚನಿಕ ದೃಷ್ಟಿಯಿಂದ ಮಾತ್ರ, ವಿಷಯ ಹಾಗೂ ಪರಿಣಾಮದ ದೃಷ್ಟಿಯಿಂದ ತೀಕ್ಷ್ಣತೆಯೂ ಹೆಚ್ಚಾಯಿತು. ನವ್ಯ ಸಾಹಿತ್ಯ ಕಾಲಘಟ್ಟದಲ್ಲಿ ಸಾಲುಗಳ ಕಟ್ಟುಪಾಡು ಕೂಡ ಇಲ್ಲವಾಗಿ ನಾನಾ ಬಗೆಯ ರೂಪಗಳಲ್ಲಿ ಕವಿತೆಗಳು ರಚನೆಯಾಗಿವೆ.

ವಿಮರ್ಶೆಯ ಪರಿಭಾಷೆಯಲ್ಲಿ ಕಾವ್ಯಶಿಲ್ಪವನ್ನು ವಿವಿಧ ವ್ಯಾಖ್ಯಾನಗಳೆಡೆಯಲ್ಲಿ ಉಲ್ಲೇಖಿಸಲಾಗಿದೆ. "ಕನ್ನಡದಲ್ಲಿ ಮತ್ತು ಇಂಗ್ಲಿಷಿನಲ್ಲಿ ಕೂಡ ರೂಪ, ಬಂಧ, ಶಿಲ್ಪ, ನೆಯ್ಗೆ; Form, Structure, Texture ಪದಗಳು ಬೇರೆ ಬೇರೆ ಅರ್ಥಗಳಲ್ಲಿ ಕೆಲವು ಬಾರಿ ಸಮಾನಾರ್ಥಕಗಳಾಗಿ ಬಳಕೆಯಾಗುತ್ತಿವೆ....'Form' ಅಥವಾ 'ರೂಪ' ಶಾಬ್ದಿಕ ರಚನೆಯ ಎಲ್ಲ ಅಂಶಗಳನ್ನೂ ಒಳಗೊಳ್ಳುತ್ತದೆ. ಅದು ವ್ಯವಸ್ಥೆಯ ಒಂದು ತತ್ವ, ಲಯ, ಛಂದಸ್ಸು, ಪ್ರಾಸ, ಶಿಲ್ಪ, ಸಂಬದ್ಧತೆ, ಒತ್ತು, ಭಾಷೆ, ಪ್ರತಿಮೆಗಳು ಇವೆಲ್ಲ ರೂಪದ ಅಂಗಗಳು."[೧]

ಶಿಲ್ಪವನ್ನು ಕುರಿತು ಎಲ್ಲ ಬಗೆಯ ವಿಮರ್ಶಾ ತತ್ವಗಳೂ ಚಿಂತನೆ ನಡೆಸುತ್ತವೆ. "ಕೃತಿಯೊಂದರ ಐಕ್ಯತೆ(Unity)ಯ ಬೆಳವಣಿಗೆ" ಎಂದು ಶಿಲ್ಪವನ್ನು ವಿವರಿಸಬಹುದು... ಶಿಲ್ಪವನ್ನು ಕುರಿತು ಚಿಂತಿಸುವಾಗ ಒಂದು ಸರಳವಾದ ಸತ್ಯವನ್ನು ನೆನಪಿನಲ್ಲಿಡುವುದು ಅಗತ್ಯ. ಯಾವುದೇ ಸಾಹಿತ್ಯ ಕೃತಿ ಒಂದು ಶಾಬ್ದಿಕ ಪ್ರಪಂಚ. ಒಂದೊಂದು ಕೃತಿಯೂ ಭಿನ್ನವಾದ, ತಾನೇ ಸೃಷ್ಟಿಸಿಕೊಂಡ ಅಂದರೆ ಲೇಖಕನು ಜವಾಬ್ದಾರನಾಗಿರುವ ತರ್ಕ ಇರುತ್ತದೆ.... ವಿಶಾಲವಾದ ಅರ್ಥದಲ್ಲಿ

ಭಾಷೆಯ ಶಿಲ್ಪ; ವಿಶಿಷ್ಟ ಸಮಾಜವೊಂದರ ಪ್ರಜ್ಞೆಯ ಅಥವಾ ಅಭಿವ್ಯಕ್ತಿ ರೂಪಗಳ ಶಿಲ್ಪ ಮತ್ತು ಮಾನವ ಮನಸ್ಸಿನ ಶಿಲ್ಪಗಳನ್ನೂ ಗಮನಿಸಬೇಕಾಗುತ್ತದೆ.[೨]

Texture ತೀರ ನಿರ್ದಿಷ್ಟವಾಗಿ ಭಾಷೆಯನ್ನು ಕುರಿತದ್ದು. ಕವನವನ್ನೂ, ಕೃತಿಯನ್ನೂ "ಯಾವುದೇ ಬಿಂದುವಿನಲ್ಲಿ ಎತ್ತಿಕೊಂಡರೂ ಕಾಣಸಿಗುವ ಅಭಿವ್ಯಕ್ತಿಯ ಗುಣ ವಿಶೇಷ. ನಿರ್ದೇಶಿತವಾದ ವಸ್ತುಗಳ ಸಂಪೂರ್ಣ ಗುಣವಿಶೇಷವನ್ನು ಮೂರ್ತಗೊಳಿಸಲು ಸಾಧ್ಯವಾಗುವಂತೆ ಎಲ್ಲಾ ವಿಧವಾದ ಸಮಂಜಸ ರೂಪಕ ವಿಧಾನಗಳಿಂದಲೂ ಇದು ಅಲಂಕೃತವಾಗಿರುತ್ತದೆ.[೩]

ಪ್ರಸ್ತುತ ಅಧ್ಯಯನದ ಸೀಮಿತ ವ್ಯಾಪ್ತಿಯಲ್ಲಿ ಮಹಿಳಾಕಾವ್ಯ ರಚನೆಯ ಬಹು ಸಾಮಾನ್ಯ ರೂಪಗಳನ್ನು ಕುರಿತ ಸ್ಥೂಲ ವಿಶ್ಲೇಷಣೆಯನ್ನು ಮಾತ್ರ ಮಾಡಲಾಗುತ್ತದೆ. ಅಧ್ಯಯನದ ಅನುಕೂಲಕ್ಕಾಗಿ ನಾಲ್ಕು ವಿಧಗಳಲ್ಲಿ ಗುರುತಿಸಿಕೊಳ್ಳಲಾಗಿದೆ. ಅವುಗಳೆಂದರೆ –

೧. ಸಾಮಾನ್ಯ ಗಾತ್ರದ ಕವಿತೆಗಳು

೨. ನೀಳ್ಗವಿತೆಗಳು

೩. ಚುಟುಕುಗಳು

೪. ದ್ವಿಪದಿಗಳು

**೬.೧. ಸಾಮಾನ್ಯ ಗಾತ್ರದ ಕವಿತೆಗಳು**

ಕವನದ ದೀರ್ಘತೆಯನ್ನು ಅನುಲಕ್ಷಿಸಿ ಈ ಉಪಶೀರ್ಷಿಕೆ ಇಟ್ಟುಕೊಳ್ಳಲಾಗಿದೆ. ಇಲ್ಲಿ 'ಸಾಮಾನ್ಯ ಗಾತ್ರ' ಎಂದರೆ ಬಹುಪಾಲು ಮಹಿಳಾಕವಿಗಳು ಅವರ ಬಹುಪಾಲು ಕವಿತೆಗಳನ್ನು ರಚಿಸಿರುವ ಒಂದು ಮಧ್ಯಮ ಗಾತ್ರ. ಹೆಚ್ಚೆಂದರೆ ಮೂರು ನಿಮಿಷದಲ್ಲಿ ಓದಿ ಮುಗಿಸಲು ಸಾಧ್ಯವಾಗುವ ಪದಪುಂಜಗಳಿಂದ ಕೂಡಿದ ಕವನಗಳು. ಇವುಗಳಲ್ಲಿ ಸಾಲುಗಳ ಮಿತಿಯಿಲ್ಲವಾದರೂ ಹದಿನೈದರಿಂದ ಮೂವತ್ತು ಸಾಲುಗಳಲ್ಲಿ ಮುಗಿಯುವ ರಚನೆಗಳು ಎಂದು ಗುರುತಿಸಬಹುದು. ಕೆಲವೊಮ್ಮೆ ಸಾಲುಗಳ ಕೊನೆಯಲ್ಲಿ ಲೇಖನ ಚಿಹ್ನೆಗಳಿದ್ದರೆ ಕೆಲವು ಪೂರ್ಣವಿರಾಮದೊಂದಿಗೆ ಮುಗಿಯುವಂತಹವು. ಪ್ರತಿ ಕೊನೆಯೇ, ವಾಕ್ಯದ ಕೊನೆಯಾಗಿರುವುದಿಲ್ಲ. ನಿಲುಗಡೆಗಳು ಓದುಗರ ಅರ್ಥಸಾಧ್ಯತೆಗಳಿಂದ ಉಂಟಾಗುತ್ತವೆ. ಕೆಲವು ಕವನಗಳ ಪ್ರಾರಂಭವೇ ಮುಂದಿನ ಬೆಳವಣಿಗೆಯನ್ನು ಸೂಚಿಸುವಂತಿದ್ದರೆ ಇನ್ನು ಕೆಲವು ನಿಧಾನಗತಿಯಲ್ಲಿ ಪ್ರಾರಂಭವಾಗಿ ದಿಢೀರನೆ ಮುಗಿಯುತ್ತವೆ.

**೬.೨. ನೀಳ್ಗವಿತೆಗಳು**

ಸಾಲುಗಳ ಪ್ರಮಾಣ ಓದಲು ಬೇಕಾದ ಸಮಯವನ್ನು ಆಧರಿಸಿ ಅಧ್ಯಯನದ ಅನುಕೂಲಕ್ಕಾಗಿ ಈ ವಿಧವನ್ನು ಹೆಸರಿಸಿಕೊಳ್ಳಲಾಗಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ದೀರ್ಘ ಕವಿತೆಗಳನ್ನು 'ಪ್ರಗಾಥ'ವೆಂದು ಗುರುತಿಸಲಾಗಿದೆ. ಯಾವುದಾದರೊಂದು ಸಂದರ್ಭ, ಘಟನೆಯನ್ನು ವಿವರಿಸುವ ಕಥನ ರೂಪದ ದೀರ್ಘ ನಿರೂಪಣೆಯ ಕವನಗಳವು. ಆಧುನಿಕ ಮಹಿಳಾ ಕಾವ್ಯದಲ್ಲಿ ಇಂತಹ

ಪ್ರಗಾಥಗಳಿಲ್ಲದಿದ್ದರೂ ವ್ಯಕ್ತಿಚರಿತ್ರೆ, ದೀರ್ಘವಾಗಿ ವಿವರಿಸುವ ಅವಶ್ಯಕತೆಯಿರುವ ವಿಷಯದ ಮೇಲಿನ ಕವನಗಳು ಹೆಚ್ಚು ದೀರ್ಘವಾಗಿವೆ. ನಿದರ್ಶನಕ್ಕಾಗಿ ಕೆಲವು ಕವನಗಳನ್ನು ಪರಿಶೀಲಿಸಲಾಗಿದೆ. ಮೊದಲಿಗೆ ವೈದೇಹಿಯವರ 'ಸ್ವಯಂವರ ಗೀತೆ'ಯ ರಚನೆಯನ್ನು ವಿಶ್ಲೇಷಿಸಲಾಗಿದೆ.

ಅಂದು
ಅಪೂರ್ವಕುಮಾರಿಯ ಸ್ವಯಂವರ
ಹೆಚ್ಚೇಕೆ ವಿವರ
ಸೀದಾ ಮುಹೂರ್ತಕ್ಕೆ ಬರುವ
ಒಣಸುರಗಿ ಹೂಮಾಲೆ ಹಿಡಿದು ಬಂದಳು ಕುವರಿ
ಜೊತೆಗೆ ಪರಿಚಯಕೆ ಪರಿಚಾರಿಕೆ
ಶ್ವೇತಾಂಬರ ಚಪ್ಪರ ಕೆಂಪು ನಿರಿಗೆಯಕಟ್ಟು
ಆಸನದಿ ಕೋಟೆ ಕೊತ್ತಲ ಕತ್ತು ಪಾಳೆಯರು

(ಸ್ವಯಂವರಗೀತೆ – ವೈದೇಹಿ ಆಯ್ದ ಕವನಗಳು – ಪುಟ ೪೮)

ಹೀಗೆ ಕವನ 'ಸ್ವಯಂವರ'ದಲ್ಲಿ ನಾಯಕಿಯ ಪ್ರವೇಶವನ್ನು ವಿವರಿಸುತ್ತಾ ಆರಂಭವಾಗುತ್ತದೆ. ಮುಂದೆ ಒಬ್ಬೊಬ್ಬರೇ ರಾಜಕುಮಾರರನ್ನು ಪರಿಚಯಿಸಿಕೊಳ್ಳುವ ನಾಟಕೀಯ ಪ್ರಸಂಗ ತೆರೆದು ಕೊಳ್ಳುತ್ತದೆ.

ಈತನೋಡೇ ದೇವಿ ವೀರ ಮಾರ್ತಾಂಡ
ಇಂದ್ರ ಚಂದ್ರರೂ ನಡುಗಿ ಇವನೆದುರು ಉದ್ದಂಡ
ಪರಿಚಾರಿಕೆ ವರನ ಶೌರ್ಯವನ್ನು ವರ್ಣಿಸಿದರೆ ವಧುವಿನ ಪ್ರತಿಕ್ರಿಯೆ
ರುಂಡ ಚೆಂಡಾಡುವ ಮಾಂಸಖಂಡಗಳೇ
ಬದುಕು ಹೋರಾಟದಲಿ ನೀವು ದಂಡ
ಎಂದು ಮಾನಸಿಕ ಬಲವಿಲ್ಲದ ದೇಹದಾರ್ಢ್ಯತೆಯನ್ನು ಅಲ್ಲಗಳೆಯುತ್ತಾಳೆ.

ಎರಡನೇ ವರ
ಇವನಿಂಥ ಮಹರಾಯ। ಚತುರ ಚೆನ್ನಿಗರಾಯ
ಎಂದಿಗೂ ಅಳಿಯದೇ। ಇರುವಂಥ ಪ್ರಾಯ!
ಪ್ರಾಯ ಕಾಯುವ ಭ್ರಾಂತ ಚೆಲುವಾ, ಇವ
ಕಣ್ಣಲ್ಲೇ ನೂರಾರು ಹುಡುಗಿಯರ ಕರೆವ

ದೇಹ ಸೌಂದರ್ಯವಿದ್ದ ಮಾತ್ರಕ್ಕೆ ಮನಸ್ಸಿನಲ್ಲಿರುವ ಹಪಹಪಿಕೆಗಳು ಸುಂದರವೆಂದು ಒಪ್ಪಿಕೊಳ್ಳುವುದಾದರೂ ಹೇಗೆ ಎಂಬ ತರ್ಕ ವಧುವಿನದು. ಹೀಗೆ ಸೌಂದರ್ಯ ಶೌರ್ಯಗಳೆಲ್ಲವನ್ನೂ ತಿರಸ್ಕರಿಸಿ ಕೊನೆಯಲ್ಲಿ:

**ತಾವು ತಾನೆನುವ ಈ ಖಾಲಿ ಮಕುಟಗಳು**
**ಬರಿ ತೋಳು ಬರಿ ಬೆರಳು। ಬರಿಗಣ್ಣು ಬರಿನಗೆ**
**ಸುಮ್ಮನೆ ಮೆರೆದಾಡುವಂಥ ಕರಿಮೀಸೆ**
**ಹಾಸಲೆಂತು ಸಖೀ ಇಂಥವರಿಗೆಲ್ಲ ಹಸೆ?**
**ಇವರೆಲ್ಲ ಬೇಟೆಯವರು-ನನ್ನ। ಚಿಗರೆಮಾಡುವರು**
**ಇವರೆಲ್ಲ ಕೋಟೆಯವರು-ನನ್ನ। ಪಹರೆ ಮಾಡುವರು**
**ಸ್ವಯಂವರಿಸುವ ಸ್ವಾತಂತ್ರ್ಯ। ನಾಟಕವೇ ಸಾಕಿನ್ನು**

ಹೀಗೆ ವರಗಳನ್ನು ತಿರಸ್ಕರಿಸುವ ವಧು ಆಧುನಿಕ ಮನಸ್ಥಿತಿಯವಳು. ಇವಳು 'ಮದುವೆಯೆಂಬುದು ಖಾಸಗಿ ಇಷ್ಟವೇ ಹೊರತು ಬಾಹ್ಯ ಪ್ರಚೋದನೆಗಳಿಂದ ತೃಪ್ತಿ ನೀಡಲಾರದು ಎಂಬ ಸತ್ಯವನ್ನು ಎತ್ತಿಹಿಡಿಯುತ್ತಿದ್ದಾಳೆ. ಹೀಗೆ ದಿಟ್ಟತನದ ಉತ್ತರವನ್ನು ನಮ್ಮ ಸಮಾಜ ಎಂದಾದರೂ ಸಹಜವಾಗಿ ಸ್ವೀಕರಿಸುವುದುಂಟೇ!? ಹೆಣ್ಣಿಗೆ ಆಯ್ಕೆಯ ಸ್ವಾತಂತ್ರ್ಯವಿಲ್ಲ ಎಂಬ ಸಾಂಪ್ರದಾಯಿಕ ನಂಬಿಕೆಗೆ ಅನುಗುಣವಾಗಿ ಈ ವಧುವು ಮುಂದೆ ಎದುರಿಸಿದ ಸಂಕಷ್ಟಗಳನ್ನು ಕವನ ಮುಂದುವರಿಸುತ್ತದೆ.

**ಕೆಂಡದಂತಾದರು ತಂದೆ ಮಹಾರಾಜರು**
**ಬಿಟ್ಟುಹೋದರು ಅವಳ ದಟ್ಟ ಕಾಡಿನಲಿ**
**"ಆರಿಸಿಕೋ ವರನನ್ನು ಇಲ್ಲಿ**
**ಕರಗಿ ಕೊಳೆ ಹಿಂಸಮೃಗ ಜಠರದಲ್ಲಿ"**
**.... ಕನಿಕರಿಸಿದಳು ಹುಡುಗಿ – "ತಂದೆ ಪಾಪ"**

ವ್ಯವಸ್ಥೆಯನ್ನು ಎದುರುಹಾಕಿಕೊಳ್ಳುವ ಪ್ರತಿ ಹೆಣ್ಣಿಗೂ ಆಗುವ ಪರಿಸ್ಥಿತಿಯೇ ಇವಳಿಗೂ ಆಗಿದೆ. ಆದರೆ ಈಕೆ ಕುಗ್ಗುವ ದೌರ್ಬಲ್ಯದ ಹುಡುಗಿಯಲ್ಲ. ತಂದೆಗೆ ಕನಿಕರಿಸುವ ಆಕೆಗೆ ಈ ವ್ಯವಸ್ಥೆಯ ಕುರಿತೇ ಕನಿಕರವಿದೆ. ಯಾವೆಲ್ಲ ನಿರ್ಬಂಧಗಳೂ ಮನಸ್ಸಿನ ದೃಢತೆಯನ್ನು ಕದಲಿಸಲಾರವು ಎನ್ನುವ ದಿಟ್ಟ ಉತ್ತರವನ್ನಾಕೆ ರವಾನಿಸುತ್ತಿದ್ದಾಳೆ. ಸ್ವಯಂತಪಸ್ಸಿನಿಂದಲೇ ವರನನ್ನು ಸಿದ್ಧಿಸಿಕೊಳ್ಳುವ ಆಕೆಗೆ ಒಂದು ಪರೀಕ್ಷೆ ಎದುರಾಗುತ್ತಿದೆ.

**ನೋಡು ನೋಡೇ...! । ನೋಡು ನೋಡೇ ಈತ-ಈತನೇ!**
**ಕರೆವುದಿವನನು ಲೋಕ ಅರ್ಧರಾತ್ರಿಯಲಿ ಯಾತ್ರಿ**
**ಇಂದವನ ಕೊನೆಯ ರಾತ್ರಿ। ವರಿಸವಿಯ ಜಾಣೆ ಆಗುವಿಯ**
**ಸಾವನೇ ಸಾಯಿಸುವ ಛಲದ ಸಾವಿತ್ರಿ?**

ಆಯುಷ್ಯ ತೀರಿದವನಾಗಿದ್ದರೂ ಮನಸ್ಸಿಗೆ ಒಲಿದವನನ್ನು ವರಿಸುವ ಆಕೆ ತನ್ನ ಹಠದಿಂದ ತನ್ನ ಆಯಸ್ಸನ್ನೇ ಒತ್ತೆಯಿಟ್ಟು ಬದುಕಿಸುತ್ತಾಳೆ. ಆಕೆಯ ಅಂತರ್ಧಾನನೊಂದಿಗೆ ಕವನ ಮುಗಿಯುತ್ತದೆ. ಪೌರಾಣಿಕ ಸನ್ನಿವೇಶ, ವರ್ತಮಾನದ ಸಂದೇಶಗಳೆರಡನ್ನೂ ಏಕಕಾಲದಲ್ಲಿ

ಸಾರುವ ಈ ಕವನ ಸಂಗಾತಿಯ ಆಯ್ಕೆ ಹೆಣ್ಣಿನ ಸ್ವ ಇಚ್ಛೆ ಎಂಬುದನ್ನು ಒಂದು ನಾಟಕೀಯ ಸನ್ನಿವೇಶದಲ್ಲಿ ವಿವರಿಸುವ ವೇಳೆಗೆ ದೀರ್ಘರಚನೆಯನ್ನು ಹೊಂದಿದೆ.

ಭಾರತೀಯ ಕೌಟುಂಬಿಕ ವಲಯದಲ್ಲಿ ತಂದೆ-ತಾಯಿಯರ ಮತ್ತು ಮಕ್ಕಳ ನಡುವೆ ಅನ್ಯೋನ್ಯವಾದ ಒಂದು ಸಂಬಂಧವಿರುತ್ತದೆ. 'ಜನಪದ' ಕಾವ್ಯವಂತೂ ಈ ಸಂಬಂಧಗಳ ವಿವಿಧ ಎಳೆಗಳನ್ನು ಭಾವನಾತ್ಮಕವಾಗಿ ಬಿಡಿಸಿಡುತ್ತದೆ. ಗಂಡನ ಮನೆ ಸೇರಿದ ಮಗಳನ್ನು ನೆನಪಿಸಿಕೊಂಡು ಕುಟುಂಬವೊಂದು ಅನುಭವಿಸುವ ಭಾವನಾತ್ಮಕವಾದ ಯಾತನೆ ವೈದೇಹಿಯವರಲ್ಲಿ 'ನೀಳ್ಗವಿತೆ'ಯಾಗಿ ರಚನೆಯಾಗಿದೆ.

**ಅಂದು ಮಗಳೆ ನೀನು ಹೊರಟುನಿಂತೆ**
**ಕಳಿಸಿಕೊಟ್ಟೆವು ನಾವು ಸಹಜವೆಂಬಂತೆ**
**(ಮಗಳಿಗೆ ಆಯ್ದ ಕವನಗಳು – ಪುಟ ೭೯)**

ಈಗಾಗಲೇ ಗಂಡನ ಮನೆಗೆ ಕಳುಹಿಸಿಕೊಟ್ಟ ಅಗಲುವಿಕೆ ಪ್ರಾರಂಭದಲ್ಲಿ ತಂದ ತಾಯಿಗೆ ಸಹಜವೇ ಅನ್ನಿಸಿದೆ. ಮಗಳು ಬಾಲ್ಯದಿಂದಲೂ ತಮ್ಮೊಂದಿಗೆ ಕಳೆದ ಕ್ಷಣಗಳನ್ನು ನಿರೂಪಕಿ ನೆನಪಿಸಿಕೊಳ್ಳುತ್ತಾ ಹೋಗುತ್ತಾಳೆ. ಒಟ್ಟು ಆರು ಭಾಗಗಳಲ್ಲಿ ಕವನ ವಿಸ್ತರಿಸಿಕೊಂಡಿದೆ. ಕವನವಿಡೀ ಹಳೆಯ ನೆನಪುಗಳ ಮಧ್ಯ ಮಧ್ಯೆಯೇ ಹೆತ್ತವರು ಈಗ ಅನುಭವಿಸುವ ಸಂಕಟವೂ ಪ್ರಸ್ತಾಪವಾಗುತ್ತದೆ.

**ಆ ಪುಟ್ಟ ಹುಡುಗಿ ಕರೆದ ಹಾಗಾಗುವುದು**
**ಏನೋ ಹೇಳಲು ಬಯಸಿ ಮನಸು ಏಳುವುದು**
**ಮತ್ತಲ್ಲೆ ಒರಗುವುದು ಕಣ್ಣ ಕೊನೆಯಲ್ಲಿ ಹನಿ**
**ಹರಳಾಗಿ ನಿಲ್ಲುವುದು ನುಡಿಯ ಬದಲು**

ಹೀಗೆ ಸಾವಿರ ಸಾವಿರ ನೆನಪುಗಳನ್ನು ಹೆಕ್ಕುವ ತಾಯಿ ಬೇರೆಯದೇ ರೀತಿಯ ಶಬರಿ ಎಂದುಕೊಳ್ಳುತ್ತಾಳೆ. ಆದರೆ ಅವರಿಗೆ ಈ ಬೇಸರದ ನಡುವೆಯೂ ಹೊಸ ಚೈತನ್ಯವೊಂದು ಕಾಣಿಸುತ್ತದೆ. ಅದು ಮೊಮ್ಮಗುವಿನ ಆಗಮನದ ನಿರೀಕ್ಷೆ. ಈ ತಲೆಮಾರುಗಳ ಮುಂದುವರಿಕೆಯ ನೆನಕೆಯೇ ಮಗಳ ಗೈರುಹಾಜರಿಯನ್ನು ಸಂತೈಸಿಕೊಳ್ಳುವ ಶಕ್ತಿಯಾಗುತ್ತದೆ. ಕವನದ ಕೊನೆಯ ಭಾಗಕ್ಕೆ ಮಾನಸಿಕವಾಗಿ ಇನ್ನಷ್ಟು ದೃಢತೆ ವ್ಯಕ್ತವಾಗುತ್ತದೆ. ಮಗಳು ಮನೆಬಿಡುವುದು ಅನಿವಾರ್ಯ ಎಂಬ ಕಾಲಿಕ ಸತ್ಯವನ್ನು ಮನಸ್ಸು ಅರ್ಥ ಮಾಡಿಕೊಳ್ಳುತ್ತದೆ. ಭಾರತೀಯ ಪರಂಪರೆಯ ಸಾಂಪ್ರದಾಯಿಕ ತಂದೆ ತಾಯಿಯರಂತೆಯೇ ಮಗಳ ಮುಂದಿನ ಬಾಳಿಗೆ ಶುಭ ಕೋರುತ್ತದೆ.

**ಹೋಗು ಮಗಳೆ ಹೋಗು**
**ನಿನ್ನ ನಾಳೆಗೆ ಹೋಗು**
**ಪುಣ್ಯ ಫಲಿಸಲಿ ನಿನ್ನ ಬಾಳಿನಲ್ಲಿ**

**ನಿನ್ನೆ ನಾವಾಗಿ ಬೇರಾಗುವವರು**
**ಒಳಿತು ಹಾರೈಸುತ್ತ ಹಿಂದೆ ಉಳಿಯುವೆವು**

ತಲೆಮಾರುಗಳ ಮುಂದುವರಿಕೆಗೆ ಇಂತಹ ತ್ಯಾಗ ಅವಶ್ಯಕ, ಅನಿವಾರ್ಯವೆಂಬ ಮನವರಿಕೆಯೊಂದಿಗೆ ಕವನ ಮುಗಿಯುತ್ತದೆ. ಇಲ್ಲಿ ನೆನಪುಗಳು ಬಹಳವೂ, ಆಳವೂ ಆಗಿರುವುದರಿಂದಲೇ ಕವನ ಕೂಡ ದೀರ್ಘವಾಗಿರಬಹುದೆಂಬುದನ್ನು ಊಹಿಸಬಹುದು.

ವೈದೇಹಿಯವರ 'ನೋಡಬಾರದು ಚೀಲದೊಳಗನು' ಎಂಬ ಕವಿತೆ ಕೂಡ ಒಂದು ನೀಳ್ಗವಿತೆಯಾಗಿದ್ದು ಗಂಡು-ಹೆಣ್ಣುಗಳ ನಡುವಿನ ಭಾವನಾತ್ಮಕ, ದೈನಂದಿನ ಭಿನ್ನತೆಗಳನ್ನೂ, ಹೆಣ್ಣಿನ ಖಾಸಗಿತನದ ಮಹತ್ವವನ್ನೂ, ಅದನ್ನೊಂದು ಹಕ್ಕೊತ್ತಾಯ ಎಂಬ ಧಾಟಿಯಲ್ಲಿ ಮಂಡಿಸುತ್ತದೆ. 'ನನ್ನ ಅಮ್ಮನ ಸೀರೆ' ಎಂಬ ಕವನದಲ್ಲಿ ಭಾರತೀಯ ಸಾಂಪ್ರದಾಯಿಕ ಹೆಣ್ಣಿನ ಚಿತ್ರಣವನ್ನೇ ದೀರ್ಘವಾಗಿ ನೀಡಿದ್ದಾರೆ. 'ಬೆರಣಿ ತಟ್ಟುವ ಹುಡುಗಿ ಮತ್ತು ಚಂದ್ರಾಮದೇವರು' ಎಂಬ ಕವನದಲ್ಲಿ ಸಾಮಾನ್ಯ ಹುಡುಗಿಯೂ ಕಾಣಬಹುದಾದ ಅಸಾಮಾನ್ಯ ಕನಸುಗಳನ್ನು ಬಿಚ್ಚಿಡುತ್ತಾರೆ.

'ಹೆಣ್ಣು' ಸಾಗಬೇಕಾದ ಬದುಕಿನ ಪ್ರಯಾಣದ ಅಡ್ಡಿ, ಆತಂಕಗಳನ್ನು, ಸಮಾಜದ ಸೋಗಲಾಡಿತನವನ್ನು ಅದರೆಲ್ಲ ನೈಜ ನುಡಿಚಿತ್ರಣದಲ್ಲಿ ಕಟ್ಟಿಕೊಡುವುದು ಪ್ರತಿಭಾ ನಂದಕುಮಾರ್ ಅವರ ಕಾವ್ಯದ ಬಹುಮುಖ್ಯ ಆಶಯ. 'ಹಿಮದ ಹಾದಿ' ಇಂತಹುದೇ ಪ್ರಯತ್ನದಲ್ಲಿರುವ ಅವರ ದೀರ್ಘ ಕವನಗಳಲ್ಲೊಂದು.

**ಯಾರೂ ಸುಳ್ಳು ಹೇಳುವುದಿಲ್ಲ**
**ಹೇಳುತ್ತಿರುವುದು ಸುಳ್ಳಾಗಿರುವುದೂ। ಒಂದು ಸತ್ಯ**
**ಅವರವರ ಅನಿವಾರ್ಯಕ್ಕೆ ಅದೂ ಅಗತ್ಯ.**

ಹೀಗೆ ಸುಳ್ಳೆಂಬ ಅಸ್ತ್ರ ಅನಿವಾರ್ಯವಾಗಿರುವ ಕಾಲಿಕ ಸತ್ಯವನ್ನು ವ್ಯಾಖ್ಯಾನಿಸುವ ಹೇಳಿಕೆಯೊಂದಿಗೆ ಕವನ ಪ್ರಾರಂಭವಾಗುತ್ತದೆ. ಇದು ಕೇವಲ ಬೇರೆಯವರು ಮಾತ್ರ ಮಾಡುವ ತಪ್ಪಲ್ಲ, ತನ್ನ ಅನಿವಾರ್ಯತೆ ಕೂಡ ಹೌದು ಎಂದು ನಿರೂಪಕಿ ಒಪ್ಪಿಕೊಳ್ಳುತ್ತಾಳೆ.

**ನನ್ನ ನಾಲಿಗೆಯೂ ಹೊರತಲ್ಲ**
**ಎದೆಯೊಳಗಿನದೆಲ್ಲ ಹೊರಬರುವಾಗ**
**ಎದುರು ಕೂತವರ ಎದೆಯಲ್ಲಿ ಕಂಪನವಾದರೆ**
**ನನ್ನ ಮಾತು ಕಾರಣವಲ್ಲ। ಅವರವರ ಭಾವ ಅಭಾವದ ಕಂತೆ.**

ಯಾವ ಸತ್ಯವನ್ನು ವ್ಯಕ್ತಪಡಿಸಲಾಗದ ಅಥವಾ ವ್ಯಕ್ತಪಡಿಸಬಾರದ ಸಂದಿಗ್ಧತೆಯಲ್ಲಿ ಮುಚ್ಚಿಡಲಾಗಿದೆಯೋ ಅದನ್ನು ಹೇಳುವುದು ಮತ್ತು ಕೇಳುವುದು ಎರಡಕ್ಕೂ ಎದೆಗಾರಿಕೆ ಬೇಕು. ಆದರೆ ಕೇಳುವವರಿಗೆ ಕಷ್ಟವಾಗುವುದೆಂದು ಹೇಳದಿರುವುದು ನನ್ನಿಂದ ಸಾಧ್ಯವಿಲ್ಲ ಎಂಬುದು ನಿರೂಪಕಿಯ ದೃಢವಾದ ಮಾತು.

ಸನ್ಯಾಸಿಯೊಬ್ಬಳು ಪ್ರೀತಿಯ ಬಗ್ಗೆ ಮಾತನಾಡಿ
ಪತ್ರಿಕೆಗಳ ತುಂಬ ಹಗರಣ ಗುಲ್ಲು
ತಕ್ಷಣ ತಿದ್ದಿಕೊಂಡಳು ಅವಳು। 'ನಾನು ಹಾಗೆ ಹೇಳೇ ಇಲ್ಲ'
ನಾನು ಪ್ರೀತಿಸಲೇ ಇಲ್ಲ ಎಂದು ಮಾತ್ರ
ಅಪ್ಪಿತಪ್ಪಿಯೂ ಹೇಳಲಿಲ್ಲ.

ಜೈವಿಕ ಕಾಮನೆಗಳನ್ನು ಹತ್ತಿಕ್ಕಿ ಆಧ್ಯಾತ್ಮಿಕ ಸಾಧನೆ ಮಾಡುವ ಸನ್ಯಾಸದಲ್ಲೂ ಕಾಣಿಸಿಕೊಳ್ಳುವ ಟೊಳ್ಳುತನವನ್ನು ಕವನ ವಿಡಂಬಿಸುತ್ತದೆ. 'ಪ್ರೀತಿ'ಯೆಂಬ ಜೀವ ಸಹಜ ಬಯಕೆಯಿಂದ ನುಣುಚಿಕೊಳ್ಳುವುದು ಅಷ್ಟೊಂದು ಸುಲಭವೂ ಅಲ್ಲ ಎಂಬುದು ಇಲ್ಲಿ ಕಹಿಯಾದರೂ ಅರಗಿಸಿಕೊಳ್ಳಲೇಬೇಕಾದ ಸತ್ಯ. ಇಲ್ಲಿ ಹೊರಬರುತ್ತಿರುವ ಸುಳ್ಳು ಸಾಮಾಜಿಕ ಭಯದಿಂದ ಉತ್ಪತ್ತಿಯಾದುದು ಎಂಬುದು ಕವನದ ಮೊದಲ ವ್ಯಾಖ್ಯಾನಕ್ಕೆ ನಿದರ್ಶನವಾಗಿದೆ.

ಪ್ರತಿದಿನ ಶೇವ್ ಮಾಡಲು ಬೇಸತ್ತ ಗಂಡಸರಿಗೆ
ದಾಡಿ ಪರಿಹಾರ.
ಪ್ರತಿ ತಿಂಗಳ ರಾಡಿಗೆ ಬೇಸರಿಸುವ ಹೆಣ್ಣು
ಏನು ಮಾಡಬೇಕು?
ದೇಹದ ಉಬ್ಬು ತಗ್ಗುಗಳ ಕಾರಣಕ್ಕೇ
ಹೇಳಬೇಕಾದ ಎಷ್ಟೊಂದು ಸುಳ್ಳುಗಳು
ಹೆಂಗಸರು ಜಾತ್ಯಾತೀತರು ಎಂದವನು
ಮರುಕ್ಷಣ ಮನೆಯಲ್ಲೇ ಬಿಟ್ಟು ಹೋಗುತ್ತಾನೆ
ಅವನ ಆತಂಕ ಅವನಿಗೆ
ಹೆಣ್ಣಿನ ಪ್ರೀತಿಗೆ ಹೆದರುವಷ್ಟು
ದ್ವೇಷಕ್ಕೆ ಹೆದರುವುದಿಲ್ಲ ಗಂಡು

ಇಲ್ಲಿ ಪ್ರತಿಯೊಂದು ಸ್ಟಾಂಜವೂ ವ್ಯಾಖ್ಯಾನಾತ್ಮಕ ಹೇಳಿಕೆಗಳಿಂದಲೇ ಕೂಡಿದೆ. ಅವು ಹೊರಡಿಸುವ ಧ್ವನಿಯಿಂದಾಗಿ ಎಷ್ಟಾದರೂ ವಿವರಣೆ ನೀಡಬಲ್ಲಷ್ಟು ಸಮರ್ಥವೂ ಆಗಿದೆ. ಸೃಷ್ಟಿಕಾರ್ಯದ ಪ್ರಮುಖ ಕಾರಣಕರ್ತೃವಾಗಿರುವ ಹೆಣ್ಣು ಅದೊಂದೇ ಕಾರಣಕ್ಕೆ ಎಷ್ಟೆಲ್ಲ ಮುಜುಗರ ಅನುಭವಿಸಬೇಕಾಗಿದೆ. ಇದಕ್ಕೆಲ್ಲಾ ಕಾರಣ ಹೆಣ್ಣಿನ ಈ ವಿಶಿಷ್ಟತೆಯನ್ನು ಅದರ ನೈಜತೆಯೊಂದಿಗೆ ಒಪ್ಪಿಕೊಳ್ಳಲಾಗದ ಪಿತೃಪ್ರಧಾನ ಸಂಸ್ಕೃತಿಯ ಉದಾಸೀನತೆ. ಹೆಣ್ಣನ್ನು ತಮ್ಮ ಇಷ್ಟ ಈಡೇರಿಕೆಯ ಸೃಷ್ಟಿ ಎಂದು ಬಿಂಬಿಸಿಕೊಳ್ಳುವ 'ಗಂಡು' ಹೆಣ್ಣಿನ ವ್ಯಕ್ತಿತ್ವದ ಅನನ್ಯತೆಯನ್ನು ಒಪ್ಪಿಕೊಳ್ಳುವಲ್ಲಿ ಸೋತಿದ್ದಾನೆ. ತಮ್ಮನ್ನು ಪ್ರಗತಿಪರರು ಎಂದು ಗುರುತಿಸಿಕೊಳ್ಳುವರು ಮನದಾಳದಲ್ಲಿಯೂ ಹೆಣ್ಣಿನ ಕುರಿತು ಇರುವ ಆತಂಕವನ್ನೂ ಕವಿತೆ ವಿಡಂಬಿಸುತ್ತದೆ. ಹೆಣ್ಣಿನ ದ್ವೇಷಕ್ಕಿಂತಲೂ ಆಕೆಯ ಪ್ರೀತಿಗೆ ಹೆಚ್ಚು ಹೆದರಲು ಇರುವ ಕಾರಣವಾದರೂ ಏನು? ಆ ಪ್ರೀತಿಗೆ ಅಷ್ಟೇ ಪ್ರಮಾಣದ

ಅಥವಾ ಅಷ್ಟೇ ಪ್ರಾಮಾಣಿಕವಾದ ಪ್ರೀತಿ ನೀಡುವ ಸಾಮರ್ಥ್ಯ ತನಗಿಲ್ಲವೆಂಬ ಅಳುಕು ಕಾರಣವಿರಬಹುದೇ? ಹೀಗೆ ಚಿಂತನೆಗಳ ಸರಣಿಯನ್ನೇ ಕವನ ಹುಟ್ಟುಹಾಕುತ್ತದೆ.

**ಹೆಣ್ಣಿನ ಹಾದಿಯಲ್ಲಿ। ಕಲ್ಲಿಲ್ಲ, ಮುಳ್ಳಿಲ್ಲ**
**ಎಂದು ಇನ್ನಾದರೂ ಹಾಡಬಹುದೇ?**
**ಬಿಸಿಲ ಹಾದಿಯಲ್ಲಿ ಬೆವರಿಳಿಯುವಾಗ**
**ಮರದ ನೆರಳ ಕನಸು**
**ಶಿಖರದ ತುದಿಯ ಜ್ವಾಲೆಯ**
**ನಿರೀಕ್ಷೆಯಲ್ಲಿ ಬೆಚ್ಚಗಾಗಿದೆ। ಹಿಮದ ಹಾದಿ**

'ಹೆಣ್ಣು' ಬದುಕಿನ ದುರ್ಗಮತೆ ಕೊನೆ ಎಂದು ಕವನ ಕೆಣಕುತ್ತದೆ. ಕಲ್ಲಲ್ಲಿ ಮುಳುಗಿದ ಹಾದಿ ಹೆಣ್ಣಿಗೆ ಇನ್ನಾದರೂ ಸಿಗಬಹುದೇ ಅದೂ ಕೂಡ ಒಂದು ಸಂದರ್ಭಕ್ಕೆ ಸುಳ್ಳಾಗಿಯೇ ಉಳಿಯುತ್ತದೆಯೋ! ಬಿಸಿಲಲ್ಲಿ ನೆರಳಿನ ಹಂಬಲ, ಚಳಿಯಲ್ಲಿ ಬೆಂಕಿಯ ಹಂಬಲದೊಂದಿಗೆ ಕವನ ಮುಕ್ತಾಯವಾಗುತ್ತದೆ. ಹೀಗೆ ಚಿಂತನೆಯೊಂದನ್ನು ಮಂಡಿಸುವಾಗ ಕವಿತೆ ನೀಳ್ಗವಿತೆಯಾಗಿ ರಚನೆಗೊಂಡಿದೆ. ಆ ಕಾರಣಕ್ಕಾಗಿಯೇ ತಾನು ಹೇಳಬೇಕಾಗಿರುವುದನ್ನೆಲ್ಲ ಹೇಳಲು ಸಾಧ್ಯವಾಗಿದೆ.

ಗ್ರಾಮೀಣ ಭಾರತದ ಚರಿತ್ರೆಯ ಪುಟಗಳಲ್ಲಿ ಹೆಣ್ಣಿನ ಶ್ರಮ ದಾಖಲಾಗಿರುವುದು ಕಡಿಮೆಯೆ. ಸಾಕ್ಷಿ, ಆಧಾರಗಳನ್ನು ಹೆಕ್ಕಿ ಇತಿಹಾಸವನ್ನು ಪುನರ್‌ರಚಿಸುವ ಕಾರ್ಯ ಕೂಡ ಆಗಾಗ ನಡೆದಿದೆ. ಆದರೆ ಚರಿತ್ರೆಯನ್ನು ಕಟ್ಟುವಾಗ ಯಾವುದನ್ನು ನೈಜವಾಗಿ ಹಿಡಿಯಲಾಗಿದೆ ಎಂದು ಹೇಳಲಾಗುತ್ತದೆಯೋ ವಾಸ್ತವದಲ್ಲಿ ಅದೆಲ್ಲವೂ ಸುಳ್ಳು. ಏಕೆಂದರೆ ವಾಸ್ತವ, ಕಲ್ಪನೆಗಿಂತ ಖಂಡಿತವಾಗಿಯೂ ಭಿನ್ನವಾಗಿರುತ್ತದೆ. ಇಂತಹುದೇ ಒಂದು ಸತ್ಯವನ್ನು ಹೇಳಲು 'ರಶ್ಮಿ ಹೆಗಡೆ'ಯವರು 'ಲೆಕ್ಕಕ್ಕೆ ಸಿಗದವರು' ಎಂಬ ದೀರ್ಘ ಕವನವನ್ನು ಪ್ರಯತ್ನಿಸಿದ್ದಾರೆ.

**ಅಮ್ಮನಿಂದ ಅಪರೂಪಕ್ಕೊಮ್ಮೆ**
**ಅಕ್ಕಿ ತೊಳಸಲು 'ಆಫರ್' ಬಂತು ನಂಗೆ.**
**ನನ್ನಜ್ಜಿ–ಮುತ್ತಜ್ಜಿಯರಿಗೆ। ಅಕ್ಕಿ ತೊಳಸಿ ಮೂಟೆ ಕಟ್ಟುವುದೆಂದರೆ**
**ಸೀರೆ ಸುತ್ತಿಕೊಂಡಷ್ಟು ರೂಢಿಯಂತೆ**
**'ಅಯ್ಯೋ, ಆ ಕಾಲವೆಲ್ಲಿ? ನಾನೊಬ್ಬಳೇ**
**ದಮ್ಮುಕಟ್ಟಿ ಒಪ್ಪೊತ್ತುಗಟ್ಟಲೇ ಅಕ್ಕಿ ಕುಟ್ಟಿದ್ದು,**
**ಹೇಳಿದ್ರೆ ನಂಬಿಕೆ ಬರೋದಿಲ್ಲ ನಿಮ್ಗೆ**
**ದೊಡ್ಡಾಯಿ ಸೊಸೆಯಿಂದಿರು ಬೀಗುವುದು ನೋಡಿ**
**ಯಾವುದೋ ಪುರಾತನ। ಕಲಾಪ್ರತಿಮೆಯನ್ನಪ್ಪುಚಿಕೊಳ್ಳುವಂತೆ**
**ನೂರು–ನೂರಾರು ಹಾಡುಗಳು।ಈ ತಾಳದಲ್ಲಿ ಜೀವತಳೆದದ್ದನ್ನು**
**ಧ್ಯಾನಿಸುತ್ತ.**

ಈ ಕವನದ ನಿರೂಪಕಿ ಆಧುನಿಕ ಸೌಲಭ್ಯಗಳನ್ನು ಅನುಭವಿಸುವವಳು. ಹಾಗಾಗಿಯೇ ಹಳೆಯದರಲ್ಲಿ ಅವಶ್ಯಕತೆಗಿಂತ ಹೆಚ್ಚಿನ ಕುತೂಹಲವಿದೆ. ಗೌರವವಿದೆ. ಒನಕೆಯ ಭಾರದ ಅನುಭವವಿರದ ಆಕೆಗೆ ವಾಸ್ತವ ಅರಿವಾಗುವುದು ಹೀಗೆ

**ಒನಕೆಯ ವಿಶ್ವರೂಪ ನಿಧಾನ**

**ಬಿಚ್ಚಿಕೊಂಡಂತೇ ಭುಜ-ಪಕ್ಕೆಲುಬುಗಳು**

**ತಮ್ಮಿರುವ ವದರಿಕೊಳ್ಳುತ್ತ**

**ಬೆನ್ನು ಹುರಿಯನ್ನು ಯಾರೋ ಜಗ್ಗಿದಂತಾಗಿ**

**ತಲೆಯೆಲ್ಲ 'ಧಿಂ' ಅನ್ನತೊಡಗಿ। ಆಧುನಿಕತೆಯ ಜಂಘಾಬಲವೆಲ್ಲ**

**ಥರಗುಟ್ಟಲಾರಂಭಿಸಿದಾಗ ಅಚ್ಚರಿಗೊಳ್ಳುತ್ತೇನೆ.**

ಹಾಡು ಹಾಡುವುದಿರಲಿ ನೆನಪು ಕೂಡ ಆಗಲಿಲ್ಲ. ಅಕ್ಕಿಯೂ ಕುಟ್ಟಿಯಾಗಲಿಲ್ಲ. ಹಾಗಾದರೆ ದೈವಿಕ ಶ್ರಮಕ್ಕೂ, ಮಾನಸಿಕ ಆರೋಗ್ಯಕ್ಕೂ ಏನಾದರೂ ಸಂಬಂಧವಿದೆಯೆ! ತನ್ನಿಂದ ಕಿಂಚಿತ್ ಮಾಡಲಾಗದ ಶ್ರಮವನ್ನು, ತನ್ನ ಹಿಂದಿನವರು ಮನರಂಜನಾತ್ಮಕವಾಗಿ ತೆಗೆದುಕೊಳ್ಳುತ್ತಿದ್ದುದು ಹೇಗೆ ಎಂಬ ಪ್ರಶ್ನೆಯೇ ಆಕೆಗೆ ಅವರ ಬಗೆಗಿನ ಗೌರವವನ್ನು ಮತ್ತಷ್ಟು ಹೆಚ್ಚಿಸುತ್ತದೆ.

**ನಿನ್ನೆಯ ಹೆಣ್ಣುಗಳೇ। ನಿಮ್ಮೆದೆಯ ಗಣಿಯಲ್ಲಿ**

**ಚಿನ್ನ ಅಗೆಯಲು ಹೊರಟು। ಹಾದಿತಪ್ಪಿದವರು ನಾವು.**

**ನೀವು ಹಾಡಿಟ್ಟ ಪದಗಳಲ್ಲಿ**

**ನಿಮ್ಮ ರೂಪ-ಆಕಾರ ಕಟ್ಟಲು। ಹೆಣಗುತ್ತಿದ್ದೇವಲ್ಲ**

**ನಮಗೇನನ್ನುತ್ತೀರಿ ನೀವು?**

ವರ್ತಮಾನದಲ್ಲಿ ನಿಂತು ಭೂತವನ್ನು ಕಟ್ಟಿಕೊಡುವ ಪ್ರಯತ್ನದಲ್ಲಿರುವ ಆಧುನಿಕರನ್ನು ಕಂಡು ನಿರೂಪಕಿಗೆ ಹೀಗನ್ನಿಸುತ್ತದೆ. ಎಚ್.ಎಲ್. ಪುಷ್ಪ ಅವರು ಸಿಕ್ಕಿಂನ ಗ್ಯಾಂಗ್‌ಟಾಕನ್ನು ನೆನಪಿಸಿಕೊಂಡು 'ನದೀಮುಖ' ಎಂಬ ದೀರ್ಘ ಕವನ ರಚಿಸಿದ್ದಾರೆ. ಆರು ಭಾಗಗಳಲ್ಲಿರುವ ಈ ಕವಿತೆಯ ಮೊದಲ ಭಾಗದಲ್ಲಿ ನದಿಯ ಸೌಂದರ್ಯವನ್ನು, ಶಾಂತ ಪರಿಸರವನ್ನು ವರ್ಣಿಸಲಾಗಿದೆ. ಎರಡನೇ ಭಾಗದಲ್ಲಿ ಸಿಕ್ಕಿಂನ ನದಿ, ಪ್ರವಾಹ ಕಾಲದಲ್ಲಿ ತೋರಿಸುವ ಆರ್ಭಟವನ್ನು, ಜೀವಹಾನಿಯನ್ನು ವರ್ಣಿಸಲಾಗಿದೆ. ಮೂರನೆಯ ಭಾಗದಲ್ಲಿ ಪ್ರವಾಹದ ಪರಿಣಾಮಗಳನ್ನು ವಿವರಿಸುತ್ತಲೇ ನದಿಯನ್ನು ಹೆಣ್ಣಿಗೆ ಹೋಲಿಸುವ ಪಾರಂಪರಿಕ ನಂಬಿಕೆಯ ತುಲನೆಗೆ ತೊಡಗಲಾಗಿದೆ.

**ಹೆಣ್ಣೆಂಬುದು ಬರೀ ಸುಳ್ಳಿದು, ಹೆಣ್ಣಲ್ಲ**

**ಎಲ್ಲ ಪ್ರಕೃತಿ ಸತ್ಯಗಳ ಕೆದರಿ ನೋಡುತ್ತಾ**

**ಸಾವು ನೋವುಗಳಲ್ಲಿ ಸಕಲ ಜೀವವ ತೇಯುತ್ತಾ। ತಾಯ್ತನ, ಒಡಲು ಗರ್ಭ**

**ಎಲ್ಲವನ್ನು ಒಪ್ಪುತ್ತಾ, ಎಲ್ಲವನ್ನು ಧಿಕ್ಕರಿಸುತ್ತಾ**

**ತಾಯಿ, ಮಹಾಮಾಯಿ**

**ದಹಿಸುತ್ತಾ ಒಳಗೊಳಗೆ ಓರೆ ಹಚ್ಚಿ ನೋಡುತ್ತಿದ್ದಾಳೆ**

**ಹೆಣ್ಣೆಂಬ ಶಬುದಕ್ಕೆ ಹೊಸ ಅರ್ಥ ಹುಡುಕುತ್ತಿದ್ದಾಳೆ.**

ಹೀಗೆ ಕವನ ನದೀಶಕ್ತಿಯ ಒಂದು ಆಯಾಮದಿಂದ ಹೆಣ್ಣಿನ ಶಕ್ತಿ ಇನ್ನೊಂದು ಆಯಾಮಕ್ಕೆ ಹೊರಳುತ್ತದೆ. ನಾಲ್ಕನೇ ಭಾಗದಲ್ಲಿ ನದಿ ಶಾಂತಳಾಗಿ ಹರಿಯುತ್ತಾ ಒಯ್ಯಾರದಿಂದ ಪ್ರಿಯಕರನನ್ನು ಸೆಳೆಯುವ ಮೋಹಿನಿಯಂತೆ ವರ್ಣಿಸಲಾಗಿದೆ. ಪ್ರಕೃತಿಯ ಸೊಬಗಿನ ಕಾಣಿಕೆಗಳನ್ನು ತನ್ನೊಳಗೆ ತುಂಬಿಕೊಳ್ಳುತ್ತಾ ಸಾಗುವ ಆಕೆ ತನ್ನ ಹೊಟ್ಟೆಯೊಳಗೆ ಅನೇಕ ಜೀವಿಗಳನ್ನಿಟ್ಟುಕೊಂಡು ಪೊರೆಯುತ್ತಾಳೆ. ಹಾಗೆಯೇ ಗರ್ಭಪಾತದ ಭಯವಿಲ್ಲದ ಬಸುರಿಯಾಗಿ ಕವಿಗೆ ಕಾಣಿಸಿಕೊಳ್ಳುತ್ತಾಳೆ. ನಿರಂತರ ಪೊರೆಯುವ, ಹರಿಯುವ ಈ ಜೀವಶಕ್ತಿಗೆ ಇಡೀ ಪ್ರಕೃತಿಯೇ ಬೆರಗಾಗಿದೆ.

**ಸೂರ್ಯ, ಚಂದ್ರರೆಂಬ ಪುಂಡರು**

**ಎಲ್ಲಿ ಮುದುಡಿದರಯ್ಯ ಈ ಚಿರಯೌವ್ವನೆಯ ಮುಂದೆ**

**ಗಲಗಲನೆ ಸಾಗುತ್ತಿದ್ದಾಳೆ ಎಂದಿನಂತೆ। ಅದೇ ಮದಮತ್ತ ಗತಿಯಲ್ಲಿ**

ಸೂರ್ಯ, ಚಂದ್ರರಷ್ಟೇ ಪ್ರಾಚೀನವಾಗಿರುವ ಈಕೆ ಪುರಾಣ, ಇತಿಹಾಸ, ನಾಗರಿಕತೆಗಳೆಲ್ಲವಕ್ಕೂ ಸಾಕ್ಷಿಯಾದವಳು. ಹಾಗಾಗಿಯೇ ದೇಗುಲದಲ್ಲಿರುವ ಬುದ್ಧನೂ ಈಕೆಯ ನಿರಂತರತೆಯನ್ನು ಕಂಡು ನಕ್ಕಂತೆ ಭಾಸವಾಗುತ್ತದೆ. ಕವನದ ಕೊನೆಯ ಭಾಗದಲ್ಲಿ ನದಿ–ಹೆಣ್ಣುಗಳ ನಡುವಿನ ಅಭೇದ್ಯತೆಯನ್ನು ಕಟ್ಟಿಕೊಡಲಾಗಿದೆ.

**ಹೆಣ್ಣೆಂದರೆ ನದಿ, ನದಿಯೆಂದರೆ ಹೆಣ್ಣು**

**ಎಲ್ಲಾ ಗಡಿರೇಖೆಗಳು ಬರಿ ಮಿಥ್ಯೆ**

**ಗುಪ್ತಗಾಮಿನಿಯೊಳಗೆ ಬಚ್ಚಿಟ್ಟ**

**ರಾಶಿ ರಾಶಿ ಕಾಮನಬಿಲ್ಲುಗಳು**

**ಆಕಾರವಿಲ್ಲದ ಮುತ್ತು, ಹವಳಗಳು**

ನದಿಯ ಆಂತರ್ಯ ಹೆಣ್ಣಿನ ಆಂತರ್ಯದ ರೂಪಕವಾಗಿ ಕವನ ಅಂತ್ಯವಾಗುತ್ತದೆ. ನದಿಯ ಶಕ್ತಿ, ಹೆಣ್ಣಿನ ಶಕ್ತಿಯ ಆಗಾಧತೆಯ ಪ್ರತೀಕವೋ ಎಂಬಂತೆ ಕವನ ದೀರ್ಘ ಸ್ವರೂಪ ಪಡೆದುಕೊಂಡಿದೆ. ನದಿಯ ಬಾಹ್ಯ ವಿವರಣೆಗಳಿಂದ ಪ್ರಾರಂಭವಾದ ಕವನ, ಅದರ ಅಂತರಂಗದಲ್ಲಿರುವ ಬದುಕಿಗೆ ಸಂಬಂಧಪಟ್ಟ ಧ್ವನಿಗಳನ್ನು ಹೊರಡಿಸುವ ಮೂಲಕ ಉದಾತ್ತ ಮುಕ್ತಾಯ ಪಡೆಯುತ್ತದೆ.

ಕಾಮ, ಪ್ರೇಮದ ನಡುವಿನ ಅಂತರ ಬಹಳ ಕಡಿಮೆ ಎನ್ನುವುದನ್ನು ಸಾಹಿತ್ಯಕ ಕೃತಿಗಳು ಸಾಬೀತುಪಡಿಸುತ್ತವೆ. ಯಾವ ಕಾಮವನ್ನು ನಿಗ್ರಹಿಸಬೇಕೆನ್ನಲಾಗುತ್ತದೋ ಅದು

ಪ್ರೇಮವಿಲ್ಲದ್ದು. ಆದರೆ 'ಕಾಮ'ನನ್ನು ಪ್ರಾರ್ಥಿಸುವ ಮೂಲಕ ಪ್ರೇಮದ ಮಹತ್ವವನ್ನು ಸಾರುವ ಪ್ರಯತ್ನವನ್ನು ಚೇತನಾ ತೀರ್ಥಹಳ್ಳಿಯವರು ತಮ್ಮ 'ಕಾಮ, ಹೇ ಪರಮಪುರುಷಾರ್ಥ!' ಎಂಬ ಕವನದಲ್ಲಿ ಮಾಡಿದ್ದಾರೆ.

**ನಿನ್ನೈದು ಬಾಣಗಳ**

**ಕಡಕೊಡುವೆಯಾ ಕೊಂಚ। ಹೇಕಾವು!?**

ಈ ಕವನದ ನಿರೂಪಕಿಗೆ ಕಾಮನ ಐದು ಬಾಣಗಳನ್ನು ತೆಗೆದುಕೊಂಡು ಏನಾಗಬೇಕಿದೆ! ಅದನ್ನು ಕವನ ಮುಂದುವರಿಸುತ್ತದೆ.

**ಬಾಣವೊಂದನ್ನು ಹೂಡಿ ಬಾನಿಗೆ**

**ಮುನಿಸು ತೊಡೆಯಬೇಕಿದೆ,**

**ಬಾಣವೊಂದನು ಹೂಡಿ ನೀರಿಗೆ**

**ನಂಟು ಬೆಸೆಯಬೇಕಿದೆ,**

**ಬಾಣ ಮತ್ತೊಂದು ಕೊಡು; ಕಾಮ,**

**ಜನದ ಕಣ್ಣಿಗೆ ಹೊಡೆಯಲು**

**ಬಾಣವೊಂದನು ಹೂಡಿ ಮಣ್ಣಿಗೆ। ಬೀಜಮೊಳೆಸಬೇಕಿದೆ,**

**ಬಾಣಕೊನೆಯದು, ಕೀಳು ಕಾಮ। ನೇರ ನಿನ್ನೆಡೆ ಹೂಡುವೆ.**

ಬಾನು, ಭೂಮಿಗಳ ನಂಟು ಬೆಸೆಯುವ ಉದ್ದೇಶದ ಹಿಂದೆ ಗಂಡು–ಹೆಣ್ಣುಗಳು ಪರಸ್ಪರ ಇಚ್ಛೆಯಿಂದ ಒಪ್ಪಿಕೊಳ್ಳುವ, ಅಪ್ಪಿಕೊಳ್ಳುವಂತೆ ಮಾಡುವ ತವಕ ಎದ್ದು ಕಾಣುತ್ತದೆ. ಕಾಮ, ಪ್ರೇಮದಿಂದ ಹುಟ್ಟು ಬೇರೆ ವಿನಾ ಆಕ್ರಮಣದಿಂದಲ್ಲ ಎನ್ನುವುದು ಕವಿಯ ಆಶಯವಾಗಿದೆ. ಜನರ ಅಜ್ಞಾನದ ಪೊರೆಯನ್ನು ಕಳಚಲು ಕೂಡ ಒಂದು ಜ್ಞಾನದ ಬಾಣ ಬೇಕಾಗಿದೆ. ಸಂಬಂಧಗಳಲ್ಲಿ ಜೀವಂತಿಕೆ ಮೂಡಿಸಬೇಕಿದೆ. ಹಾಗಾದರೆ ಕೊನೆಯ ಬಾಣವನ್ನು ಕಾಮನಿಗೆ ಯಾಕೆ ಹೊಡೆಯಬೇಕು?! ನಿಜದ ನೀನು ಬೇಕಿದೆ ಎಂದು ನಿರೂಪಕಿ ಹಂಬಲಿಸುತ್ತಾಳೆ. 'ಕಾಮ' ಎಂದರೆ ಬಯಕೆ ಎಂದೂ ಅರ್ಥವಿದೆ. ಈ ಬಯಕೆ ನೈಜ ಬಯಕೆಯಾಗಿರಬೇಕಿದೆ. ಪರಸ್ಪರರನ್ನು ಒಂದು ಮಾಡುವಂತಿರಬೇಕೇ ವಿನಾ ಕಚ್ಚಾಡಿ ಸಾಯುವಂತಿರಬಾರದು. ಕೊನೆಯ ಭಾಗದಲ್ಲಿ ಈ ಬಯಕೆ ಇನ್ನಷ್ಟು ಉದಾತ್ತಗೊಳ್ಳುತ್ತದೆ.

**ಕಾಮಿಸಲಿ ಎಲ್ಲ ಎಲ್ಲರನು,**

**ಮನಸು ಮನಸುಗಳ ಸಂಭೋಗದುತ್ತುಂಗದಲಿ**

**ಸುಖವೊಂದೆ ಸ್ಥಾಯಿಯಾಗಿರಲಿ**

**ಜನ್ಮಿಸಲಿ ಶಾಂತಿ, ಸೌಹಾರ್ದದ ಕೂಸುಗಳು,**

**ಸಂಭವಿಸಲಿ ಯುಗಾದಿ ನಿಜಾರ್ಥದಲ್ಲಿ....**

ಮನಸುಗಳ ನಡುವೆ ನಡೆಯಬೇಕಾದ ಸಂಭೋಗವನ್ನು ಕವನ ಹಾರೈಸುತ್ತದೆ. ಹೀಗೆ ದೇಹವಾಂಛೆಯನ್ನು ಮೀರಿದ 'ಕಾಮ'ವನ್ನು ಆಹ್ವಾನಿಸುವುದರೊಂದಿಗೆ ಪುರುಷಾರ್ಥಗಳಲ್ಲಿ ಕಾಮವೇ ಶ್ರೇಷ್ಠವೆಂದು ಕವನ ಪ್ರತಿಪಾದಿಸುತ್ತದೆ.

ನೀಳ್ಗವಿತೆಗಳು ಒಂದು ಶೀರ್ಷಿಕೆಯಡಿಯಲ್ಲಿ ಅನೇಕ ಉಪಶೀರ್ಷಿಕೆಯಡಿಯಲ್ಲಿ ವಿಸ್ತಾರ ಪಡೆದದ್ದೂ ಇದೆ. ಸಂಧ್ಯಾದೇವಿಯವರ 'ಝುಳಕ್ಕೆ ಮುಖ ಬೆಳಗುತ್ತದೆ' ಸಂಕಲನದಲ್ಲಿ 'ಮೂರು ಆಮೆಗಳು' ಇಂತಹ ಒಂದು ನೀಳ್ಗವಿತೆ. ಮೂರು ಉಪಶೀರ್ಷಿಕೆಗಳಡಿಯಲ್ಲಿ ಹರಡಿಕೊಂಡಿರುವ ಈ ಕವನ ಆಮೆಯ ರೂಪಕದೊಂದಿಗೆ ಹೆಣ್ಣಿನ ಬದುಕಿನ ಮೂರು ಸನ್ನಿವೇಶಗಳನ್ನು ವಿವರಿಸುತ್ತದೆ. ಒಂದನೇ ಪ್ರಸಂಗದಲ್ಲಿ ನಿರುಪದ್ರವಿಯಾದ ಜೀವಿಯೊಂದನ್ನು ವಿನಾಕಾರಣ ತೊಂದರೆಗೀಡುಮಾಡುವ ಮನುಷ್ಯ ಸ್ವಭಾವವನ್ನು ಮೆದುದನಿಯಲ್ಲಿ ಪ್ರಶ್ನಿಸಲಾಗಿದೆ. ಎರಡನೇ ಪ್ರಸಂಗದಲ್ಲಿ :

**ಮೊಲಕ್ಕೆ ಒಂದು ಗುಟ್ಟು ಹೇಳಿದ್ದೇನೆ**

**ನನಗೆ ಗೆಲ್ಲಬೇಕಾಗಿಯೇ ಇಲ್ಲ। ನಾನಿಲ್ಲಿ ನಿಲ್ಲುತ್ತೇನೆ.**

**ಮುದ್ದು... ನಿದ್ದೆ ಮುಗಿಸು। ಮತ್ತೆ ಎದ್ದು ಕುಪ್ಪಳಿಸು**

**ನನ್ನಿಂದ ಮುಂದೆ ನೀನು ಹೋಗು**

ಹೀಗೆ ಸ್ಪರ್ಧೆಯಿಂದ ಹಿಂದೆ ಉಳಿಯುವ ತೀರ್ಮಾನ ತೆಗೆದುಕೊಳ್ಳುತ್ತದೆ. ಇಲ್ಲಿ ಹೆಣ್ಣಿನ ಮನೋದೌರ್ಬಲ್ಯಕ್ಕಿಂತಲೂ ವ್ಯವಸ್ಥೆಯ ಬಗೆಗಿನ ಉದಾಸೀನವೇ ಎದ್ದು ಕಾಣುತ್ತದೆ. ಮೂರನೆಯ ಪ್ರಸಂಗದಲ್ಲಿ

**ಕಾಲ ನನಗೆ ಸವಾಲು। ಹಾಕುತ್ತದೆ ಸಾಯಲು**

**ನಾನೋ... ಸುಖಾ ಸುಮ್ಮನಿದ್ದೇನೆ.**

**..... ಎಷ್ಟೋ ಸಮಯದಿಂದ**

**ಸಾವಿಗೆ ಸಣ್ಣಗೆ ನಗೆ ಬರುತ್ತಿದೆ। ಎಷ್ಟು ಚಂದ!**

ಇದು ಹೆಣ್ಣಿನ ಆತ್ಮಸ್ಥೈರ್ಯವನ್ನು ಕುಗ್ಗಿಸಲು ಪ್ರಯತ್ನಿಸುವ 'ಸಾವು' ಇರಬಹುದು. ಆದರೆ ಆಕೆಯ 'ಧೀ'ಶಕ್ತಿಯ ಮುಂದೆ ಹಿಂದೆ ಸರಿಯುವುದು ಅನಿವಾರ್ಯವಾಗಿದೆ. 'ಸಣ್ಣನಗೆ'ಯಲ್ಲಿ ಅಗಾಧವಾದ ಅರ್ಥಗಳೇ ತುಂಬಿರಬಹುದು.

ಭಾಗ್ಯ ಜಯಸುದರ್ಶನ ಅವರು 'ಭೂಮಿ ಪದ್ಯಗಳು' ಎಂಬ ಶೀರ್ಷಿಕೆಯಡಿಯಲ್ಲಿ ಸುದೀರ್ಘವಾದ ಕವನಗಳ ಸರಮಾಲೆಯನ್ನೇ ಪೋಣಿಸಿದ್ದಾರೆ. ಚುಟುಕಗಳ ಗಾತ್ರದಲ್ಲಿರುವ ಅನೇಕ ಸ್ಟಾಂಜಾಗಳಿಂದ ಕೂಡಿದ ಈ ದೀರ್ಘ ರಚನೆಗಳು ಒಂದಕ್ಕೊಂದು ಹೆಣಿಕೆಯಲ್ಲಿರದ ಸ್ವತಂತ್ರ ಕವನಗಳಂತಿವೆ. ಭೂಮಿಯ ರಚನೆ, ಕಾರ್ಯಗಳು, ಶಕ್ತಿಯ ವಿವಿಧ ಮುಖಗಳನ್ನು ವರ್ಣಿಸುವ ವರ್ಣನಾತ್ಮಕ ಗೀತೆಯಂತೆ ವಾಚ್ಯವಾಗಿದೆ. ಹಾಗಾಗಿ ನೆನಪಿನಲ್ಲಿ ಉಳಿಯುಂತಹ ಧ್ವನಿಪೂರ್ಣ ಸಾಲುಗಳು ಕಡಿಮೆ ಇವೆ.

## ೭.೩. ಹನಿಗವನಗಳು/ಕಿರುಪದ್ಯಗಳು

ಕವನಗಳ ಗಾತ್ರವನ್ನು ಅನುಸರಿಸಿಯೇ ಈ ಉಪವಿಭಾಗವನ್ನು ಹೆಸರಿಸಿಕೊಳ್ಳಲಾಗಿದೆ. "ಹನಿಗವನಕ್ಕೆ ಚುಟುಕ, ಮುಕ್ತಕ ಮುಂತಾದ ಇತರ ಹೆಸರುಗಳೂ ಇವೆ. ಕಿಟ್ಟೆಲ್ ಕೋಶದಲ್ಲಿ ಇದನ್ನು 'ಇಡುಕುಂಗಟ್ಟ' ಎನ್ನಲಾಗಿದೆ. "The meaning of which is complete in itself" ಎಂಬ ಅರ್ಥವಿವರವೂ ಇದೆ. 'ಕಾವ್ಯಾದರ್ಶ'ದಲ್ಲಿ ದಂಡಿಯು 'ಅನಿಬದ್ಧಕಾವ್ಯ' ಎಂದು ಇದನ್ನು ಗುರ್ತಿಸಿದ್ದಾನೆ. ಇಂಗ್ಲಿಶಿನಲ್ಲಿ ಇದು 'Epigram'. ಕೋಲೆರಿಜ್ ಕವಿ ತುಂಬ ಸಂಕ್ಷಿಪ್ತವಾಗಿ ಲಕ್ಷಣ ತಿಳಿಸಿದ್ದಾನೆ;

> **What is an Epigram? a Dwarfish whole**
>
> **its body Brevity and wit its soul.**

'ಪುಟ್ಟ ದೇಹ ಮತ್ತು ಚಮತ್ಕಾರಿಕ ಆತ್ಮ', ಇವೇ ರಾಜರತ್ನಂ ಅವರು ಬರೆದ 'ಚುಟುಕ', ಕಾಟೂಕ್ತಿ ಅಥವಾ ಜಾಣ್ನುಡಿ, ಎಸ್.ವಿ. ರಂಗಣ್ಣನವರು, 'ಅದು, ಕುಳ್ಳಾದರೂ ರೂಪವತಿ ಹೆಣ್ಣಿನ ಹಾಗೆ' ಎಂದು ಬಣ್ಣಿಸಿರುವುದು ಅರ್ಥವತ್ತಾಗಿದೆ".[೪]

"ಸಾಮಾನ್ಯವಾಗಿ ಹನಿಗವನ ಅಥವಾ ಚುಟುಕವನ್ನು ವಿವರಿಸುವವರೆಲ್ಲ ಜೇನುಹುಳುವಿನ ರೂಪಕ ಬಳಸಿರುವುದು ಗಮನಾರ್ಹ. ಮೈಯೆಲ್ಲ ಮಧುರವಿರುವ ಕೀಟ. ಇದರ ಚುಂಬನದ ಪರಿಣಾಮ ಮಾತ್ರ ಘೋರ! ವ್ಯಂಗ್ಯ, ವಿಡಂಬನೆ, ವಕ್ರತೆ ಇವುಗಳ ಮುಖ್ಯ ಲಕ್ಷಣಗಳು. ಮುಕ್ತಕ, ಹೆಸರಿಗೆ ಅನ್ವರ್ಥ. ಹಲವು ಶಬ್ದಗುಚ್ಛಗಳ ಮುಲಾಜಿನ ಹೊರತು, ಅದು ಸ್ವತಂತ್ರ. ವಸ್ತು, ಛಂದಸ್ಸು ಎಲ್ಲಕ್ಕೂ ಅದು ಅನ್ವಯ. ಏಳೆ, ಕಂದ, ತ್ರಿಪದಿಯೂ ಇರಬಹುದು... ಬದುಕಿನ ಎಲ್ಲವೂ 'ಹನಿಗವನ'ಗಳಿಗೆ ವಸ್ತುವಾಗಬಲ್ಲವು. ವೇದಕಾಲದಲ್ಲಿ ಋಷಿಗಳು ಉಷೆಯನ್ನೂ, ನಿಶೆಯನ್ನೂ, ಸೂರ್ಯನನ್ನೂ, ಅಗ್ನಿಯನ್ನೂ ಆರಾಧಿಸುವಾಗ ಉದ್ಗರಿಸುವ ಉಕ್ತಿಗಳೇ ಕವಿತೆಗಳಾಗಿವೆ. ಉಪನಿಷತ್ತುಗಳೂ ಬದುಕಿನ ಸತ್ಯಗಳನ್ನು ಹರಳುಗಟ್ಟಿಸಿ ಕಿರುಗವನ ರೂಪಿನಲ್ಲಿರಿಸಿವೆ. ಬೌದ್ಧರ 'ಝೆನ್'ಗಳೂ ತಾತ್ವಿಕ ವಿಚಾರಗಳನ್ನು ವಾಸ್ತವಿಕ ನೆಲೆಯಲ್ಲಿ ಪುಟ್ಟದಾಗಿ ಮುಂದಿಟ್ಟಿವೆ".[೫]

"ಒಟ್ಟಾರೆ ಆಧುನಿಕ ಮುಕ್ತಕ ಅಥವಾ ಹನಿಗವಿತೆಗಳನ್ನು 'ಕ್ಯಾಪ್ಸೂಲ್'ಗಳೆಂದು ಕರೆಯಬಹುದೆನಿಸುತ್ತದೆ. ಮುಷರಾಯಿಗಳಲ್ಲಿಯಂತೆ ಸಮಯ ಸ್ಫೂರ್ತಿಯಿಂದ ಹುಟ್ಟಿದ ಜೋಕುಗಳೂ, 'ವಾಹವ್ವಾ' ಎಂಬ ಉದ್ಗಾರ ಹುಟ್ಟಿಸಿದ್ದಿವೆ. ವೈನೋದಿಕವಾದ ರಚನೆಗಳನ್ನು ಕೇಳಿ ಕ್ಷಣ ನಕ್ಕು, ಮರೆತುಬಿಡುವ ಸಾಧ್ಯತೆಯೇ ಹೆಚ್ಚು ಎಂಬ ಟೀಕೆಯೂ ಇದೆ. ಅದು 'ಶ್ಲೇಷೆ'ಯು ಹುಟ್ಟಿಸುವ ಬೆರಗನ್ನು ಸುಲಭವಾಗಿ ತಳ್ಳಿ ಹಾಕಲಾಗದು... ಈಚೆಗೆ ಕೇಬಲ್ ಟಿ.ವಿ. ಹಾವಳಿಯಿಂದ, ಕವಿಗೋಷ್ಠಿಗಳಲ್ಲಿ ಬರೇ ಕವಿಗಳೇ ಸಭಿಕರಾಗಿರುವ ಶೋಚನೀಯ ಪರಿಸ್ಥಿತಿಯಲ್ಲಿ ಇಂಥ 'ಚುಟುಕು'ಗಳ ಅಗತ್ಯ ತೀರಾ ಇದೆ. ಸಾಹಿತ್ಯ ಸಮ್ಮೇಳನಗಳಲ್ಲಿಯ ದೀರ್ಘ ಆಕಳಿಕೆಯ

ನಡುವೆ, ತಲೆ ಹಗುರಾಗುವಂಥ ಅಥವಾ ವಾಹ್! ಎಂದು ಉದ್ಗರಿಸುವಂಥ 'ಗುಳಿಗೆ ಕವನ'ಗಳು ಬೇಕೇ ಬೇಕು. ಇವು ಜೀರ್ಣಕಾರೀ 'ಹಿಂಗೋಲಿ' ಅಥವಾ 'ಹಜ್‌ಮೋಲಾ'ದಂತೆ ಎಂದರೆ, ಎಲ್ಲವನ್ನೂ ಹೇಳಿದಂತೆ!.... ವೈದೇಹಿ, ಲಲಿತಾನಾಯಕ, ವಿಜಯಾದಬ್ಬೆ, ಶಶಿಕಲಾ ವೀರಯ್ಯಸ್ವಾಮಿ, ಮಾರುತಿ, ಶೈಲಜಾ ಉಡಚಣ, ರಜಿಯಾ ಮುಂತಾದ ಕವಯಿತ್ರಿಯರ ಬಹುಪಾಲು ಕವನಗಳು ಸ್ತ್ರೀ ಪ್ರಕೃತಿ ಹಾಗೂ ಬಂಡಾಯದ ಧೋರಣೆಗಳನ್ನು ಪ್ರತಿನಿಧಿಸಿವೆ.[೬]

ಕಮಲಾ ಹೆಮ್ಮಿಗೆಯವರ ಸಂಪಾದಕೀಯದಲ್ಲಿ ಸಂಗ್ರಹಿಸಲ್ಪಟ್ಟ 'ಹನಿಹನಿ' ಹನಿಗವನ ಸಂಕಲನದಲ್ಲಿ ಮುನ್ನುಡಿಯಲ್ಲಿ ವಿವರಿಸಲಾದ ಹಿಂದಿನ ಹೇಳಿಕೆಗಳಿಂದ ಹನಿಗವನದ ಅರ್ಥ, ಲಕ್ಷಣ, ಉದ್ದೇಶ, ಪರಿಣಾಮಗಳೆಲ್ಲವೂ ಮನವರಿಕೆಯಾಗುತ್ತದೆ. ಆಧುನಿಕ ಮಹಿಳಾಕಾವ್ಯ ಕೂಡ ಹನಿಗವನ ರೂಪದಲ್ಲಿ ಕಾವ್ಯಕ್ಷೇತ್ರಕ್ಕೆ ನೀಡಲಾದ ಕೊಡುಗೆಗಳು ಸಾಕಷ್ಟಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಕೆಲವು ಹನಿಗವನಗಳನ್ನು ನಿದರ್ಶನಾತ್ಮಕವಾಗಿ ವಿಶ್ಲೇಷಿಸಲಾಗಿದೆ.

ಮಾನವ ಭಾವನೆಗಳಿಗೆ ಪ್ರಕೃತಿಯನ್ನು ರೂಪಕವಾಗಿ ಬಳಸಿಕೊಳ್ಳುವುದು ಯಾವುದೇ ಭಾಷೆಯ ಸಾಹಿತ್ಯದಲ್ಲೂ ಸಾಮಾನ್ಯವಾಗಿರುವ ಸಂಗತಿ. ಸೂರ್ಯ, ಚಂದ್ರ, ಹೂವು, ಹಣ್ಣು, ಭೂಮಿ ಹೀಗೆ ಪ್ರಕೃತಿ ಸಂಬಂಧಿತ ಸಂಗತಿಗಳೂ ಕೂಡ ಹನಿಗವಿತೆಗಳಿಗೆ ವಸ್ತುಗಳಾಗಿ ನೂರಾರು ಹೊಸ ಅರ್ಥಗಳನ್ನು ಹೊಳೆಯಿಸುತ್ತವೆ. 'ಸೂರ್ಯ' ಅತಿ ಹೆಚ್ಚು ಬಳಕೆಯಾಗುವ ಒಂದು ಪ್ರತಿಮೆ. ವೈದೇಹಿಯವರ 'ಅಸ್ತಮಾನದ ಕವಿತೆ'ಗಳು ಸೂರ್ಯನ ಮೇಲೆ ಬರೆದಂತಹವುಗಳು.

**ಸೂರ್ಯನಿಗೆ ಜ್ವರ, ಕೆಂಡಾಮಂಡಲ**
**ಮುಟ್ಟುವಂತಿಲ್ಲ-ಮುತ್ತಿಡುವಂತಿಲ್ಲ**
**ಬಂದಿದ್ದಾನೆ ಆದರೂ......**
**ಎಂಥ ನಲ್ಲ! ಈತ। ಪ್ರೀತಿ (ಸ)ಬಲ್ಲ**

**(ಎಲ್ಲರಂಥಲ್ಲ – ಹೂವುಕಟ್ಟುವ ಕಾಯಕ – ಪುಟ ೧೨೨)**

ನಿತ್ಯ ಚಾಚೂ ತಪ್ಪದೆ ನಡೆಯುವ ಸೂರ್ಯೋದಯ, ಅಸ್ತಮಾನಗಳು ಈ ಕವಿಯಲ್ಲಿ ಹುಟ್ಟಿಸಿರುವ ವಿಸ್ಮಯ ಅಪಾರ. ಇಲ್ಲಿ 'ಸೂರ್ಯ' ಕಾಯಕಪ್ರೇಮಿ ಹಾಗೆಯೇ ತನ್ನನ್ನೇ ನಂಬಿರುವ ಜೀವಿಗಳನ್ನು ಪೊರೆಯುವ ಜವಾಬ್ದಾರಿಯನ್ನು ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಿದ್ದಾನೆ.

**ಸಾವಿರದಷ್ಟು ನಡೆದೆ**
**ಸಾಸಿವೆಯಷ್ಟು ನಿಜ ಸುಖದ ಬೆಟ್ಟಕ್ಕೆ**
**ಎಂಬೇನೋ ಸಾಲು ಹುಟ್ಟುತ್ತಿತ್ತು**
**ಅಲ್ಲಿ ಸೂರ್ಯಮ......**
**ನಗುತ ನಿಂತಿದ್ದ!........**

**(ಸೂರ್ಯಮಾ ಅದೇ – ಪುಟ ೧೧೮)**

ಜೀವನ ಪ್ರಯಾಣದಲ್ಲಿ ಏಕತಾನತೆ ಮೂಡಿ, ಜೀವನ ನಶ್ವರ ಎನ್ನುವ ಹತಾಶೆ ಉಂಟಾದಾಗ ಮತ್ತೆ ಜೀವನೋತ್ಸಾಹ ತುಂಬುವ ಚೈತನ್ಯವಾಗಿ, ಪ್ರಾಯೋಗಿಕವಾಗಿ ಚಿಂತನೆ ಮಾಡುವ ತರ್ಕವಾಗಿ ಸೂರ್ಯ ಇಲ್ಲಿ ಬಿಂಬಿತವಾಗುತ್ತಾನೆ. ಬದುಕನ್ನು ಇನ್ನಿಲ್ಲದಂತೆ ಗಂಭೀರವಾಗಿ ಪರಿಗಣಿಸಿಬಿಟ್ಟರೆ ಬದುಕಿನ ಸಹಜ ಸೌಂದರ್ಯ ದೂರವಾಗುತ್ತದೆ ಎಂಬ ಸತ್ಯವೂ ಇದರ ಹಿಂದೆ ಇರಬಹುದು.

**ಆದಿತ್ಯ ಸಚಿತ್ರ**
**ಯಾಕೆ ಬಿಡಿಸುವೆ?**
**ಆತ। ಹೃದಯ**
**(ಸರಳ ಚಿತ್ರ – ಅದೇ – ಪುಟ ೧೧೯)**

ಹೀಗೆ ಸೂರ್ಯ ವೈದೇಹಿ ಅವರ ಭಾವನೆಗಳನ್ನು ಕೆರಳಿಸಿದ್ದರೆ ತಾರಿಣಿ ಶುಭದಾಯಿನಿ ಯವರಿಗೆ 'ಚಂದ್ರ' ಕಾಡುತ್ತಾನೆ. ಅವರ 'ಚಂದ್ರ ಪದ್ಯಗಳು' ಚಂದ್ರನನ್ನು ವಿವಿಧ ಮಗ್ಗುಲುಗಳಲ್ಲಿ ಪರಿಚಯಿಸುವುದು ಹೀಗೆ.

**ಡೈರಿಯ ಕೃಷ್ಣಪ್ಪ ಕೂಡ**
**ಒಮ್ಮೊಮ್ಮೆ ಅಸೂಯೆ ಪಡುತ್ತಾನೆ**
**ಇವನು ಬಾನಿನಲ್ಲಿ ನಡೆಸುವ**
**ಹೈನುಗಾರಿಕೆ**
**(ತೋಡಿರಾಗ – ಪುಟ ೫೭)**

ಪ್ರಕೃತಿಸಹಜವಾಗಿ ಸಂಭವಿಸುವ ಕ್ರಿಯೆಯನ್ನು ಮಾನವನ ದೈನಂದಿನ ಚಟುವಟಿಕೆಗಳಿಗೆ ಹೋಲಿಸಿ ನೋಡುವುದು ಕಾವ್ಯದಲ್ಲಿ ತಾಜಾತನ ಕಾಪಾಡುವ ಒಂದು ತಂತ್ರವಾಗಿ ಕಾಣುತ್ತದೆ.

**ಇಗೋ ನೋಡಿ ಇದೆ । ಬೆಣ್ಣೆ ಮುದ್ದೆ**
**ಸೂರ್ಯ ಬಿಸಿ ತಟ್ಟಿದೊಡನೆ । ಕರಗಿ ಬಿಡುತ್ತದೆ.**
**ಹಿಂದೆ ಹಿಂದೆ ಬರುವ । ಪೋಲಿಹುಡುಗ**
**ಮನೆ ಸೇರಿ ಬಾಗಿಲು । ಹಾಕಿದರು, ಕಿಟಕಿಯಲಿ**
**ಹಣಕುತ್ತಾನೆ, ಕಂಡಿರಾ?**

ಮಹಿಳಾಕಾವ್ಯವೂ ಕೂಡ ತಾಜಾತನಕ್ಕೆ ತನ್ನನ್ನು ತೆರೆದುಕೊಂಡಿರುವ ಬಗೆಗೆ ಈ ಹನಿಗವನಗಳು ನಿದರ್ಶನವಾಗಿವೆ. ಸಾಮಾನ್ಯ ಹೋಲಿಕೆಗಳು ಬರುಬರುತ್ತಾ ಗಂಭೀರ ಹೋಲಿಕೆಗಳಾಗುವುದೂ ಇದೆ. ಇದೇ ಪೋಲಿಹುಡುಗ ಚಂದ್ರ

**ತುಂಬು ಹುಣ್ಣಿಮೆಯಲಿ**
**ಅವನು ಕಮ್ಯುನಿಸ್ಟೋ**
**ಬೌದ್ಧ ಭಿಕ್ಷುವೋ ತಿಳಿಯದು!**

'ಸಮತಾವಾದ'ದ ಕೆಂಪಾಗಿ, ಆಧ್ಯಾತ್ಮಿಕದ ದ್ಯೋತಕವಾಗಿ ಗೋಚರಿಸುವ 'ಚಂದ್ರ' ಈ ಹನಿಗವನದ ಮೂಲಕ ಸಾಮಾನ್ಯ ಸಂಗತಿಯೊಂದು ಗಂಭೀರ ಚಿಂತನೆಗಳನ್ನೂ ಹುಟ್ಟು ಹಾಕಬಲ್ಲದೆಂಬುದು ತಿಳಿಯುತ್ತದೆ. ಇಲ್ಲಿ ಕವಿಮನಸ್ಸಿನಲ್ಲಿ ಉಂಟಾಗಿರುವ ಜಿಜ್ಞಾಸೆ ಪ್ರಕೃತಿ ಎಂದಿಗೂ ತರ್ಕಾತೀತವಾದುದು ಎಂಬ ಸಂದೇಶವನ್ನೂ ಕೂಡ ಒಳಗೊಂಡಿರುವಂತಿದೆ. ವಾದ, ಸಿದ್ಧಾಂತಗಳೆಲ್ಲ ಮಾನವ ಸೃಷ್ಟಿ, ಪ್ರಕೃತಿಗೆ ಸಹಜವಾಗಿರುವುದಷ್ಟೇ ಮುಖ್ಯ ಎಂಬುದೂ ಕೂಡ ಇಲ್ಲಿ ವಿದಿತ. ಕಡಲನ್ನು ಕಂಡು ಬೆರಗಿನಿಂದ ಡಿ.ಬಿ. ರಜಿಯಾ ಪ್ರತಿಕ್ರಿಯೆ ಇದು :

**ಕಡಲೇ ನಿನ್ನ। ಗಾಂಭೀರ್ಯಕ್ಕೆ ಬಾಗಿದ್ದೆ**
**ವಿಸ್ತಾರದ ವಿಸ್ಮಯಕ್ಕೆ। ತಲ್ಲಣಿಸಿ ತಣಿದೆ;**
**ನಿನ್ನೆಗಳುನಾಳೆಗಳಾಗದ। ನೆನಪುಗಳಲ್ಲಿ**
**ಸುಮ್ಮನೆ ನಿಟ್ಟಿಸುವೆ**
**"ನಿತ್ಯ ಹೊಸತನ್ನ" ಸಾರಿದ**
**ವಿಸ್ಮಯಕ್ಕೆ। ವಿಚಲಿತಳಾಗಿ**

**(ಕಡಲು – ರಜಿಯಾ ಅವರ ಕವಿತೆಗಳು – ಪುಟ ೭೭)**

ಪ್ರಕೃತಿಯ ಅಗಾಧ ಶಕ್ತಿಯ ಬಗೆಗೆ ಮಾನವರಿಗೆ ಸದಾ ಒಂದು ಬಗೆಯ ಕುತೂಹಲವೇ. ಹಾಗಾಗಿಯೇ ಪ್ರತಿಸಲ ತಾನು ಪ್ರಕೃತಿಯ ಮುಂದೆ ಬಹಳ ಕುಬ್ಜವಾಗಿರುವಂತೆ ಸಂವೇದನಾಶೀಲ ಮನಸ್ಸು ಭಾವಿಸಿಕೊಳ್ಳುತ್ತದೆ. ಡಾ. ವಿನಯಾ ಅವರು ಅಂತಹ ವಿನಯವನ್ನು ಮೆರೆಯುವುದು ಹೀಗೆ –

**ನಾನಲ್ಲ। ಆಲ, ಬೇಲ, ತೆಂಗು, ಕಂಗು**
**ಮಾವು, ವೀಳೆ, ಬಾಳೆ**
**ನಾನೊಂದು ಹುಲ್ಲುಗರಿಕೆ**

**(ಹನಿಗವನಗಳು – ಬಾಯಾರಿಕೆ – ಪುಟ ೫೩)**

ನಾನು ಏನೇನು ಎಂದು ಪಟ್ಟಿ ಮಾಡುವುದಕ್ಕಿಂತಲೂ, ನಾನು ಏನೇನು ಅಲ್ಲ ಎಂದು ಪಟ್ಟಿ ಮಾಡತೊಡಗಿದರೆ ನಿಜವಾದ ನನ್ನೊಳಗಿನ ನಾನು ಅರ್ಥವಾಗುತ್ತದೆ. ಇಲ್ಲಿ ಹುಲ್ಲುಗರಿಕೆಯೇನೂ ಕನಿಷ್ಠವಲ್ಲ. ಎಂತಹ ವಾತಾವರಣದಲ್ಲಾದರೂ ಬೆಳೆದು ತನ್ನ ಅಸ್ತಿತ್ವ ಉಳಿಸಿಕೊಳ್ಳುವ ಸಾಮರ್ಥ್ಯ ಅದಕ್ಕಿದೆ.

ಪುರುಷಪ್ರಧಾನ ಸಂಸ್ಕೃತಿಯಲ್ಲಿ ಹೆಣ್ಣನ್ನು ಎರಡನೇ ದರ್ಜೆಯ ಪ್ರಜೆಯನ್ನಾಗಿ ರೂಪಿಸಿದ ರೀತಿನೀತಿಗಳನ್ನು ಇನ್ನಿಲ್ಲದಂತೆ ವಿಡಂಬಿಸಲಾಗಿದೆ.

**ಒಂದಾದರೂ ಹಾಡುಕೇಳದ। ಗುನುಗಿಕೊಳ್ಳದ ಕಿವಿ**
**ಹಳೇ ಹುಣ್ಣಿನ ಬಾಯಿ। ಬಚ್ಚಲದ ಗುಣಿ ಎಂದೆಲ್ಲ**

ಬಣ್ಣಿಸಿದ ಬತ್ತೀಸ ಪುತ್ಥಳಿ
ಪ್ರಬಂಧಕರಿಗೆ ಅಳುವೂ। ಸಂಗೀತವೆಂದು ಗೊತ್ತಿರಲಿಕ್ಕಿಲ್ಲ

(ಹನಿಹನಿ – ಕಮಲಾ ಹೆಮ್ಮಿಗೆ – ಪುಟ ೧೨)

ನೋವೆಲ್ಲವೂ ಹಾಡಾದ ಅಥವಾ ಹಾಡೇ ನೋವಾದ ಹೆಣ್ಣಿನ ಸ್ಥಿತಿ ಇದಾದರೆ
ಅತ್ಯಾಚಾರಿಗಳ ಅಟ್ಟಹಾಸದ ಮೊರೆತ
ಹಣವಂತರ ಗುರಿಯಿಟ್ಟ ಬಾಣ
ಅಧಿಕಾರಿಗಳ ಮೆತ್ತೆಯ ಬೀಗು। ಇವುಗಳ ನಡುವೆ
ನಾನು ಕುರೂಪಿಯಾಗದೆ ಹೇಗಿರಲಿ?

(ಹನಿಹನಿ – ಎಸ್. ಮಾಲತಿ ಸಾಗರ – ಪುಟ ೭೦)

ಸಾಮಾಜಿಕವಾಗಿ, ಆರ್ಥಿಕವಾಗಿ ನಡೆಯುವ ಶೋಷಣೆಗಳೇನೋ ಸಹಜವೆನ್ನುವಷ್ಟು ತುಂಬಿಕೊಂಡಿವೆ. ಆದರೆ ಉದ್ಯೋಗವಲಯದಲ್ಲೂ ನಡೆಯುವ ಶೋಷಣೆ ಇನ್ನಷ್ಟು ಹಿಂಸೆ ನೀಡುತ್ತದೆ. ಈ ಎಲ್ಲವುಗಳ ಆತಂಕದಲ್ಲಿ ನಲುಗುತ್ತಿರುವ ಹೆಣ್ಣು ಸಂತೋಷದಿಂದ ಇರುವುದಾದರೂ ಹೇಗೆ? ಹಾಗೆ ಸಂತೋಷವಿಲ್ಲದಿದ್ದಲ್ಲಿ ಸೌಂದರ್ಯ ಗೋಚರಿಸುವುದಾದರೂ ಹೇಗೆ? ಇದೇ ಈ ಕವಿಯ ತರ್ಕ.

ಬಿ.ಟಿ. ಲಲಿತಾನಾಯಕ್ ಅವರ ವಿಡಂಬನೆ

ರಾತ್ರಿ ರಾಣಿಯರೇ। ಇರುಳು ಮಿನುಗಿದ್ದು ಸಾಕು
ನನ್ನ ಹಗಲನ್ನೂ। ಕಸಿದುಕೊಳ್ಳುವ ಹುನ್ನಾರ ಬೇಡ

ಇಲ್ಲಿ 'ರಾತ್ರಿ ರಾಣಿಯರು' ಆಕಾಶದಲ್ಲಿ ಮಿನುಗುವ ನಕ್ಷತ್ರಗಳೂ ಆಗಿರಬಹುದು ಅಥವಾ 'ವೈಶಾವಾಟಿಕೆ' ನಡೆಸುವವರೂ ಆಗಿರಬಹುದು. ಒಂದು ಹೆಣ್ಣಿನ ಜೀವನದಲ್ಲಿ ಪ್ರವೇಶಿಸುವ ಅನ್ಯ ಹೆಣ್ಣುಗಳೂ ಆಗಿರಬಹುದು. ಒಟ್ಟಿನಲ್ಲಿ ಬದುಕಿನಲ್ಲಿ ಅತಂತ್ರತೆ ಕಾಡುವುದು ಹೆಣ್ಣಿಗೆ ಸಹಜವೇನೋ ಅನಿಸುತ್ತದೆ.

ಸೊಸೆ ಮಗನ ಜೊತೆ ಕಿಲಕಿಲ ನಕ್ಕರೆ
ಅತ್ತೆಯ ಎದೆಗೆ ಕಿಚ್ಚಿನ ಬೆಂಕಿ
ಮಗಳು ನಕ್ಕರೆ ಅಳಿಯನ ಜೊತೆ
ಮುತ್ತಿನ ಸರಗಿವಂಕಿ

(ಹನಿಹನಿ – ಶೈಲಜಾ ಉಡಚಣ – ಪುಟ ೧೨೦)

ಇಲ್ಲಿ ಸೊಸೆ ಇನ್ನೊಂದು ಮನೆಯ ಮಗಳೂ, ಮನೆಯ ಮಗಳು ಇನ್ನೊಂದು ಮನೆಯ ಸೊಸೆಯೂ ಆಗಿರುವ ನಡುವೆಯೇ ಸಹಿಸಿಕೊಳ್ಳಬೇಕಾದ ಈ ತಾರತಮ್ಯ ಕುಟುಂಬದಲ್ಲಿನ ವೈಷಮ್ಯವನ್ನು ಹೆಚ್ಚಿಸುತ್ತದೆ. ಸೊಸೆಯಾಗಲಿ, ಮಗಳಾಗಲಿ ವ್ಯಕ್ತಿತ್ವವಾಗಿ ರೂಪುಗೊಳ್ಳುವಾಗ ಎದುರಿಸಬೇಕಾದ ಅಡ್ಡಿ ಆತಂಕಗಳು ಏಕರೂಪದಲ್ಲಿಯೇ ಇರುತ್ತವೆ.

ಅಡಗಿ ಮನಿ ಅವ್ವನ ತಿಂತು
ಅಧಿಕಾರ ಅಪ್ಪನ ತಿಂತು
ಪುಸ್ತಕದ ಹೊರೆ ತಿಂತು ತಮ್ಮನ್ನ
ಮಸ್ತಕ ತಿಂತು ಮನುಷ್ಯನ್ನ

(ಹನಿಹನಿ – ಪುಟ ೧೨೦)

ಅಪ್ಪ, ತಮ್ಮ ಎಲ್ಲರೂ ಒಂದೊಂದು ವಿಷಯದಲ್ಲಿ ಮುಳುಗಿ ಹೋದವರೇ. ಆದರೆ ಅವರ ಆವರಣ ವಿಶಾಲವಾಗಿದೆ. ಆವರಣವೂ ಚಿಕ್ಕದಾಗಿ, ಅವಕಾಶವೂ ಚಿಕ್ಕದಾಗಿ ಉಸಿರುಕಟ್ಟಿಸುವುದು ಅಡುಗೆ ಮನೆ. ಅದು ಮಹಿಳೆಯ ಪಾಲಿನದು ಎಂಬುದೇ ಇಲ್ಲಿನ ವ್ಯಂಗ್ಯ. ವರದಕ್ಷಿಣೆ ಎಂಬ ಸಾಮಾಜಿಕ ಪಿಡುಗು ನಿತ್ಯ ಬಲಿ ತೆಗೆದುಕೊಳ್ಳುತ್ತಿರುವ ಅಸಂಖ್ಯ ಹೆಣ್ಣುಗಳ ಚಿತ್ರಣವನ್ನು ಶಶಿಕಲಾ ವೀರಯ್ಯಸ್ವಾಮಿ ಕಟ್ಟಿಕೊಡುವುದು ಹೀಗೆ –

"ಅವ್ವಾ ಅವ್ವಾ ಗೆಣಸ। ಕುಳ್ಳಾಗ ಹಾಕಿ ಕುದಸ
ಕರಿಸೀರಿ ಉಡಸ। ಗಂಡನ ಮನೀಗಿ ಕಳಸ" ಅಂತ
ಕುಣಕೊಂತ ಅತ್ತಿ ಮನಿಗಿ ಹೋದ ಹುಡುಗಿನ್ನ
ಹೊತ್ತು ಮುಳುಗುದರಾಗ। ಗೆಣಸಸುಟ್ಟಂಗ ಸುಟ್ಟಬಿಟ್ರು

(ವರದಕ್ಷಿಣೆ – ಹನಿಹನಿ – ಪುಟ ೧೧೨)

ಹೆಣ್ಣಿನ ಬಯಕೆ, ಅಷ್ಟೇ ತೀವ್ರವಾಗಿ ಉಂಟಾಗುವ ನಿರಾಶೆಯನ್ನು ಕವನ ಕೇವಲ ನಾಲ್ಕು ಸಾಲುಗಳಲ್ಲಿ ಹೇಳುವುದರಿಂದ ಪರಿಣಾಮ ಕೂಡ ತೀಕ್ಷ್ಣವಾಗಿಯೇ ಉಂಟಾಗುತ್ತದೆ.

ಸುಟ್ಟ ಗೆಣಸಿನ ರೂಪಕ ಸುಟ್ಟ ಹೆಣ್ಣಿನ ರೂಪಕವೂ ಆಗಿ ಕಾವ್ಯಸೌಂದರ್ಯವನ್ನು ಹೆಚ್ಚಿಸಿದೆ. ಪುರುಷಪ್ರಧಾನತೆ, ಆ ಹಿನ್ನೆಲೆಯಲ್ಲಿ ಆತ ನಟಿಸುವ ಸೋಗಲಾಡಿತನವನ್ನು ಸ್ತ್ರೀಪರ ಕಾಳಜಿಯನ್ನು ತೀಕ್ಷ್ಣವಾದ ಮಾತುಗಳಲ್ಲಿ ಅಣಕಿಸುವುದು ವಿಜಯಾದಬ್ಬೆಯವರ ಹನಿಗವನಗಳು.

ಕಚೇರಿಯಲ್ಲೊಬ್ಬಳು ವಿವಾಹಿತೆ
ಪರಪುರುಷನೊಡನೆ ಸಲ್ಲಾಪವಾಡಿದಳಂತೆ
ನಿರ್ದೇಶಕರು ಕೇಳಿದರು; 'ಇದು ಸರಿಯೇನ್ರಿ?'
ಅದೇ ಕಚೇರಿಯಲ್ಲಿ ಸರ್ವಪಲ್ಲಿಯವರ
ಮುಕ್ತ ಲೈಂಗಿಕತೆಯ ಚರ್ಚೆಯಲ್ಲಿ
ಅದೇ ನಿರ್ದೇಶಕರು ಹೇಳಿದರು; 'ಅದು ಮೋರ್‌ಹ್ಯೂಮನ್'

(ನಿರ್ದೇಶಕ ಉವಾಚ – ಹನಿಹನಿ – ಪುಟ ೯೧)

ಬುದ್ಧಿಜೀವಿಗಳೆಂದು ಹೇಳಿಕೊಳ್ಳುತ್ತಾ ಸಾರ್ವಜನಿಕವಾಗಿ ದೊಡ್ಡದೊಡ್ಡ ಸುಧಾರಣೆಯ ಮಾತುಗಳನ್ನಾಡುವವರ ನೈಜತೆ ವಾಸ್ತವದಲ್ಲಿ ಹಾಗಿಲ್ಲದಿರುವುದನ್ನು ಕವಿತೆ ಕೆಲವೇ ಸಾಲುಗಳಲ್ಲಿ

ಕಟ್ಟಿಕೊಡುತ್ತದೆ. ಹೆಣ್ಣಿನ ಜೀವನ ಸದ್ದಿಲ್ಲದೆ ಕರಗಿಹೋಗುವ ಕುರಿತು ಈ ಕವಿಗೆ ತೀವ್ರವಾದ ವಿಷಾದವಿದೆ.

> **ಕುದಿಯುತ್ತಾಳೆ ಅನ್ನದ ಜೊತೆಗೆ**
> **ಬೇಯುತ್ತಾಳೆ ಬೇಯಿಸುತ್ತಲೇ**
> **ಹೆಚ್ಚಿಕೊಳ್ಳುತ್ತಾಳೆ ಹೆಚ್ಚುತ್ತಲೇ**
> **ಖಾಲಿಯಾಗುತ್ತಾಳೆ ಖಾಲಿ ಪಾತ್ರೆಯ ಜೊತೆಗೆ**
> **ಮಸಿಯಾಗುತ್ತಾಳೆ ಮಸಿಯ ಜೊತೆಗೆ**
> **ಬೂದಿಯಾಗುತ್ತಾಳೆ ಬೂದಿಯ ಜೊತೆ। ನಮ್ಮ ಅನ್ನಪೂರ್ಣೆ**
> **(ಅನ್ನಪೂರ್ಣೆ – ಹನಿಹನಿ – ಪುಟ ೯೧)**

ಈ ಕವನದ ಪ್ರಾರಂಭದಲ್ಲಿರುವ ಕ್ರಿಯಾಪದಗಳೆಲ್ಲವೂ ಅಡುಗೆ ಮನೆಯ ಕೆಲಸದಲ್ಲಿ ಬಳಕೆಯಾಗುವಂತಹವು. ಯಾವ ಕ್ರಿಯೆಯನ್ನು ತಾನು ಪೂರೈಸುತ್ತಾಳೋ ಅದೆಲ್ಲರ ಅನ್ವರ್ಥವಾಗಿ ಹೆಣ್ಣಿನ ವ್ಯಕ್ತಿತ್ವವೂ ಅಸ್ತಿತ್ವವಿಲ್ಲದಂತಾಗುವುದನ್ನು ಕವಿತೆ ಧ್ವನಿಸುತ್ತದೆ. ಕುದಿಯುವುದು, ಬೇಯುವುದು, ಹೆಚ್ಚಿಕೊಳ್ಳುವುದು, ಖಾಲಿಯಾಗುವುದು... ಶಾಂತ ಮನಸ್ಥಿತಿ ಹೀಗಿರುವುದಿಲ್ಲ. ಹಾಗಾದರೆ ಮನಸ್ಸಿನ ಈ ತಲ್ಲಣಗಳ ಹಿಂದಿನ ಕಾರಣಗಳೆಲ್ಲಿ ಎಂದು ಹುಡುಕುವುದಾದರೆ ಅಡುಗೆ ಮನೆಯ ಹೊರಗಿನ ಕ್ರಿಯೆಗಳಿಂದ ದತ್ತವಾಗುವಂತಹವು. ಇಲ್ಲಿ 'ಅನ್ನಪೂರ್ಣೆ ವ್ಯಂಗ್ಯವಾಗಿ ಬಳಕೆಯಾದಂತಿದೆ. ಹೆಣ್ಣೆಂಬ ಕಾರಣಕ್ಕೆ ಒಂದಲ್ಲಾ ಒಂದು ಬಗೆಯಲ್ಲಿ ಅನ್ಯದೃಷ್ಟಿಗಳನ್ನು ಎದುರಿಸಬೇಕಾದ ಅನಿವಾರ್ಯತೆ ಹೆಣ್ಣಿಗೆ ಒದಗಿಬಿಡುತ್ತದೆ. ಅದಕ್ಕೇ ಹೊರಗಿನ ವಸ್ತುಗಳೆಲ್ಲವೂ ತನ್ನನ್ನೇ ಅಣಕಿಸಿದಂತಹ ಅನುಭವ ಕಮಲಾ ಹೆಮ್ಮಿಗೆಯವರದು.

> **ಯಾಕೆ ಹೀಗೆ। ಹಾಡೇ ಹಗಲು। ಸಮುದ್ರದ ತಡಿ**
> **ಚಲ್ಲಾಪಿಲ್ಲಿ ಬಿದ್ದ ರಾಶಿ ಕಪ್ಪೆ ಚಿಪ್ಪು**
> **ಮನುಷ್ಯರ ಕಣ್ಣುಗಳಾಗಿ ಕಾಡಿವೆ?**
> **(ಹನಿಹನಿ – ಪುಟ ೧೨)**

'ಕಾಮಾಲೆ ಕಣ್ಣಿಗೆ ಲೋಕವೆಲ್ಲಾ ಹಸಿರು' ಎನ್ನುವಂತೆ ಈಗಾಗಲೇ ಭಾವನಾತ್ಮಕವಾಗಿ ಒಂದು ಬಗೆಯ ಮುಜುಗರಕ್ಕೊಳಗಾದ ಮನಸು ಅದರಿಂದ ಹೊರಬರಲಾರದೆ, ಕಂಡದ್ದೆಲ್ಲ ಕಹಿಯಾಗಿರುವಂತೆ ಭಾವಿಸುತ್ತದೆ. ಆದರೆ ಎಲ್ಲ ಕಾಲಕ್ಕೂ ಹೆಣ್ಣು ಇದೇ ಮನಸ್ಥಿತಿಯಲ್ಲಿ ಮುಂದುವರಿಯುವವಳಲ್ಲ. ಆಧುನಿಕ ಹೆಣ್ಣು ಸಿಡಿಯುವವಳು. ಆತ್ಮವಿಶ್ವಾಸ ಹೊಂದಿರುವವಳು. ಎಸ್. ಮಾಲತಿಯವರ ಕವನ ನೀಡುವ ಉತ್ತರ:

> **ಆತ್ಮಹತ್ಯೆಯ ಸಮ್ಮುಖದಲ್ಲಿ। ನೀ ತಂದು ನಿಲ್ಲಿಸಿದಾಗಲೇ**
> **ನಾ ಸಿಡಿದು ಬದುಕಿನೊಳಹೊಕ್ಕಿದ್ದು**
> **(ಹನಿಹನಿ – ಪುಟ ೭೧)**

ವೈರುಧ್ಯವನ್ನು ಪರವಾಗಿ, ವರವಾಗಿ ಮಾಡಿಕೊಂಡಿರುವ ಆತ್ಮವಿಶ್ವಾಸ ಕವನದಲ್ಲಿ ಕಾಣುತ್ತದೆ.

ಪ್ರೀತಿ, ಪ್ರೇಮ, ಪ್ರಣಯದ ಸಂಗತಿಗಳು ಹನಿಗವನಗಳಲ್ಲಿ ಹೆಚ್ಚಾಗಿ ಮೂಡಿಬಂದಿವೆ. ಕೆಲವೇ ಪದಗಳಲ್ಲಿ, ಸಾಲುಗಳಲ್ಲಿರುವ ಕವನಗಳು ಓದುಗರಿಗೆ ಮುದ ನೀಡುವ ರಚನೆಗಳಾಗಿವೆ.

**ನೀನು ನನಗೆ ಎಷ್ಟೊಂದು ಬೇಕೆಂದರೆ...**

**ನಾನು ನಿನಗೆ ಹೇಳುವುದಿಲ್ಲ**

**ಕಳೆದುಹೋಗುವ ಭಯ ನನಗೆ**

**(ಎಸ್. ಮಾಲತಿ – ಹನಿಹನಿ – ಪುಟ ೭೧)**

ಯಾವುದೇ ವಿಶೇಷ ವರ್ಣನೆಗಳಿಲ್ಲದ 'ಪ್ರೇಮವನ್ನು' ಅದರ 'ನೈಜ' ನೆಲೆಯಲ್ಲಿ ಅಷ್ಟೇ ಸಹಜವಾಗಿ ಈ ಕವನ ನಿವೇದಿಸಿಕೊಳ್ಳುತ್ತದೆ. ಇದನ್ನೇ ರೂಪಕದಲ್ಲಿ ಹಿಡಿದಿದ್ದಾರೆ. ರಜಿಯಾ ಅವರು

**ಕಣ್ಣ ದೀವಿಗೆಯಲ್ಲಿ। ನೀ ಹೊತ್ತಿಸಿದ**

**ದೀಪ ದೂರದ ಹಾದಿಯವರೆಗೂ**

**ಬೆಳಕಾಗಿ ನಡೆಸೀತು**

**(ದೀವಟಿಗೆ – ಹನಿಹನಿ – ಪುಟ ೭೫)**

ಪ್ರೀತಿಗಿರುವ ಶಕ್ತಿಯನ್ನು ಅದು ನೀಡುವ ಚೈತನ್ಯವನ್ನು ಕವನ ಧ್ವನಿಸುತ್ತಿದ್ದರೆ, ಈ ಪ್ರೀತಿ ನೀಡಿದ ಜೀವಕ್ಕೆ ಋಣಿಯಾಗಿರುತ್ತೇನೆ ಎಂದು ಇನ್ನೊಂದು ಕವನದ ಮೂಲಕ ಹೇಳಲಾಗಿದೆ.

**ಕಬ್ಬಿಣದಂಥ ಮನಸ್ಸಿಗೂ। ಪ್ರೀತಿಯ ಕುಲುಮೆಯಲ್ಲಿ**

**ಆಕಾರ ಕೊಟ್ಟ। ನಿನ್ನ ಚಮತ್ಕಾರಕ್ಕೆ**

**ನಾ ಚಿರಋಣಿ (ನಿಪುಣ – ಹನಿಹನಿ – ಪುಟ ೭೬)**

ಇಲ್ಲಿ ಪ್ರೀತಿಯಲ್ಲಿ ಬೀಳದ ಮನಸ್ಸನ್ನು ಕಬ್ಬಿಣಕ್ಕೆ ಹೋಲಿಸಿ ಸರಳವಾದ ಒಂದು ಉಪಮೆಯನ್ನು ಸೃಷ್ಟಿಸಲಾಗಿದೆ.

ಶಶಿಕಲಾ ವೀರಯ್ಯಸ್ವಾಮಿಯವರು ಜನಪದ ಸೊಗಡಿನಲ್ಲಿ ಪ್ರೀತಿಯನ್ನು ಹನಿಗವನದ ಮೂಲಕ ವ್ಯಕ್ತಪಡಿಸಿದ್ದಾರೆ.

**ಚನ್ನೀ;**

**ನಂದು ನಿಂದು ಪ್ರೀತೆಂದ್ರ ಹಿಂಗ**

**ಅಡಕಲ ಗಡಗೀ ಖೋಲ್ಯಾಗ**

**ಸಾರ್ಸಿದ ನೆಲದ ಮೂಲ್ಯಾಗ**

**ಸಣ್ಣಗ ಪಣತಿ ಉರದಂಗ**

**(ಹನಿಹನಿ – ಪುಟ ೧೦೨)**

ಸಣ್ಣದೀಪದ ಉಪಮೆ ಪ್ರೀತಿಯನ್ನು ಅದರ ಜೀವಂತಿಕೆ ಹಾಗೂ ಮಹತ್ವದ ಹಿನ್ನೆಲೆಯಲ್ಲಿ ವಿವರಿಸುವಲ್ಲಿ ಸೂಕ್ತವಾಗಿದೆ. ಇದು ಸಾರಿಸಿದ ಮನಸ್ಸಿನ ಮೂಲೆಯಲ್ಲಿರುವ ಹಣತೆಯಾಗಿರುವುದರಿಂದ, ಮನಸ್ಸಿನಲ್ಲಿ ಕೊಳಕು ತುಂಬಿಕೊಂಡಾಗ ಪ್ರೀತಿ ಹುಟ್ಟಲು ಸಾಧ್ಯವಿಲ್ಲ. ಅದು ಶುಭ್ರವಾದ ಮನಸ್ಸಿನಲ್ಲಿ, ಅದರಲ್ಲೂ ಮೂಲೆಯಲ್ಲಿ ಹುಟ್ಟುವಂತಹುದು. ಇಲ್ಲಿ ಮೂಲೆ ಒಳಮನಸ್ಸನ್ನು ಸಂಕೇತಿಸುತ್ತದೆ. ಪ್ರೀತಿಯ ಭರ ಕೆಲವೊಮ್ಮೆ ತೀಕ್ಷ್ಣವಾಗಿದ್ದು, ಜರ್ರನೆ ಇಳಿದು ಹೋಗುವ ಅನುಭವವೂ ಲತಾ ರಾಜಶೇಖರ್ ಅವರ ಕವನದಲ್ಲಿದೆ.

**ಒಲವಿನ ಮಹಾಪೂರದಲಿ**
**ಕೈ ಹಿಡಿದು ತೇಲುತ್ತಾ ಸಾಗುತ್ತಿದ್ದ**
**ಜೋಡಿ ಪ್ರವಾಹವಿಳಿದಾಗ**
**ಎದುರು ಬದುರು ದಡದಲ್ಲಿ। ನಿಂತಿದ್ದರು**

**(ಪ್ರವಾಹವಿಳಿದಾಗ – ಹನಿಹನಿ – ಪುಟ ೮೫)**

ಇದು ಪರಸ್ಪರ ದೈಹಿಕ ಆಕರ್ಷಣೆಯಿಂದ ಒಂದಾದ ಪ್ರೀತಿಯೇ ಹೊರತು, ಮನಸು–ಮನಸುಗಳು ಒಂದಾಗಿ ಬೆಸೆದ ನೈಜ ಪ್ರೀತಿಯಲ್ಲ. ಹಾಗೊಂದು ವೇಳೆ ಆ ರೀತಿಯ ತಾದಾತ್ಮ್ಯತೆ ಪ್ರೀತಿಯಲ್ಲಿದ್ದರೆ ಅದು ಕ್ಷಮಿಸುವ ಔದಾರ್ಯತೆಯನ್ನೂ ಹೊಂದಿರುತ್ತದೆ.

**ಅಮವಾಸ್ಯೆ!**
**ನಿರಾಕಾರಿಗಳೀರ್ವರು**
**ಅವನು ಆರ್ತನಾಗಿ। ಮಾಡದ ತಪ್ಪಿಗೆ ಕೋರಿದ ಕ್ಷಮೆ**
**ಆಕೆ ಮನಸ್ಸಿಲ್ಲದಿದ್ದರೂ ಕ್ಷಮಿಸಿ ಎದೆಗಪ್ಪಿಸಿದಳು**

**(ಕಮಲಾ ಹೆಮ್ಮಿಗೆ – ಹನಿಹನಿ – ಪುಟ ೧೨)**

ಹೀಗೆ ಪ್ರೀತಿಯಲ್ಲಿ ಪರಸ್ಪರ ಸೋಲೊಪ್ಪಿಕೊಳ್ಳುವ, ಸ್ವೀಕರಿಸುವ ಗುಣಗಳೆರಡೂ ಇರುತ್ತವೆ ಎಂಬುದನ್ನು ಕವನ ಸಂಕೇತಿಸುತ್ತದೆ. ಪ್ರೀತಿ ಹೆಚ್ಚಾದಂತೆ ಪ್ರೀತಿಸಿದವರನ್ನು ದೂರವಿಡುವುದೂ ಮನಸ್ಸಿಗೆ ಕಷ್ಟವೆ! ಮನಸ್ಸಿನ ಈ ವಿರಹವನ್ನೂ ಕೂಡ ಕವನಗಳಲ್ಲಿ ಹಿಡಿದಿಡಲಾಗಿದೆ.

**ತಣ್ಣನೆಯ ರಾತ್ರಿ। ನೀರವ ಸಂಜೆ**
**ಬಿಕೋ ಎಂಬ ಮಧ್ಯಾಹ್ನ**
**ಖೋಲಿಯ ಮೂಲೆ। ಟೇಬಲ್ಲಿನ ಮೇಲೆ**
**ಇನ್ನಾರದೋ ದುಃಖ ಹೇಳುವ ಕವಿತೆ**

ದಿನದ ಎಲ್ಲಾ ಸಮಯ ಖಾಲಿ ಖಾಲಿ ಎನ್ನಿಸಬೇಕಾದರೆ ಮನಸ್ಸಿಗೆ ಮುದ ನೀಡುವ ಪ್ರೀತಿ ಇಲ್ಲದಿರುವುದೇ ಕಾರಣವಾಗಿರಬಹುದು, ಪ್ರೀತಿಸುವವರು ಜೊತೆಗಿದ್ದಾಗ ಬದುಕು ವರ್ಣಮಯವಾಗಿರುತ್ತದೆ. ಅವರಿಲ್ಲದಿದ್ದಾಗ ಬಿಕೋ ಎನ್ನುತ್ತದೆ. ಇದನ್ನೇ ಮಾಲತಿ ಸಾಗರ ಅವರು ಹೇಳುವುದೂ ಹೀಗೆ:

**ಕಾಮನಬಿಲ್ಲಿನ ಬಣ್ಣವ ತೊಟ್ಟೆ**

**ನೀನು ಜೊತೆಗಿದ್ದಾಗ**

**ಬಣ್ಣಗಳ ನುಂಗಿ ಶಾಂತವಾಗಿರುವ**

**ಬಿಳಿಯೋ ಸಾಕೆನ್ನಿಸಿದೆ ನನಗೀಗ**

**(ಹನಿಹನಿ – ಪುಟ ೭೦)**

ಇದು ಒಂದಾದ ಮನಸ್ಸುಗಳ ಹರ್ಷ ಹಾಗೂ ಅವೇ ಮನಸ್ಸುಗಳು ದೂರವಾದಾಗ ಕಾಡುವ ಬೇಸರವಾದರೆ ಒಂದೇ ಸೂರಿನಲ್ಲಿದ್ದೂ ಒಂದಾಗದ ಮನಸ್ಸುಗಳು ಈ ಪರಿ ಗೋಚರಿಸುತ್ತವೆ.

**ಒಂದೇ ಸೂರಿನಡಿ। ಒಂದಾಗದ**

**ಮನಸು, ವಿಚಾರ। ಒಡೆದ ಕನ್ನಡಿಯಂತೆ**

**ಹೊಂದಿಸಿಟ್ಟಷ್ಟೂ। ವಿಕಾರ**

**(ಒಡಕು – ಹನಿಹನಿ – ಡಿ.ಬಿ. ರಜಿಯಾ – ಪುಟ ೭೫)**

ಇಲ್ಲಿ ಒಡೆದ ಕನ್ನಡಿಯ ಉಪಮೆ ಹಳೆಯದಾದರೂ ಅದು ಪ್ರತಿನಿಧಿಸುತ್ತಿರುವ ವಿಷಯ ಸತ್ಯವಾಗಿರುವುದರಿಂದ ಕವನದ ಪ್ರಾಮುಖ್ಯತೆ ಹೆಚ್ಚಾಗುತ್ತದೆ. ಹೆಣ್ಣಿನ ಮೇಲೆ ಗಂಡು ನಡೆಸುವ ಆಕ್ರಮಣವನ್ನು ಡಾ. ವಿನಯಾ ಅವರ ಕವನ ಹೀಗೆ ಹೇಳುತ್ತದೆ.

**ಬಸಿರಲ್ಲೇ ಬೀಜ ಕೊಳೆಯುವುದು**

**ಅಂದರೇನೆಂದು**

**ಭೂಮಿಗೆ ಮಾತ್ರ ಗೊತ್ತು**

**ಗೊತ್ತಿದ್ದರೆ,**

**ಆಕಾಶ ಹೀಗೆ। ನೀರನ್ನೆಲ್ಲ ಸುರಿದು**

**ನಿರುಮ್ಮಳವಾಗಿ ಕವಚಿಕೊಳ್ಳುತ್ತಿರಲಿಲ್ಲ.**

**(ಹನಿಗವನಗಳು – ಬಾಯಾರಿಕೆ – ಪುಟ ೫೩)**

ಇಲ್ಲಿ ಭೂಮಿ-ಆಕಾಶಗಳು ಹೆಣ್ಣು-ಗಂಡುಗಳನ್ನು ಪ್ರತಿನಿಧಿಸುತ್ತಿದ್ದು ಗಂಡಿನ ನಿರುಮ್ಮಳತೆ, ಹೆಣ್ಣಿನ ಆತಂಕ, ಸಮಸ್ಯೆಗಳನ್ನು ಕವನ ಸೂಚಿಸುತ್ತದೆ. ಮಹಿಳಾ ಕಾವ್ಯ ಹನಿಗವನಗಳ ಮೂಲಕ ಕೇವಲ ಗಂಡು-ಹೆಣ್ಣುಗಳ ಪ್ರೀತಿ-ದ್ವೇಷಗಳಲ್ಲಿಯೇ ಮುಳುಗಿಹೋಗದೆ ಹಾಸ್ಯ ಹಾಗೂ ಸಾಮಾಜಿಕ ಸಂಗತಿಗಳತ್ತ ಕೂಡ ನೋಟ ಹರಿಸಿದೆ. ಶಶಿಕಲಾ ವೀರಯ್ಯಸ್ವಾಮಿಯವರು ಮಾಡುವ ಕೌಟುಂಬಿಕ ಹಾಸ್ಯ ಹೀಗಿದೆ.

**"ಆರ್ಯಪುತ್ರಾ"**

**"ಏನು ಪ್ರಾಣೇಶ್ವರಿ?"**

**ನೀವೀಗ ಮುದ್ದಿಡ್ತಾ ಇರೋದು**

**ದಿಂಬಿನ ಅಂಚಿಗೆ**

**"ಹೌದಾ? ಹಾಗಾದರೆ ನನ್ನ ಚಾಳೀಸೆಲ್ಲಿ?"**

**(ಚಾಳೀಸು – ಹನಿಹನಿ – ಪುಟ ೧೧೨)**

ಈ ಕವನ ಮೇಲ್ನೋಟಕ್ಕೆ ವಿನೋದವಾಗಿ ಗೋಚರಿಸುತ್ತಿದ್ದರೂ, ಬಾಹ್ಯ ಕಣ್ಣು ಕಾಣದಿದ್ದ ಮಾತ್ರಕ್ಕೆ ಅಂತರಂಗದ ಕಣ್ಣುಗಳೂ ಮುಚ್ಚಿ ಹೋಗಿರುತ್ತವೆಯೇ ಎಂಬ ಪ್ರಶ್ನೆಯನ್ನೂ ಹುಟ್ಟುಹಾಕುತ್ತದೆ. ಆಧುನಿಕ ಕಾಲದಲ್ಲಿ ಸಾಹಿತ್ಯ ಮುಂತಾದ ವಿಷಯಗಳ ಮೇಲಿನ ಗೋಷ್ಠಿಗಳು ವ್ಯಾವಹಾರಿಕವಾಗಿರುವ ಕುರಿತು ಡಿ.ಬಿ. ರಜಿಯಾ ಅವರ ವ್ಯಂಗ್ಯ ಹೀಗಿದೆ.

**ವೇದಿಕೆಯಲ್ಲಿ ಗೋಷ್ಠಿ....**

**ಆಲಿಸುತ್ತಿದದ್ದು ಖಾಲಿ ಖುರ್ಚಿ;**

**ಚಿಂತಿಸುತ್ತಿದದ್ದು ಮನೆಮಕ್ಕಳು**

**ಭತ್ಯೆ-ರಜೆ ಇತರೆ**

**ಈಗೀಗಿನ ಗೋಷ್ಠಿ**

**ತುಂಡು-ಗುಂಡು-ಭಂಡು**

**(ಗೋಷ್ಠಿ – ರಜಿಯಾ ಅವರ ಕವಿತೆಗಳು – ಪುಟ ೮೦)**

ಸಾಮಾಜಿಕವಾಗಿ, ಸಾಹಿತ್ಯಕವಾಗಿ ಚಿಂತನೆ ನಡೆಸುವ ಸ್ಥಳದಲ್ಲಿ ವೈಯಕ್ತಿಕ ಕಾಳಜಿಗಳೇ ಹೆಚ್ಚಾಗಿ ತೋರುತ್ತಿರುವುದು ಗೋಷ್ಠಿಗಳ ಮಹತ್ವವನ್ನು ಅರಿಯದೆ, ಆರ್ಥಿಕ ಮಹತ್ವಗಳಿಗೆ ಹೆಚ್ಚಿನ ಮನ್ನಣೆ ದೊರೆಯುತ್ತಿರುವುದರ ಸಂಕೇತವಾಗಿದೆ. ಜ್ಯೋತಿ ಗುರುಪ್ರಸಾದ್ ಅವರು ಹನಿಗವನವೊಂದರಲ್ಲಿ ದ್ವಂದ್ವಾರ್ಥ ಸ್ಫುರಿಸುವುದು ಹೀಗೆ.

**ಸ.ರಿ.ಗ.ಮ.ಪ.ದ.ನಿ.**

**ಏಳು ಸ್ವರಗಳಲ್ಲಿ ನೀ ತುಂಬಿ**

**ಸಂಗೀತವಾಯಿತು.**

**ಲೇಖನಿಯಲ್ಲಿ ನೀ ತುಂಬಿ**

**ಅಕ್ಷರವಾಯಿತು**

**ಕಣ್ಣಿನಲಿ ನೀ ತುಂಬಿ। ತೇಜಸ್ಸಾಯಿತು**

**ಶೂನ್ಯದಲ್ಲಿ ನೀ ತುಂಬಿ। ಪ್ರಾಣವಾಯಿತು**

**ನನ್ನೊಳಗೆ ನೀ। ತುಂಬಿಯಾಯಿತು**

**('ನೀ' – ಚುಕ್ಕಿ – ಪುಟ ೫೪)**

'ನಿ' ಒಂದು ಸ್ವರವಾಗಿ ಬೀರುವ ಪರಿಣಾಮ ಒಂದು ಕಡೆಯಾದರೆ, 'ನೀ' ಒಲಿದ ಜೀವವಾಗಿ ಉಂಟುಮಾಡುವ ಪರಿಣಾಮ ಇನ್ನೊಂದು ಬಗೆಯದು. ನನ್ನೊಳಗೆ 'ನೀ' ತುಂಬಿಯಾಯಿತು ಎನ್ನುವಲ್ಲಿಯೂ ಕೂಡ ಶ್ಲೇಷೆ ಗೋಚರಿಸುತ್ತದೆ. ತುಂಬಿಯಾದ 'ನೀ' ದುಂಬಿಯಾಗಿ ನಿರೂಪಕಿಯನ್ನು ಕಾಡುತ್ತಿದ್ದರೆ ಜೀವನದಲ್ಲಿ ಹೊಸ ಹೊಸ ಸ್ವರಗಳು ಹುಟ್ಟಿಕೊಳ್ಳುವ ಸಾಧ್ಯತೆಯೂ ಇದೆ. ಅಧ್ಯಾತ್ಮದ ಸಂಗತಿಗಳತ್ತಲೂ ಹನಿಗವನದ ಗಮನ ಹರಿದಿರುವುದನ್ನು ವೈದೇಹಿಯವರ ಕವನದಲ್ಲಿ ಕಾಣಬಹುದು.

ದೇಹ ದೇಗುಲದಲ್ಲಿ ದೀಪ ಉರಿಸಿಟ್ಟು
ಎಣ್ಣೆ ತೀರದ ಹಾಗೆ ಒಂದು ಕಣ್ಣಿಟ್ಟು
ಮುಂದೊತ್ತಿ ಬತ್ತಿ ನಿಂತಿರುವೆ ನೋಡಿಲ್ಲಿ
ಹಗಲು ರಾತ್ರಿಯ ಮುಚ್ಚಾಲೆ ದಿನನಿತ್ಯ
ಉಸಿರು ಉಯ್ಯಾಲೆಯಲಿ ಆಡುತಾಡುತ್ತಾ
ಕರೆಯುತಿದೆ ಹಂಸ ಎನ್ನನು

(ಉಸಿರ ಉಯ್ಯಾಲೆ – ಹೂವಕಟ್ಟುವ ಕಾಯಕ – ಪುಟ ೧೧೩)

ಓದುತ್ತಿದ್ದಂತೆ ತತ್ವಪದದ ಅನುಭವ ನೀಡುವ ಈ ಕವನ ದೇಹ, ಆತ್ಮ, ಉಸಿರು, ಆಯುಷ್ಯ ಮುಂತಾದ ಜೀವನಸಂಬಂಧಿ ರೂಪಕಗಳನ್ನು ನೀಡುತ್ತಿದೆ. ರೂಪ ಹಾಸನ ಅವರ "ಗಳಿಗೆ ಬಟ್ಟಲ ತಿರುವುಗಳಲ್ಲಿ' ಸಂಕಲನವು ಹನಿಗವನಗಳು ಅಥವಾ ಕಿರುಕವಿತೆಗಳಿಂದ ಕೂಡಿದೆ. ಹಸಿವು ಮತ್ತೂ ರೊಟ್ಟಿಗಳೆಂಬ ರೂಪಕಗಳಲ್ಲಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ರಾಜಕಾರಣವನ್ನು ಅವುಗಳ ಕರ್ಷಣೆ, ಘರ್ಷಣೆ, ಪ್ರೀತಿ–ಸಾಮರಸ್ಯ, ದ್ವಯ–ಅದ್ವಯಗಳ ನೆಲೆಯಲ್ಲಿ ವಿವರಿಸಿದ್ದಾರೆ. ಹೆಣ್ಣು–ಗಂಡುಗಳ ಆಕರ್ಷಣೆ–ವಿಕರ್ಷಣೆಗಳನ್ನೂ ಸಹ ಕಟ್ಟಿಕೊಡಲಾಗಿದೆ.

ಒಂದಿಷ್ಟು ಬೆರಗು
ಕುತೂಹಲ ಮುಗ್ಧತೆಯಲಿ
ಮಿಡಿಯುವ ರೊಟ್ಟಿ
ಆರ್ದ್ರತೆಯಲಿ ಸದಾ ಜೀವಂತ
ಹಸಿವು ತನ್ನೊಳಗಿನ
ತೀಕ್ಷ್ಣತೆಯಿಂದಲೇ ಅಸ್ವಸ್ಥ

(ಪುಟ ೩೮)

ರೊಟ್ಟಿಯ ಭಾವಲೋಕದೊಳಗೆ
ಹಸಿವೆಗೆ ಪ್ರವೇಶ ಸಿಕ್ಕಿಲ್ಲ
ಅಸೂಕ್ಷ್ಮ ಹಸಿವೆಗೆ
ಮಣ್ಣನಲುಗಿಸುವ ಮೊಳಕೆಯ
ಸೂಕ್ಷ್ಮತೆ ಇನ್ನೂ ಅರ್ಥವಾಗಿಲ್ಲ

(ಪುಟ ៥೧)

ಹೀಗೆ ರೊಟ್ಟಿ–ಹಸಿವುಗಳ ವಿಭಿನ್ನ ಅವಸ್ಥಾಂತರಗಳನ್ನು ಕವನ ಸಂಕಲನ ಒಳಗೊಂಡಿದೆ. ಜ.ನಾ. ತೇಜಶ್ರೀಯವರು ತಮ್ಮ 'ಉಸ್ರುಬುಂಡೆ' ಕವನ ಸಂಕನಲದಲ್ಲಿ 'ಇರುಳ ಪದ್ಯಗಳು' ಎಂಬ ಕಿರುಗವಿತೆಗಳ ಗುಚ್ಛವನ್ನು ಹೆಣೆದಿದ್ದಾರೆ. ಪ್ರೇಮ, ಅನುರಾಗದ ಪರಾಕಾಷ್ಠೆಯನ್ನು ಈ ಕವನಗಳು ವಿವರಿಸುತ್ತವೆ.

**ಏ ಗಾಳಿ। ಹೋಗು ಸವರಿ ಬಾ**
**ನನ್ನವನ ಕೆನ್ನೆಗಳ ಮೇಲೆ**
**ಪಟಗುಡುವ ಬಣ್ಣಗಳನ್ನು। ಹೋಗು**
**ನಿನ್ನ ಕೈಗಳಿಗೆ ಮೆತ್ತಿಸಿಕೊಂಡು**
**ಬಾ ಅವನ ಉಸಿರಲ್ಲಿ**
**ಕರಗಿದ ನನ್ನ ಚಹರೆಯನ್ನು**

**(ಪುಟ ೭೬)**

**ನಾನು ಬದುಕಿರಬೇಕಾದರೆ ಪ್ರತಿಕ್ಷಣ**
**ಎಚ್ಚರವಾಗಿ ಇರಬೇಕು**
**ಎಚ್ಚರವಾಗಿ ಇರುವುದೆಂದರೆ ನಿನ್ನ ಪ್ರೀತಿಸುವುದು**
**ತಾನೆ?**

**(ಪುಟ ೭೯)**

ಉಸಿರಿನಷ್ಟೇ ಆಳವಾಗಿ, ತೀವ್ರವಾಗಿ ಪ್ರೀತಿಯನ್ನು ಅನುಭವಿಸುವ ಈ ಭಾವಗಳು ದೈಹಿಕ ಆಕರ್ಷಣೆಯನ್ನು ಮೀರಿದ ಅಮೂರ್ತ ಪ್ರೀತಿ, ಅನುರಾಗವನ್ನು ವಿವರಿಸುತ್ತವೆ. ಹೀಗೆ ಹನಿಗವನಗಳು ಮಹಿಳಾಕಾವ್ಯದ ಒಂದು ಭಾಗವಾಗಿ ನೆನಪಿನಲ್ಲಿ ಉಳಿಯುವಂತಹ ರಚನೆಗಳಾಗಿವೆ.

**೭.೪. ದ್ವಿಪದಿಗಳು** : ಎರಡು ಸಾಲುಗಳ ರಚನೆಯಿಂದ ಕೂಡಿರುವ ಕಾರಣದಿಂದಾಗಿ ಕೆಲವು ಕವನಗಳನ್ನು ಈ ಗುಂಪಿಗೆ ಸೇರಿಸಲಾಗಿದೆ. ಕನ್ನಡ ಪ್ರಾಚೀನ ಸಾಹಿತ್ಯದಲ್ಲಿ 'ರಗಳೆ'ಯೆಂಬ ಹರಿಹರನಿಂದ ಪ್ರಸಿದ್ಧವಾದ ಪ್ರಕಾರವು ಎರಡು ಸಾಲುಗಳಿಂದ ಕೂಡಿದ ಸಾಹಿತ್ಯ ಪ್ರಕಾರವಾಗಿತ್ತು. ಹಿಂದಿಯಲ್ಲಿ 'ದೋಹೆ' ಎಂಬ ಪ್ರಾಚೀನ ಸಾಹಿತ್ಯ ಪ್ರಕಾರವೂ ಎರಡು ಸಾಲುಗಳ ಪದ್ಯಪ್ರಕಾರವೇ ಆಗಿದೆ. ಆಧುನಿಕ ಕಾವ್ಯದಲ್ಲಿ ಗಜಲ್ ಎಂಬ ಪ್ರಕಾರವು ಪ್ರಸಿದ್ಧವಾಗಿರುವುದು ಎರಡು ಸಾಲುಗಳಿಂದಲೇ. ಅಪರೂಪಕ್ಕೆ ಎಂಬಂತೆ ಆಧುನಿಕ ಮಹಿಳಾಕಾವ್ಯದಲ್ಲೂ ಕೂಡ ಎರಡು ಸಾಲುಗಳ ಕ್ರಮಾನುಗತಿಯಲ್ಲಿ ರಚನೆಯಾದ ಕವನಗಳಿವೆ.

ಪ್ರಾರಂಭದ ಕವಯಿತ್ರಿಯಾದ ಬೆಳಗೆರೆ ಜಾನಕಮ್ಮನವರು ಎರಡು ಸಾಲುಗಳಿಂದ ಕೂಡಿದ ಅನೇಕ ಕವನಗಳನ್ನು ರಚಿಸಿದ್ದಾರೆ. ಪ್ರಸ್ತುತ ಅಧ್ಯಯನದ ಮಿತಿಯಲ್ಲಿ ನಿದರ್ಶನಕ್ಕಾಗಿ ಕೆಲವು ಕವನಗಳನ್ನು ವಿಶ್ಲೇಷಿಸಲಾಗಿದೆ. 'ನರಸಿಯ ಪರಿಸೆ' ಹೀಗೆ ಎರಡು ಸಾಲುಗಳ ಬಂಧದಲ್ಲಿ ರಚನೆಯಾದ ಒಂದು ದೀರ್ಘ ಕವನ.

**ಹದಿನಾಲ್ಕು ಹರೆಯದ ನರಸಿ ಬಲು ಚೆಲುವೆ**
**ಮುದವಾಗುತಿದೆ ಇವಳ ನಡೆನುಡಿಯ ನೋಡೆ**

**(ಕಲ್ಯಾಣ – ಪುಟ ೧೭೮)**

ಎಂದು ಕವನ ಪ್ರಾರಂಭವಾಗುತ್ತದೆ. ನರಸಿಯೆಂಬ ಮನೆಗೆಲಸದಾಕೆ ರಜೆ ಹಾಕಿ ಬೀರಪ್ಪನ ಜಾತ್ರೆಗೆ ಹೋಗಿ ಬಂದು ಅಲ್ಲಿನ ಸಂಭ್ರಮವನ್ನು ಕಣ್ಣಿಗೆ ಕಟ್ಟಿದಂತೆ ವರ್ಣಿಸುತ್ತಾಳೆ. ಆಕೆ ರಜೆ ಮಾಡಿದ್ದಕ್ಕೆ ನಿರೂಪಕಿಗೆ ಮುನಿಸುಂಟಾಗಿದ್ದರೂ ಪರಿಸೆಯ ಸೊಬಗನ್ನು ಕೇಳಿ ಅವಳ ಹರ್ಷದಲ್ಲಿ ತಾನೂ ಕೂಡ ಭಾಗಿಯಾಗುತ್ತಾಳೆ.

**ಆಗಿಲ್ಲವೇ ನರಸಿ ಮದುವೆ ನಿನಗೆಂದರೆ**
**ಸೆರಗ ಬಾಯಿಗೆ ಮುಚ್ಚಿ ಸಿರಬಾಗಿ ನಗುವಳು**
**ಇರಲಿರಲಿ ನರಸೀ ಮದುವೆಯಂತಿರಲಿ**
**ಬೀರಪ್ಪನಾ ಪರಿಸೆ ಬಂಗಾರವಾದೀತು**
**..... ಬಂಧನದಿ ಸಿಲುಕಿದಾ ಬಾಳಿನನುಭವಕಿಂತ**
**ಎಳೆತನದ ಕುಣಿತವೇ ಜನಕಜೆಗೆ ಹಿತವಂತೆ**

ಎಂದು ಕವನ ಮುಗಿಯುತ್ತದೆ. ಜಾತ್ರೆಯ ಸಂಭ್ರಮದಲ್ಲಿಯೇ ಪೂರ್ತಿ ಮೈಮರೆಯದೆ ತನ್ನ ಬದುಕಿನ ರೀತಿಯನ್ನು ನರಸಿಯ ಬದುಕಿನೊಂದಿಗೆ ನಿರೂಪಕಿ ಹೋಲಿಸಿಕೊಳ್ಳುತ್ತಾಳೆ. ಮದುವೆ, ಮಕ್ಕಳ ಜಂಜಾಟದಲ್ಲಿ ಬದುಕಿನ ಸಾಮಾನ್ಯ ಸಂತಸದ ಗಳಿಗೆಗಳನ್ನು ದೂರ ಮಾಡಿಕೊಂಡಿರುವ ತನ್ನ ಬದುಕು ಬಂಧನವಾಗಿ ಕಾಣಿಸುತ್ತದೆ. ನರಸಿಯ ಬದುಕಿನ ಮುಕ್ತತೆ ಕಂಡು ತನಗಿಂತ ಅವಳ ಬದುಕೇ ಮೇಲೆನಿಸುತ್ತದೆ. ಸರಳವಾದ ಶಬ್ದಗಳಲ್ಲಿದ್ದರೂ ಹೆಚ್ಚಿನ ಅರ್ಥವನ್ನು ಹೊಮ್ಮಿಸುವ ಶಕ್ತಿ ಈ ಕವನಕ್ಕಿದೆ. ಇಂತಹುದೇ ಸರಳ ಶಬ್ದಗಳಿಂದ ಕೂಡಿದ ಇನ್ನೊಂದು ಕವಿತೆ 'ಸಂತೆ'. ತನ್ನ ವ್ಯಕ್ತಿತ್ವದ ಚಿತ್ರಣವನ್ನೆ, ಸಂತೆಯಲ್ಲಿ ಕುಳಿತ ಏಕಾಂಗಿ ತಾನಾಗಿ ತನ್ನ ಪರಿಚಯವನ್ನು ಕವನದ ಮೂಲಕ ಮಾಡಿಕೊಳ್ಳಲಾಗಿದೆ. ಸಾಮಾನ್ಯ ಸಂತೆಗೆ ಸಂಬಂಧಪಟ್ಟ ವಿವರಗಳೇನೇಕ ಕವನದಲ್ಲಿದ್ದರೂ ನಿಜವಾಗಿಯೂ ಆಕೆ ವಿವರಿಸುತ್ತಿರುವುದು ಜೀವನಸಂತೆಯಲ್ಲಿ ತನ್ನ ಏಕಾಂಗಿ ಜೀವನವನ್ನು. ಅವರ ದೈವಭಕ್ತಿಯ ಗೀತೆಗಳೂ ಕೂಡ ಎರಡು ಸಾಲುಗಳಿಂದ ಕೂಡಿದ ಕವನಗಳೇ ಆಗಿವೆ. ದೈವಸ್ತುತಿಗೆ ಅನುಕೂಲವಾಗುವಂತಿರಲೆಂಬುದು ಈ ಬಗೆಯ ರಚನೆಗಳ ಹಿಂದಿನ ಉದ್ದೇಶವಿರಬಹುದು.

ಸವಿತಾ ನಾಗಭೂಷಣ ಅವರೂ ಪ್ರಕೃತಿಯೊಡನೆ ಸಂವಾದ ನಡೆಸುವಾಗ, ವರ್ಣಿಸುವಾಗ, ಮಾನವ ಕ್ರಿಯೆಗಳನ್ನು ವಿವರಿಸುವಾಗ ಎರಡು ಸಾಲುಗಳ ರಚನಾಕ್ರಮವನ್ನು ಅನುಸರಿಸಿದ್ದಾರೆ.

**ಏಯ್! ಯಾರು ನೀನು?**
**ನಾನು ಹೂಗಿಡಗಳ ಚಿತ್ರ**
**ಏಯ್! ಯಾರು ನೀನು?**
**ನಾನು ನದಿಯ ಪಾತ್ರ**
**ಏಯ್! ಯಾರು ನೀನು?**
**ನಾನು ಅಗ್ನಿನೇತ್ರ**

ಏಯ್! ಯಾರು ನೀನು?

ನಾನು ಉಲ್ಲಾಸಚೈತ್ರ

ಏಯ್! ಯಾರು ನೀನು?

ನಾನು ಬ್ರಹ್ಮಾಂಡ ಗಾತ್ರ

ಏಯ್! ಯಾರು ನೀನು?

ನಾನು ನೀನು ಮಾತ್ರ

(ಯಾರು ನೀನು? – ಆಕಾಶಮಲ್ಲಿಗೆ – ಪುಟ ೧೪೧)

ಮೊದಲ ಸಾಲಿನಲ್ಲಿ ಪ್ರಶ್ನೆ–ಎರಡನೇ ಸಾಲಿನಲ್ಲಿ ಪ್ರತಿಕ್ರಿಯೆ. ಪ್ರತಿ ಎರಡು ಸಾಲುಗಳಿಗೆ ಒಮ್ಮೆ ಒಂದು ಸಂಭಾಷಣೆ ಮುಗಿಯುತ್ತದೆ. ಕೊನೆಯಲ್ಲಿ 'ನಾನು ನೀನು ಮಾತ್ರ' ಎಂದು ಕವನ ಕೊನೆಯಾಗುತ್ತದೆ. 'ನೀನು' ಎಂಬುದು ಏನೆಲ್ಲವೂ ಆಗಿರಬಹುದಾದ ಸಾಧ್ಯತೆಯನ್ನೂ, ಉತ್ತರವೇ ಮುಗಿಯುವ ಪ್ರಶ್ನೆಗಳ ಸರಣಿಯನ್ನೇ ಹುಟ್ಟುಹಾಕುವ ಸಾಮರ್ಥ್ಯವುಳ್ಳದ್ದಾಗಿಯೂ ಕಾಣುತ್ತದೆ. ಇಲ್ಲಿ ಶಬ್ದಚಮತ್ಕಾರದೊಂದಿಗೆ ಅರ್ಥಚಮತ್ಕಾರ ಕೂಡ ಎದ್ದು ಕಾಣುತ್ತದೆ. ಪುಟ್ಟ ಪುಟ್ಟ ಸಾಲುಗಳ ಅವರ ಇನ್ನೊಂದು ಕವಿತೆ 'ಎಲ್ಲಿ ಹೋದವೋ'...

ಮುಡಿಯ ಸಿಂಗರಿಸಿದ

ಹೂವುಗಳು...

ಕೆನ್ನೆಯ ನುಣುಪಾಗಿಸಿದ

ಬಣ್ಣಗಳು...

ಮೂಗನು ಸೆಳೆದ

ಸುಗಂಧಗಳು....

ನಾಲಗೆಯ ಮುದಗೊಳಿಸಿದ

ರಸಗಳು.....

ಕಿವಿಯ ತಣಿಸಿದ

ಸ್ವರಗಳು...

ಕಣ್ಣನು ಅರಳಿಸಿದ

ನೋಟಗಳು...

ಎಲ್ಲಿ ಹೋದವೋ?

ಎಣ್ಣೆ ತೀರಿದೆ.

ಎಂದು ತೋರುವುದು.

(ಆಕಾಶಮಲ್ಲಿಗೆ –ಪುಟ ೧೪೯)

ಸುಗಂಧ, ರಸ, ಸ್ವರ, ನೋಟ ಮುಂತಾದ ಪಂಚೇಂದ್ರಿಯಗಳಿಗೆ ಸಂಬಂಧಪಟ್ಟ ಕ್ರಿಯೆಗಳು ಕಾಲ, ಸಂದರ್ಭಾನುಸಾರಿಯಾಗಿ ಮನಸ್ಸಿನ ಮೇಲೆ ಪರಿಣಾಮ ಬೀರುವಂತಹವು. 'ಎಲ್ಲಿ

ಹೋದವೋ' ಎಂಬ ಪ್ರಶ್ನೆ ಕವನದ ನಿರೂಪಕಿಯದು. ಇದುವರೆಗೂ ಇದ್ದ ಅವು ಈಗ ಹೋಗುವುದಾದರೂ ಎಲ್ಲಿಗೆ! ನೋಡಿದ್ದೆಲ್ಲವೂ ಕಾಣಿಸಬೇಕೆಂದಿಲ್ಲ. ಹಾಗೆಯೇ ಹೇಳುವುದೆಲ್ಲ ಕೇಳಬೇಕೆಂದಿಲ್ಲ. ಇವೆಲ್ಲ ಸರಿಯಾಗಿ ಇರಬೇಕಾದರೆ ಮೊದಲು ಮನಸ್ಸು ಅವುಗಳನ್ನು ಸ್ವೀಕರಿಸುವ ಸ್ಥಿತಿಯಲ್ಲಿರಬೇಕು. ಪ್ರತಿಯೊಂದು ಸ್ಟಾಂಜವನ್ನು ಒಂದೇ ಸಾಲಿನಲ್ಲಿ ಹೇಳಬಹುದಾಗಿತ್ತು. ಆದರೆ ಹೂವುಗಳು, ಬಣ್ಣಗಳು, ಸುಗಂಧ, ರಸ, ಸ್ವರ, ನೋಟ ಇವುಗಳಿಗೆ ಒತ್ತು ನೀಡುವ ಉದ್ದೇಶದಿಂದಲೇ ಕವಯಿತ್ರಿ ಈ ತಂತ್ರ ಬಳಸಿರಬಹುದು. ಜೊತೆಗೆ ಪ್ರತಿ ಪದವೂ ಮುಗಿಯದಿರುವ ಸೂಚನೆಯನ್ನು ಕೂಡ ಲೇಖನಚಿಹ್ನೆಯಿಂದ ಸೂಚಿಸಲಾಗಿದೆ. ಅವುಗಳ ಪರಿಣಾಮದ ದೀರ್ಘತೆಯನ್ನು ಈ ಚಿಹ್ನೆ ಸೂಚಿಸುತ್ತಿರುವಂತಿದೆ. ಇಲ್ಲಿ 'ತೀರಿದ ಎಣ್ಣೆ' ಆಸ್ವಾದಿಸುವ ಮನಸ್ಸಿನ ನಿರಾಸಕ್ತಿಯನ್ನೂ, ಅಥವಾ ಮುಗಿಯುತ್ತಿರುವ ಆಯುಷ್ಯವನ್ನೂ ಸೂಚಿಸುತ್ತಿರಬಹುದು. ಗಾತ್ರದ ಕಾರಣದಿಂದಾಗಿಯೇ ಸೆಳೆಯುವ ಕವನ ಓದಿದ ನಂತರವೂ ಉಳಿಯುವಂತಾಗಿರುವುದು ಈ ರಚನಾಕ್ರಮದ ವಿಶೇಷ. ಇದೇ ಕವಿ ಸಮಕಾಲೀನ ಸಮಾಜದಲ್ಲಿ ನಡೆಯುತ್ತಿರುವ ಹಿಂಸೆಯನ್ನು ಅದರಲ್ಲೂ ಗುಜರಾತಿನಲ್ಲಿ ನಡೆದ ನರಮೇಧಕ್ಕೆ ಪ್ರತಿಕ್ರಿಯಿಸುವಾಗ ಕವಿಯಾಗಿ ತನ್ನ ಸ್ಪಂದನೆಯನ್ನು ಏಳು ಭಾಗಗಳಲ್ಲಿ 'ಗುಜರಾತ್‌ಗೆ ಕವಿಸ್ಪಂದನ' ಎಂಬ ಶೀರ್ಷಿಕೆಯಡಿಯಲ್ಲಿ ತೋರಿದ್ದಾರೆ. ಹಿಂದೂ-ಮುಸ್ಲಿಂ ಎಂಬ ಎರಡು ಧರ್ಮಗಳ ಗುಂಪಿನಲ್ಲಿರುವ ಕೆಲವರು ಚಟುವಟಿಕೆಗಳನ್ನು ವಿವರಿಸುವಾಗ ಪ್ರತಿ ಎರಡೆರಡು ಸಾಲುಗಳು ಬಳಕೆಯಾಗಿವೆ.

**ಅವರು ತ್ರಿಶೂಲಗಳನ್ನು ಹಿಡಿದಿದ್ದಾರೆ.**<br>
**ಇವರು ತಲವಾರಗಳನ್ನು ಹಿಡಿದಿದ್ದಾರೆ**<br>
**ಕಿಚ್ಚು ಹಾಯಿಸುವ ಹಬ್ಬದಲಿ**<br>
**ಇಬ್ಬರೂ ಹುರುಪಿನಲಿ ಪಾಲ್ಗೊಂಡಿದ್ದಾರೆ!**<br>
**'ಅಲ್ಲಾ' ಎಂದರೆ ನೇರ ಸ್ವರ್ಗಕ್ಕೆ ಅಟ್ಟುತ್ತಾರೆ**<br>
**'ರಾಮ' ಎಂದರೆ ಇಲ್ಲೇ ನರಕದಲ್ಲಿ ಉಳಿಸುತ್ತಾರೆ**

(ಕವಿಯ ಮಾತನ್ನು ಯಾರು ಕೇಳುತ್ತಾರೆ? ದರುಶನ - ಪುಟ ೪೮)

'ಅವರು', 'ಇವರು' ಪದಬಳಕೆಯಿಂದ ಗುಂಪುಗಳನ್ನು ಸೂಚಿಸುತ್ತಿದ್ದರೆ, ತ್ರಿಶೂಲ, ತಲವಾರಗಳ ಮೂಲಕ ಅವು ಯಾವ ಧರ್ಮಕ್ಕೆ ಸೇರಿದ ಗುಂಪಿನವೆಂಬುದನ್ನೂ ಸಹ ಸೂಚಿಸಲಾಗಿದೆ. 'ಅಲ್ಲಾ' 'ರಾಮ' ಎಂಬ ಪದಗಳೂ ಕೂಡ ಹೆಸರು ಹೇಳದಿದ್ದರೂ ಧರ್ಮಗಳನ್ನು ಗುರುತಿಸುತ್ತಿವೆ. ತನ್ನಿಂದ ಏನು ಮಾಡಲು ಸಾಧ್ಯ ಎಂಬ ಪ್ರಶ್ನೆ ಇಲ್ಲಿನ ನಿರೂಪಕಿಯದು. ಆದರೆ ಒಂದು ನಿರೀಕ್ಷೆಯ ಮೂಲಕ ಮನಸ್ಸಿಗೆ ಸಮಾಧಾನ ತಂದುಕೊಳ್ಳುವ ಪ್ರಯತ್ನವಿದ್ದರೆ, ಒಂದು ಕಾಣ್ಕೆಯ ಮೂಲಕ ಆಶಾಭಾವನೆಯನ್ನು ಹೊಂದುವ ಪ್ರಯತ್ನವನ್ನೂ ಕೂಡ ಕವನ ಮುಂದುವರಿಸುತ್ತದೆ.

**ಎಂತಹ ಬಿರುಗಾಳಿಯಾದರೂ**<br>
**ಶಾಂತವಾಗಲೇಬೇಕು.**

ಎಂತಹ ಜ್ವಾಲಾಮುಖಿಯಾದರೂ
ತಣ್ಣಗಾಗಲೇಬೇಕು
ಎಂತಹ ಪ್ರವಾಹವಾದರೂ
ನೆರೆ ತಗ್ಗಲೇಬೇಕು
ಎಲ್ಲರಲ್ಲೂ ಅಂತಃಕರಣ
ಇದ್ದೇ ಇರುವುದು
ಕೇಡನು ಅದು ಕೊನೆಗೂ
ಗೆದ್ದೇ ತೀರುವುದು.

(ಕವಿಯ ನಿರೀಕ್ಷೆ – ದರುಶನ – ಪುಟ ೫೦)

ಎರಡು ಸಾಲುಗಳನ್ನು ಒಂದೇ ಸಾಲಿನಲ್ಲಿ ಬರೆದರೆ ಪ್ರತಿಯೊಂದೂ ಗದ್ಯಾತ್ಮಕ ವಾಕ್ಯಗಳಾಗುತ್ತವೆ. ಎರಡು ಸಾಲುಗಳಲ್ಲಿ ಪ್ರತ್ಯೇಕಿಸಿರುವುದರಿಂದಲೂ ಆ ಎರಡನೇ ಸಾಲು ಕ್ರಿಯಾಪದವನ್ನು ಹೊಂದಿರುವುದರಿಂದಲೂ ಕವನದ ರೂಪ ಪ್ರಾಪ್ತವಾಗಿದೆ. ಇದೇ ತಂತ್ರ 'ಕವಿಯ ಕಾಣ್ಕೆ' ಭಾಗದಲ್ಲೂ ಮುಂದುವರಿದಿದೆ.

ಅವರು ಕಾಲುಗಳು ಸೋಲುವ ತನಕ
ಬೆಂಬತ್ತಿ ಹೋದರು.
ಕೈಗಳು ಸೋಲುವ ತನಕ
ಗುಂಡು ಹಾರಿಸಿದರು.
ಕಣ್ಣುಗಳು ಸೋಲುವ ತನಕ
ಕಿಡಿಗಳ ಕಾರಿದರು.
ನಾಲಗೆ ಸೋಲುವ ತನಕ
ನಿಂದೆಯ ಸುರಿಮಳೆಗೈದರು

(ಅದೇ – ಪುಟ ೫೦–೫೧)

ಇಲ್ಲಿ ಎರಡನೇ ಸಾಲು ಮೊದಲು ಬಂದು, ಮೊದಲ ಸಾಲು ಎರಡನೆಯದಾಗಿ ಬಂದಿದ್ದಾಗಲೂ ಅರ್ಥ ವ್ಯತ್ಯಾಸವಾಗುತ್ತಿರಲಿಲ್ಲ. ಆದರೆ ಪರಿಣಾಮ ಇನ್ನಷ್ಟು ತೀಕ್ಷ್ಣವಾಗಿರುತ್ತಿತ್ತೇನೋ! ಹೃದಯ ತುಂಬಿ ಬಂದ ದಿನ ಮಮ್ಮಲ ಮರುಗಿ ಗೆಲ್ಲುವ 'ಕಾಣ್ಕೆ'ಯೊಂದಿಗೆ ಕವನ ಮುಗಿಯುತ್ತದೆ.

ಆಧುನಿಕ ಮಹಿಳಾಕಾವ್ಯದಲ್ಲಿ 'ಗಜಲ್' ರೂಪದಲ್ಲಿಯೂ ಕವನಗಳನ್ನು ರಚಿಸಲಾಗಿದೆ. ಎರಡು ಸಾಲುಗಳ ಕ್ರಮದಲ್ಲಿ ಅವು ರಚನೆಯಾಗುತ್ತಿರುವುದರಿಂದ ಪ್ರಾಸಂಗಿಕವಾಗಿ ಅವುಗಳನ್ನು ನಿದರ್ಶನಪೂರ್ವಕವಾಗಿ ವಿಶ್ಲೇಷಿಸಲಾಗಿದೆ. ಈ ರೀತಿಯ ಪ್ರಸಿದ್ಧ ಗಜಲ್‌ಗಳನ್ನು ಬರೆದವರಲ್ಲಿ ಎಚ್.ಎಸ್. ಮುಕ್ತಾಯಕ್ಕ ಪ್ರಮುಖರಾಗಿದ್ದಾರೆ. ಸೂಫೀ ಪಂಥದ ಪ್ರಭಾವ ಗಜಲ್ ಪ್ರಕಾರದ ಮೇಲಿರುವುದರಿಂದ ಪ್ರೇಮ ನಿವೇದನೆಗೆ ಹೆಚ್ಚಿನ ಅವಕಾಶವಿರುತ್ತದೆ.

ಹೋಗುವಾಗ ಕಂಬನಿಗಳ ತುಳುಕಿಸದಿರು ಎನ್ನುವನು
ಕಳೆದ ಕ್ಷಣಗಳ ಸವಿಯ ಬಾಡಿಸದಿರು ಎನ್ನುವನು
ಎಂದಿದ್ದರೂ ಮಳೆಬೆಟ್ಟಗಳ ಸಂಬಂಧ ನಮ್ಮದು
ಇನಿತಾದರೂ ದೊರೆತದ್ದು ಮರೆಯದಿರು ಎನ್ನುವನು
ಖುಷಿಯೂ ಉದಾಸವೂ ಆಗುವುದು ಅವನು ಬಂದಾಗ
ಕಳೆವ ಕೆಲ ಗಳಿಗೆಯಲಿ ದುಗುಡಗೊಳ್ಳದಿರು ಎನ್ನುವನು
ಸಂಜೆ ಕರಗಿ ಹೋಗುವುದು ನೋಡುನೋಡುತ್ತಿರುವಂತೆ
ಕೆಲವು ತಾಸುಗಳ ಮಿಲನವ ದೂರದಿರು ಎನ್ನುವನು
ಅವ್ಯಕ್ತ ನೋವಿನಲಿ ಅಯ್ಯೋ ದೀಪವೂ ಸುಯ್ಯುತಿದೆ
ಗಲ್ಲ ತಟ್ಟುತ ಯಾಕೆ ಈ ನಿಟ್ಟುಸಿರು ಎನ್ನುವನು
ನೋವು ತರುವ ಇಂಥ ಪ್ರೀತಿ ಬೇಡವೇ ಬೇಡ
ಮುತ್ತಿಡುತ್ತ ಸಿಗದುದಕೆ ಮರುಗದಿರು ಎನ್ನುವನು

(ಗಜಲ್ – ೧೦ ಎಚ್.ಎಸ್. ಮುಕ್ತಾಯಕ್ಕ – ಪದ್ಯದ ಮಾತು ಬೇರೆ – ಪುಟ ೨೪)

ಪ್ರಾರಂಭದಲ್ಲಿ ಪ್ರೇಮಿಗಳಿಬ್ಬರ ಅನುಭವ ಹಂಚಿಕೆಯೆಂದು ಭಾಸವಾದರೂ ಆ ಪ್ರೇಮ ಅಲೌಕಿಕವಾದುದು ಎಂಬುದನ್ನು ಕವನದ ಕೊನೆಯ ಭಾಗದ ಸಾಲುಗಳು ಸ್ಪಷ್ಟಪಡಿಸುತ್ತವೆ. ಕರಗುತ್ತಿರುವ ಸಂಜೆ, ಸುಯ್ಯುತ್ತಿರುವ ದೀಪಗಳು ಮುಗಿಯುತ್ತಿರುವ ಆಯಸ್ಸನ್ನು ಸಂಕೇತಿಸುತ್ತಿದ್ದರೆ ಕ್ಷಣಿಕವಾದರೂ ಪ್ರೀತಿಯ ಅನುಭವ ಅಪಾರ ಎನ್ನುವುದನ್ನು ಕೆಲವು ಕ್ಷಣಗಳ ಮಿಲನ ಮತ್ತು ದೂರಾಗುವ ಕ್ರಿಯೆಗಳು ಸೂಚಿಸುತ್ತಿವೆ. ಮಳೆ–ಬೆಟ್ಟಗಳ ಸಂಬಂಧ ಇದನ್ನು ಪುಷ್ಟೀಕರಿಸುತ್ತವೆ. 'ಸಿಗದಿರುವುದಕ್ಕೆ ಮರುಗದಿರು' ಎಂಬ ಸಂದೇಶವನ್ನು ಕೂಡ ಕವನ ಹೊಂದಿದೆ. ಮುಕ್ತಾಯಕ್ಕನವರ ಕಾವ್ಯವನ್ನು ಕುರಿತು ವೈದೇಹಿಯವರ ಅಭಿಪ್ರಾಯ ಹೀಗಿದೆ; ಮುಕ್ತಾಯಕ್ಕನ ಕಾವ್ಯವನ್ನು ಓದುತ್ತ ಹೋದರೆ ಅದು ಒಟ್ಟಾಗಿ ಒಂದು ದೀರ್ಘ ಆಲಾಪವಾಗಿ ಕೇಳಿಸುತ್ತದೆ. ಕವಿಯ ಎದೆ ಬಡಿತ ಕೇಳುವಷ್ಟು, ಉಸಿರ ಬಿಸಿ ತಾಕುವಷ್ಟು ಅದು ಜೀವಂತವಾಗಿದೆ. ಇದಕ್ಕೆ ಆಕೆ ಆರಿಸಿಕೊಂಡ ಪ್ರಕಾರವಾದ 'ಗಜಲ್' ಎಂಬುದು ಹೇಗೂ ಕಾರಣವೇ ಅಲ್ಲ. ಕೇವಲ ಉಪಕರಣದಲ್ಲಾಗಲೀ ಕಂಠದಲ್ಲಾಗಲೀ ಸಂಗೀತ ಹೇಗೆ ಅಡಗಿರುವುದಿಲ್ಲವೋ, ಹಾಗೆಯೇ ಇದೂ. ಅಂತಿದ್ದರೆ ಒಡಲ ಮೂಲಕ್ಕೇ ತಲುಪುವ ಆಕೆಯ ಕಾವ್ಯದ ಓದು, ಅಲ್ಲಿನ ನಡೆ–ನುಡಿ–ಧ್ವನಿ... ಮೌನ ಏನದು?"[೬]

ಪ್ರಶ್ನಾರ್ಥಕವಾಗಿ ಕೊನೆಯಾಗುವ ಈ ವಿಶ್ಲೇಷಣೆಗೆ ಮುಕ್ತಾಯಕ್ಕನವರ ಕಾವ್ಯಪ್ರತಿಭೆ ಗಜಲ್‌ಗಳಲ್ಲಿ ಮೂಡಿಬಂದ ಬಗೆಯನ್ನು ಕುರಿತದ್ದಾಗಿದೆ. ಇದು ಲೌಕಿಕತೆಯಿಂದ ಅಲೌಕಿಕತೆಯತ್ತ ಹೊರಳುತ್ತಿರುವ ಕವನವಾಗಿದ್ದರೆ, ಅಲೌಕಿಕತೆಯಿಂದ ಲೌಕಿಕತಗೆ ಹೊರಳಿದ ಇನ್ನೊಂದ 'ಪ್ರೀತಿಯ' ಕುರಿತ ಕವನ ಜ.ನಾ. ತೇಜಶ್ರೀಯವರದು.

ಬಿಸಿಲು ಕಳಚಿ ಮಳೆ ಹೊದ್ದ ಆಕಾಶ
ಮೈಕಚ್ಚುವ ನಿನ್ನ ಚಳಿಗೆ ಕನಸಿನೊಳಗೊಂದು ಕನಸು
ಮಬ್ಬುಗತ್ತಲು ಹೊರಳಿ ನಿನಗೆ ಮಗ್ಗುಲಾದ ಹೊತ್ತು
ಊರಬೀದಿಗಳು ಮುಂಜಾವಿನತ್ತ ನಡೆದವು
ನೀನು ನಿಂತ ನೆತ್ತಿಯಿಂದ ಆಕಾಶ ಇಬ್ಭಾಗವಾದಂತೆ
ನನ್ನ ಕೊರಳಲ್ಲಿ ನಿನ್ನ ಕೈಗಳು ಮೂರು ಗಂಟಾದವು
ಮಾತು ಮೀರಿ ನಮ್ಮ ನಡು ಬೆಸೆಯುವ ಮೌನ
ಹೊಕ್ಕಳ-ಹೊಕ್ಕಳ ಹೊಕ್ಕು ಬದುಕು ಮಾಗಿತು
ಸಾವು ಬಂದೆರಗುವ ಕಾಲಕ್ಕೇ ನೀನು ನನಗೆರಗಿದ್ದು
ಯೌವ್ವನ ಪಾರಿವಾಳದಂತೆ ಕೂಜಿಸಿ ಪತರಗುಟ್ಟಿತು

(ಕೂಜನ – ಉಸ್ರುಬಂಡೆ – ಪುಟ ೬೧)

ಕನಸಿನೊಳಗೊಂದು ಕನಸು ತುಂಬಿಕೊಳ್ಳುತ್ತಿರುವಾಗಲೇ ಮೂರು ಗಂಟುಗಳ ಬೇಲಿಯೊಳಗೆ ಪ್ರೇಮ ಬಂಧಿಯಾಯಿತು. ಜೊತೆಗೆ ಬದುಕೂ ಕೂಡ ಮಾಗುತ್ತಾ ಹೋಯಿತು. ಕೊನೆಯ ಸಾಲಿನಲ್ಲಿ ಬಂದಿರುವ ಉಪಮೆ ಪ್ರೇಮವು, ಮದುವೆಯೆಂಬ ಬಂಧನಕ್ಕೊಳಪಟ್ಟ ನಂತರ ಅನುಭವಿಸಿದ ತಲ್ಲಣವನ್ನು ಸೂಚಿಸುತ್ತಿದೆ. 'ಸಾವು' ಹೇಳದೆ ಕೇಳದೆ ಬಂದೆರಗುವುದೋ ಹಾಗೆ ಸಂಸಾರದಲ್ಲಿ ತಲ್ಲೀನವಾದ ಮನ ಬದುಕಿನ ನೈಜ ಪ್ರೇಮವನ್ನು ಕಳೆದುಕೊಳ್ಳುವ ಪರಿಯನ್ನು ಕವನ ಎಲ್ಲಿಯೂ ವಾಚ್ಯಗೊಳಿಸದೆ ಧ್ವನಿಸುತ್ತದೆ. ಪ್ರತಿ ಎರಡು ಸಾಲುಗಳ ರಚನಾಕ್ರಮ ಕೂಡ ಕವನದ ಈ ಧ್ವನಿಪೂರ್ಣತೆಗೆ ಕೈಜೋಡಿಸಿದೆ.

**ಟಿಪ್ಪಣಿಗಳು**

೧. ಓ.ಎಲ್. ನಾಗಭೂಷಣಸ್ವಾಮಿ, 'ವಿಮರ್ಶೆಯ ಪರಿಭಾಷೆ', ಪುಟ ೨೫೬.

೨. ಅದೇ, ಪುಟ ೨೫೯.

೩. ಅದೇ, ಪುಟ ೨೬೦.

೪. ಕಮಾಲಾ ಹೆಮ್ಮಿಗೆ(ಸಂ), 'ಹನಿಹನಿ', ಮುನ್ನುಡಿ, ಪುಟ III.

೫. ಅದೇ, ಪುಟ III.

೬. ಅದೇ, ಪುಟ V.

೭. ವೈದೇಹಿ, 'ಪದ್ಯದ ಮಾತು ಬೇರೆ', ಕೆ.ವಿ. ಅಕ್ಷರ (ಸಂಪಾದನೆ), 'ದೇಶಕಾಲ', ಪುಟ ೨೫.



## ಅಧ್ಯಾಯ : ಎಂಟು

# ಸಮಾರೋಪ

ಇಪ್ಪತ್ತನೇ ಶತಮಾನದ ಉತ್ತರಾರ್ಧಕಾಲದಿಂದ ಇಪ್ಪತ್ತೊಂದನೇ ಶತಮಾನದ ಮೊದಲ ದಶಕದವರೆಗಿನ ಕಾಲವ್ಯಾಪ್ತಿಯಲ್ಲಿ ಬೆಳೆದುಬಂದ ಮಹಿಳಾಕಾವ್ಯದ ಅಭಿವ್ಯಕ್ತಿಯ ವಿನ್ಯಾಸಗಳನ್ನು ಸಂವೇದನೆ, ಭಾಷಾಬಳಕೆ, ಸಂವಹನಕ್ರಮ ಮತ್ತು ಶಿಲ್ಪಗಳ ನೆಲೆಯಲ್ಲಿ ಕೆಲವು ಕವಿಗಳ, ಪ್ರಾತಿನಿಧಿಕ ಕವನಗಳ ನಿದರ್ಶನಗಳೊಂದಿಗೆ ಚರ್ಚಿಸಲಾಗಿ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಈ ಭಾಗದಲ್ಲಿ ಮಂಡಿಸಲಾಗಿದೆ. ಹಾಗೆಯೇ ಅಧ್ಯಯನದ ಸಂದರ್ಭದಲ್ಲಿ ಕಂಡುಬಂದ ಹೆಚ್ಚಿನ ಅಧ್ಯಯನದ ಸಾಧ್ಯತೆಗಳನ್ನು ಕುರಿತು ಸೂಚನೆಗಳನ್ನು ನೀಡಲಾಗಿದೆ.

### ೮.೧. ಫಲಿತಗಳು

೧. ಆಧುನಿಕ ಮಹಿಳಾಕಾವ್ಯ ಗಟ್ಟಿಯಾಗಿ ನೆಲೆಯೂರುವ ವೇಳೆಗೆ ಮುಖ್ಯವಾಹಿನಿ ಸಾಹಿತ್ಯವು ಸಾಮೂಹಿಕ, ಸಾಮಾಜಿಕ ಅಗತ್ಯವಾಗುತ್ತ ಸಾಗಿದ್ದಿತು. ಇದುವರೆಗಿನ ಸಾಂಪ್ರದಾಯಿಕ ಚೌಕಟ್ಟನ್ನು ಮುರಿಯುವ, ಮೀರುವ ಪ್ರಯತ್ನದಲ್ಲಿದ್ದಿತು. ಇಂತಹ ಸಂಕ್ರಮಣ ಸ್ಥಿತಿಯಲ್ಲಿ ಕಣ್ಣುಬಿಡುತ್ತಿದ್ದ ಮಹಿಳಾಕಾವ್ಯವು ಮಹಿಳೆಯ ವೈಯಕ್ತಿಕತೆಯ ಅಗತ್ಯವಾಗಿ ಬೆಳೆಯತೊಡಗಿತು. ಹಾಗೆಂದು ಸಮುದಾಯಕ್ಕೆ, ಪರಂಪರೆಗೆ ಸಂಪೂರ್ಣವಾಗಿ ಬೆನ್ನು ಹಾಕಿ ನಡೆಯಲಿಲ್ಲ. ಕೆಲವು ಆದರ್ಶ, ಸ್ಥಾಪಿತ ಮೌಲ್ಯ, ನಂಬಿಕೆಗಳನ್ನು ಒಪ್ಪಿಕೊಂಡು ಅವುಗಳ ಮುಂದುವರಿಕೆಗೆ ಸ್ಪಂದಿಸಿರುತ್ತದೆ. ಹೀಗೆ ಸ್ವೀಕರಿಸಲಾದ ಪಾರಂಪರಿಕ ಆಶಯಗಳಲ್ಲಿ ನಾಡು, ನುಡಿ, ಒಡನಾಡಿಗಳ ಸ್ಮರಣೆಗಳು ಎದ್ದುಕಾಣುತ್ತವೆ. ಪ್ರಕೃತಿಯ ಸೌಂದರ್ಯ, ನಿಗೂಢಗಳಿಗೂ ಕೂಡ ಮಹಿಳಾಕಾವ್ಯ ಧ್ವನಿಯಾಗಿ ಮುಂದುವರಿದಿದೆ. ಹೆಣ್ಣಿನ ಅಸ್ಮಿತೆಯ ಅನನ್ಯತೆಯೇ ಆಗಿರುವ ಹೆಣ್ತನ, ತಾಯ್ತನಗಳ ಆದರ್ಶಗಳನ್ನು ಅದರ ವೈಭವೀಕರಣಕ್ಕಿಂತಲೂ ವಾಸ್ತವ ನೆಲೆಯಲ್ಲಿ ಒಪ್ಪಿಕೊಂಡು, ಅಪ್ಪಿಕೊಂಡು ಮುಂದುವರಿಸುವ ಹೊಣೆಗಾರಿಕೆಯನ್ನು ಸ್ವೀಕರಿಸಿದೆ. ಹೀಗೆ ಸ್ವೀಕರಣೆಯ ನೆಲೆಯಲ್ಲಿರುವ ಸ್ಮರಣೆ, ಸ್ಪಂದನೆ, ಅನುಸರಣೆಗಳು ವಾಸ್ತವದ ಒರೆಗಲ್ಲಿನಲ್ಲಿ ಸಾಕಷ್ಟು ಉಜ್ಜಲ್ಪಟ್ಟಿವೆ ಎನ್ನುವುದು ಮಹಿಳಾಕಾವ್ಯದ ಗಟ್ಟಿತನಕ್ಕೆ ಸಾಕ್ಷಿಯಾಗಿದೆ.

೨. ಜಾಗತಿಕವಾಗಿ, ಪ್ರಾದೇಶಿಕವಾಗಿ ಉಂಟಾಗುತ್ತಿದ್ದ ಮಾರ್ಪಾಡುಗಳು ಮಹಿಳಾಕಾವ್ಯದ ಮೇಲೂ ಸಾಕಷ್ಟು ಪ್ರಭಾವ ಬೀರಿವೆ. ಮಹಿಳೆಯ ವ್ಯಕ್ತಿಪ್ರಜ್ಞೆಯನ್ನು ಜಾಗೃತಗೊಳಿಸಿವೆ. ಈ ಹಿನ್ನೆಲೆಯಲ್ಲಿ ಮಾನವೀಯ ಸ್ಪರ್ಶವಿಲ್ಲದ ಆದರ್ಶೀಕರಣವನ್ನು ಗಟ್ಟಿದನಿಯಲ್ಲಿ ನಿರಾಕರಿಸಿರುವುದು ಕಂಡುಬರುತ್ತದೆ. ವಾಸ್ತವವನ್ನು ಮರೆಮಾಚುವ ವರ್ಣನೆ, ಅತಿಯಾದ ಆದರ್ಶೀಕರಣದಿಂದ ಉಂಟಾಗುವ ನೇತ್ಯಾತ್ಮಕ ಪ್ರಭಾವಗಳು, 'ಹೆಣ್ಣ'ನ್ನು ಒಂದು ಜೀವವಾಗಿ ನೋಡದೆ ಹೇರಲಾಗಿರುವ ಮೌಲ್ಯಗಳ ಭಾರವನ್ನು ಖಂಡಿಸುತ್ತದೆ. ಈಗಾಗಲೇ ಸ್ಥಾಪಿಸಲ್ಪಟ್ಟ ಸಾಂಪ್ರದಾಯಿಕ ಚೌಕಟ್ಟುಗಳನ್ನು ಮೀರುವ, ಮುರಿಯುವ ಕಾರ್ಯವನ್ನು ಮಹಿಳಾಕಾವ್ಯದಲ್ಲಿ ಅದರ ಅನನ್ಯತೆಯ ಅಂಶವಾಗಿಯೇ ಗುರುತಿಸಬಹುದಾಗಿದೆ.

೩. ಸಂಪೂರ್ಣವಾಗಿ ನಿರಾಕರಿಸಲೂ ಆಗದ, ಇದ್ದಂತೆಯೇ ಸ್ವೀಕರಿಸಲೂ ಆಗದ ಚಿಂತನೆ, ಮೌಲ್ಯಗಳನ್ನು ಬದಲಾದ ಕಾಲಘಟ್ಟದಲ್ಲಿ ಅನುಕೂಲಕಾರಿಯಾಗಿ ಮಾರ್ಪಡಿಸಿಕೊಂಡು ತನ್ಮೂಲಕ ಸ್ಪಂದಿಸಿರುವುದು ಕೂಡ ಆಧುನಿಕ ಮಹಿಳಾಕಾವ್ಯದಲ್ಲಿ ಕಂಡುಬರುತ್ತದೆ. ಧಾರ್ಮಿಕ ಸೌಹಾರ್ದತೆ, ಈಗಾಗಲೇ ನಿರಾಕರಣೆಗೆ ಒಳಗಾಗಿರುವ ಪೌರಾಣಿಕ ಪಾತ್ರಗಳ ಮರುನಿರೂಪಣೆ, ತಾಯಿ, ತವರು, ಬಸಿರು, ಬಾಣಂತನ ಮುಂತಾದ ಸ್ತ್ರೀ ವಿಶಿಷ್ಟ ಕೌಟುಂಬಿಕ ಸಂಬಂಧಗಳಲ್ಲಿ ಉಂಟಾಗಿರುವ ಸಡಿಲತೆಗಳನ್ನು ಆಯ್ಕೆ ಮತ್ತು ಅನಿವಾರ್ಯತೆಗಳ ಹಿನ್ನೆಲೆಯಲ್ಲಿ ನಿರೂಪಿಸಿರುತ್ತದೆ.

೪. ಆಧುನಿಕ ಮಹಿಳಾಕಾವ್ಯ ಎಲ್ಲ ಸ್ತರಗಳಿಂದಲೂ ಮೂಡಿಬರುತ್ತಿರುವ ಕಾಲಕ್ಕಾಗಲೇ ಕನ್ನಡ ಸಾಹಿತ್ಯಲೋಕದಲ್ಲಿ ದಲಿತ-ಬಂಡಾಯದ ಧ್ವನಿಗಳು ಪ್ರಬಲವಾಗಿಯೂ, ತೀಕ್ಷ್ಣವಾಗಿಯೂ ಇದ್ದವು. ವರ್ಣ, ವರ್ಗತಾರತಮ್ಯದ ವಿರುದ್ಧ ಘೋಷಣೆ, ಪ್ರತಿರೋಧ, ತಿರಸ್ಕಾರಗಳು ಏರುದನಿಯಲ್ಲಿಯೇ ಇದ್ದವು. ಈ ಸಂವೇದನೆಗಳು ಮಹಿಳಾಕಾವ್ಯ ಸಂವೇದನೆಯ ಮೇಲೆ ಪ್ರಭಾವ ಬೀರಿದ್ದರೂ ಧ್ವನಿ ಮಾತ್ರ ಸಂಯಮದಿಂದ ಕೂಡಿದ ವಿಡಂಬನೆ, ವ್ಯಂಗ್ಯಗಳದ್ದೇ ಆಗಿದೆ. ಹೆಚ್ಚುವರಿಯಾಗಿ ಲಿಂಗತಾರತಮ್ಯವನ್ನೂ ಮುಖಾಮುಖಿಯಾಗುವ ಪರಿಸ್ಥಿತಿ ಮಹಿಳಾ ಕಾವ್ಯದ್ದು. ಹೀಗೆ ತನ್ನನ್ನೊಂದು ಲಿಂಗವೈಶಿಷ್ಟ್ಯವಾಗಿ ಗುರುತಿಸುವಲ್ಲಿ ವಿಫಲವಾದ ಸಮಾಜದ ಧೋರಣೆಯನ್ನೂ ಕೂಡ ವ್ಯಂಗ್ಯದ ನೆಲೆಯಲ್ಲಿಯೇ ಅದರ ಎಲ್ಲ ವಿಭಿನ್ನ ವಿನ್ಯಾಸಗಳೊಂದಿಗೆ ಮುಖಾಮುಖಿಯಾಗುತ್ತದೆ. ಎಲ್ಲ ಬಗೆಯ ದಮನಗಳನ್ನು ಮೆಟ್ಟಿನಿಲ್ಲುವ ಸ್ಥೈರ್ಯ ತನಗಿದೆ ಎಂಬ ಎಚ್ಚರಿಕೆಯ ಸಂದೇಶವನ್ನು ನೀಡುವಾಗಲು ತಣ್ಣನೆಯ ವಿಷಾದವೇ ಸ್ಥಾಯಿ ಯಾಗಿರುವುದೂ ಕೂಡ ಕಂಡುಬರುತ್ತದೆ.

೫. 'ಶೋಧ' ಮಾನವನ ಸಹಜ ಪ್ರವೃತ್ತಿಗಳಲ್ಲೊಂದು. ಇದಕ್ಕೆ ಮಹಿಳೆ, ಮಹಿಳಾಕಾವ್ಯವೇನೂ ಹೊರತಾಗಿಲ್ಲ. ಪ್ರಕೃತಿಯೊಂದಿಗೆ, ತನ್ನ ಸಹಜೀವಿಗಳೊಂದಿಗೆ, ಸಂಬಂಧಿಗಳೊಂದಿಗಿನ ತನ್ನ ನಂಟನ್ನು ಕುರಿತು ನಡೆಸಿದ ಶೋಧ ಕೂಡ ಮಹಿಳಾಕಾವ್ಯದ ಸಂವೇದನೆಗಳಲ್ಲೊಂದಾಗಿದೆ. ಅಧ್ಯಾತ್ಮ, ಹುಟ್ಟು, ಸಾವು ಮುಂತಾದ ಅಮೂರ್ತ ಸಂಗತಿಗಳ ಶೋಧವೂ ಇದರ

ಒಂದು ಭಾಗವಾಗಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಕಡೆಗಣಿ ಸಲ್ಪಟ್ಟಿರುವ ತನ್ನ ಸ್ವಂತ ಅಸ್ಮಿತೆಯನ್ನು ಶೋಧಿಸಿಕೊಳ್ಳುವುದೇ ಮಹಿಳಾಕಾವ್ಯದ ತೀವ್ರವಾದ ಹಂಬಲ. ತನ್ನನ್ನು ತಾನು ಗುರುತಿಸಿಕೊಳ್ಳಲು ನಡೆಸಬೇಕಾದ ಹೋರಾಟದ ನಡುವೆ ತನ್ನ ಸುತ್ತಲಿನ ಎಲ್ಲ ಸಂಗತಿ ಸಂಬಂಧಗಳನ್ನೂ ಕಾಪಿಟ್ಟುಕೊಳ್ಳುವ ತವಕವೊಂದು ಕಡೆ. ಅನಿವಾರ್ಯತೆ, ಅವಶ್ಯಕತೆಯ ಹಿನ್ನೆಲೆಯಿಂದಲೇ ಇಂತಹ ತುಡಿತ ಒಡಮೂಡಿದ್ದಾಗಿ ಕಂಡುಬರುತ್ತದೆ.

೬. ಆಧುನಿಕ ಮಹಿಳಾಕಾವ್ಯವನ್ನು ಅದರ ಭಾಷಿಕ ವಿಶಿಷ್ಟತೆಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೊಳ ಪಡಿಸಿದಾಗ ಬಾಲ್ಯದ ಸ್ಮರಣೆ, ವ್ಯಕ್ತಿಗಳ ಸ್ತುತಿ, ಸಂಬಂಧಗಳ ಮೌಲ್ಯವನ್ನು ವಿವರಿಸುವಾಗ ವರ್ಣನೆಯ ನೆಲೆಯಲ್ಲಿದ್ದರೆ, 'ಹಿಡಿ'ಯಲ್ಲಿ ಇಡಿಯನ್ನು ಅಡಕಗೊಳಿಸುವ ತಂತ್ರ ವ್ಯಾಪಕ ವಾದಂತೆ ಪ್ರತಿಮೆಗಳ ಮೂಲಕ ಭಾವನೆಗಳನ್ನು ಪ್ರತಿನಿಧಿಸುವ ಪ್ರಯತ್ನ ಹೆಚ್ಚಾಗಿದೆ. ಹರ್ಷವನ್ನು, ವಿಸ್ಮಯವನ್ನು ಪ್ರಕೃತಿಸಂಬಂಧಿತ ಪ್ರತಿಮೆಗಳಲ್ಲಿ ಹೇಳಲಾಗಿದ್ದರೆ, ಮೌಲ್ಯಗಳ ಸ್ವೀಕಾರ, ನಿರಾಕರಣೆಯ ಸಂದರ್ಭದಲ್ಲಿ ಪುರಾಣಸಂಬಂಧಿತ ಪ್ರತಿಮೆಗಳು ಹೆಚ್ಚು ಬಳಕೆಯಾಗಿವೆ. ನಿಗೂಢ ವಿಸ್ಮಯಗಳನ್ನು ಅಮೂರ್ತ ಪ್ರತಿಮೆಗಳಲ್ಲಿ ಹಿಡಿದಿಡಲಾಗಿದ್ದರೆ ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳುವಾಗ ಅಡುಗೆಮನೆ ಮತ್ತು ಕೌಟುಂಬಿಕ ಆವರಣದಲ್ಲಿನ ಪ್ರತಿಮೆಗಳನ್ನು ಬಳಸಲಾಗಿದೆ. ಸ್ತ್ರೀ ವಿಶಿಷ್ಟವಾದ ಅನುಭವದ ಹಿನ್ನೆಲೆಯಲ್ಲಿ ಅನೇಕ ಹೊಸಹೊಸ ರೂಪಕಗಳು ಕನ್ನಡ ಕಾವ್ಯಲೋಕ ಸೇರಿವೆ. ಉಪಮೆಗಳ ಬಳಕೆ ನಗಣ್ಯವಾಗಿದ್ದರೂ ನಾವೀನ್ಯತೆ ಅವುಗಳ ಲಕ್ಷಣವಾಗಿದೆ. ವ್ಯಂಗ್ಯವನ್ನು ಅದರ ಎಲ್ಲ ಬಗೆಯ ಸಾಧ್ಯತೆಗಳಲ್ಲಿ ಬಳಸಿಕೊಳ್ಳಲಾಗಿದೆ.

೭. ಆಧುನಿಕ ಮಹಿಳಾಕಾವ್ಯ ಸಂವಹನಿಸಿದ ವಿನ್ಯಾಸವನ್ನು ಗುರುತಿಸಿದಾಗ 'ಸ್ವಗತ'ವೆಂಬ ನಾಟಕೀಯ ತಂತ್ರ ವ್ಯಾಪಕವಾಗಿಯೂ, ಪರಿಣಾಮಕಾರಿಯಾಗಿಯೂ ಬಳಕೆಯಾಗಿರುವುದು ಕಂಡುಬರುತ್ತದೆ. ಇಡೀ ಸಂಕಲನವೇ 'ಸ್ವಗತ'ದ ಹೆಸರಿನಲ್ಲಿ ಪ್ರಕಟವಾಗಿರುವುದೂ ಇದೆ. ಪೌರಾಣಿಕ ಪಾತ್ರಗಳ ಮೂಲಕ ಮಾತನಾಡುವಾಗ ಪ್ರಾರಂಭವಾದ ಈ ತಂತ್ರದ ಬಳಕೆ ಹೊಳೆ, ಮನೆ ಮುಂತಾದ ಪ್ರತಿಮೆಗಳ ಮೂಲಕವೂ ಮಾತನಾಡುವವರೆಗೆ ಬಳಕೆಯಾಗಿದೆ. ಪ್ರಾರಂಭ ಹಂತದಲ್ಲಿ ಮಹಿಳಾಕಾವ್ಯ ಪ್ರಕಟನೆಗೆ ಒಂದು ವಿಶೇಷ ತಂತ್ರವಾಗಿಯೇ ಬಳಕೆಯಾಗಿರುವ ಈ ವಿನ್ಯಾಸದ ಹಿನ್ನೆಲೆಯಲ್ಲಿ 'ಮಹಿಳೆ'ಯ ಸಾಹಿತ್ಯಕ ಹೆಜ್ಜೆಯ ಚಾರಿತ್ರಿಕ ಕಾರಣವನ್ನೇ ಗುರುತಿಸಬಹುದು. ತನ್ನ ಮಾತಿಗೆ ಕೇಳುವ ಕಿವಿಗಳಿಲ್ಲ ಎಂಬ ಆತಂಕ, ಸ್ಪಷ್ಟತೆಗಳು, ತಾನು ಹೇಗಾದರೂ ಮಾತನಾಡಲೇಬೇಕು ಎಂಬ ತುಡಿತ ಈ ಚಾರಿತ್ರಿಕ ಕಾಲಘಟ್ಟದಲ್ಲಿ ನಾವು ಊಹಿಸಬಹುದಾದ ಅಂಶಗಳಾಗಿವೆ.

೮. ಪ್ರಕೃತಿಯನ್ನು ಸಂಬೋಧಿಸಿ, ಗೆಳತಿ ಅಥವಾ ಸಖನನ್ನು ಸಂಬೋಧಿಸಿ, ಕೌಟುಂಬಿಕ ಸಂಬಂಧಗಳನ್ನು ಸಂಬೋಧಿಸಿ ತನ್ನ ಉದ್ದೇಶಿತ ಭಾವನೆಗಳನ್ನೆಲ್ಲ ಹೊರಹಾಕುವ 'ಸಂವಾದ' ಕ್ರಮವೂ ಬಳಕೆಯಾಗಿದೆ. ಯಾರನ್ನಾದರೂ ಸಂಬೋಧಿಸಿ ಪ್ರಾರಂಭವಾಗುವ ಈ ಕ್ರಮದಲ್ಲಿ

ಅನೇಕ ಬಾರಿ ಏಕಮುಖೀ ಸಂವಾದವಾಗಿಯೇ ಅದು ಉಳಿದಿದೆ. ಇದಕ್ಕೂ ಕೂಡ ಮಹಿಳಾ ಅನನ್ಯತೆಯ ಚಾರಿತ್ರಿಕ ಕಾರಣವನ್ನೇ ನೀಡಬಹುದಾಗಿದೆ.

೯. ಕಥನ ಕ್ರಮ, ಪ್ರಶ್ನೆ ಮಾದರಿಗಳೂ ಕೂಡ ಮಹಿಳಾಕಾವ್ಯ ಸಂವಹನಕ್ಕೆ ಬಳಸಲ್ಪಟ್ಟಿವೆ. ಪ್ರಕೃತಿ ವಿಸ್ಮಯವನ್ನು ಕೆದಕುವ ಮುಗ್ಧತೆಯಿಂದ ಪ್ರಾರಂಭಗೊಂಡು, ಮಹಿಳೆ ಸ್ವತಃ ತನ್ನ ಅಸ್ತಿತ್ವವನ್ನೇ ಪ್ರಶ್ನಿಸುವಂತಹ ಗಂಭೀರ ವಿಷಯದವರೆಗೆ ಪ್ರಶ್ನೆ ಮಾದರಿಯ ಹರುವು ಇದೆ. ಉತ್ತಮಪುರುಷ ಏಕವಚನದಲ್ಲಿ ಪ್ರಾರಂಭವಾಗುವ ಪರಿಚಯಾತ್ಮಕ ಅಥವಾ ಹೇಳಿಕೆಯ ಮಾದರಿ ಕೂಡ ಸಂವಹನ ತಂತ್ರಗಳಲ್ಲಿ ಅತಿ ವ್ಯಾಪಕವಾಗಿ ಬಳಕೆಯಾಗಿರುವ ಮತ್ತು ಇನ್ನೂ ಬಳಕೆಯಾಗುತ್ತಲೇ ಇರುವ ಕ್ರಮವಾಗಿದೆ.

೧೦. ಆಧುನಿಕ ಮಹಿಳಾಕಾವ್ಯದ ರಚನಾವಿನ್ಯಾಸ ಅಥವಾ ಶಿಲ್ಪದ ವಿನ್ಯಾಸವನ್ನು ಗುರುತಿಸುವಾಗ ನೀಳ್ಗವಿತೆಗಳು, ಹನಿಗವನಗಳು, ದ್ವಿಪದಿಗಳು ಕಾವ್ಯವಿನ್ಯಾಸದ ವೈಶಿಷ್ಟ್ಯತೆಯನ್ನು ಹೆಚ್ಚಿಸಿದ್ದರೂ ಕೂಡ ಸಾಮಾನ್ಯ ಗಾತ್ರದ ಅಂದರೆ ಮಧ್ಯಮ ಗಾತ್ರದ ರಚನೆಗಳಿಗೇ ಹೆಚ್ಚಿನ ಆದ್ಯತೆ ದೊರೆತಿದೆ. ಬಹುಪಾಲು ಮಹಿಳಾ ಕವಿಗಳು ಹನಿಗವನಗಳನ್ನು ಪ್ರತ್ಯೇಕ ವಿಭಾಗವಾಗಿಯೇ ತಮ್ಮ ಕಾವ್ಯದಲ್ಲಿ ಸೇರ್ಪಡೆಗೊಳಿಸಿದ್ದಾರೆ. ಇದು ಮುಖದಲ್ಲಿ ಬಿಂದಿಯನ್ನಿಟ್ಟು ಅಲಂಕರಿಸಿ ಕೊಂಡಂತಿರುತ್ತದೆ.

### ೮.೨. ಹೆಚ್ಚಿನ ಅಧ್ಯಯನದ ಸಾಧ್ಯತೆಗಳು

"ಆಧುನಿಕ ಮಹಿಳಾಕಾವ್ಯ: ಅಭಿವ್ಯಕ್ತಿಯ ವಿನ್ಯಾಸಗಳು" ಎಂಬ ವಿಷಯವನ್ನು ಕುರಿತು ಅಧ್ಯಯನ ಕೈಗೊಂಡಾಗ ಅಭಿವ್ಯಕ್ತಿಯ ವಿನ್ಯಾಸಗಳನ್ನು ಕೇಂದ್ರೀಕರಿಸಿ ಇನ್ನೂ ಹಲವಾರೂ ನೆಲೆಗಳಿಂದ ಅಧ್ಯಯನ ಮಾಡಬಹುದಾದ ಸಾಧ್ಯತೆಗಳು ಕಂಡುಬಂದಿದ್ದು ಅವುಗಳ ಕುರಿತು ಸೂಚನೆ ನೀಡಲಾಗಿದೆ.

೧. ಮಹಿಳಾಕಾವ್ಯದಂತೆಯೇ ಮಹಿಳಾ ಕಥನಕಾವ್ಯ, ಶಿಶುಸಾಹಿತ್ಯ, ಕತೆ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯಗಳ ಅಭಿವ್ಯಕ್ತಿ ವಿನ್ಯಾಸವನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದಾಗಿದೆ. ಪ್ರಕಾರಗಳ ಅನನ್ಯತೆಯ ಕಾರಣದಿಂದಾಗಿ ಅವು ಭಿನ್ನವಾಗುವ, ಸಾಮ್ಯಗೊಳ್ಳುವ ಕುರಿತು ತೌಲನಿಕ ಅಧ್ಯಯನ ಕೈಗೊಳ್ಳಬಹುದಾಗಿದೆ.

೨. ಅಕ್ಕಮಹಾದೇವಿಯಿಂದ ಪ್ರಾರಂಭಗೊಂಡು ಇಪ್ಪತ್ತನೇ ಶತಮಾನದ ಪೂರ್ವಾರ್ಧದವರೆಗೆ ಅನೇಕ ಮಹಿಳಾಕವಿಗಳು ಕಾವ್ಯರಚನೆ ಮಾಡಿದ್ದಾರೆ. ಬೇರೆಬೇರೆ ಕಾಲಘಟ್ಟಗಳಲ್ಲಿ ಕಾವ್ಯದ ಅಭಿವ್ಯಕ್ತಿಯ ವಿನ್ಯಾಸದಲ್ಲಾದ ಬದಲಾವಣೆಗಳನ್ನು ಕೇಂದ್ರೀಕರಿಸಿ ಅಧ್ಯಯನ ಕೈಗೊಳ್ಳ ಬಹುದಾಗಿದೆ.

೩. ಆಧುನಿಕ ಮಹಿಳಾಕಾವ್ಯದಲ್ಲಿ ವೈದೇಹಿ, ಪ್ರತಿಭಾ ನಂದಕುಮಾರ್, ಸವಿತಾ ನಾಗಭೂಷಣ, ಬಿ.ಟಿ. ಲಲಿತಾನಾಯಕ್, ರೂಪ ಹಾಸನ, ಎಚ್.ಎಲ್. ಪುಷ್ಪ, ತಾರಿಣಿ ಶುಭದಾಯಿನಿ

ಮುಂತಾದವರು ತಮ್ಮದೇ ವಿಶಿಷ್ಟ ನೆಲೆಯಲ್ಲಿ ಛಾಪು ಮೂಡಿಸಿದ್ದಾರೆ. ಈ ಪ್ರತಿಯೊಬ್ಬರ ಕಾವ್ಯದ ವಿನ್ಯಾಸವನ್ನು ಸ್ವತಂತ್ರವಾಗಿ ಅಧ್ಯಯನಕ್ಕೊಳಪಡಿಸಬಹುದಾಗಿದೆ.

೪. ಪ್ರತಿಯೊಂದು ಧೋರಣೆಯ ಹಿನ್ನೆಲೆಯಲ್ಲಿಯೂ ತಾತ್ವಿಕವಾದ ಕಾರಣವೊಂದು ಇರುತ್ತದೆಯೆಂದು ಗ್ರಹಿಸುವುದಾದರೆ ಮಹಿಳಾಕಾವ್ಯದ ಹಿಂದಿನ ತಾತ್ವಿಕತೆಯನ್ನೇ ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದಾಗಿದೆ.

೫. ಬಂಡಾಯ ದಲಿತ ಸಾಹಿತ್ಯ ಚಳವಳಿಗಳು ಮುನ್ನೆಲೆಯಲ್ಲಿರುವಾಗಲೇ ಮಹಿಳಾಕಾವ್ಯ ಕೂಡ ಮುಂಚೂಣಿಗೆ ಬರುವ ತವಕದಲ್ಲಿದ್ದಿತು. ಆದರೂ ತನ್ನದೇ ಅನನ್ಯತೆಯನ್ನು ಉಳಿಸಿಕೊಂಡಿರುವುದರ ಹಿಂದಿನ ಕಾರಣಗಳನ್ನು ಇನ್ನೂ ಆಳವಾಗಿ ಅಧ್ಯಯನಕ್ಕೊಳಪಡಿಸಬಹುದಾಗಿದೆ.

೬. ಮಹಿಳಾಕಾವ್ಯದಲ್ಲಿನ ಸಂವೇದನೆಗಳು ಮುಖ್ಯವಾಹಿನಿ ಪರಂಪರೆಯ ಸಾಹಿತ್ಯಕ್ಕಿಂತ ಭಿನ್ನವಾಗಿರುವ ಕುರಿತು ಇನ್ನೂ ಆಳವಾಗಿ ಅಧ್ಯಯನ ಮಾಡಬಹುದಾಗಿದೆ.

೭. ಮಹಿಳಾಕಾವ್ಯದಲ್ಲಿ ಬಳಕೆಯಾಗಿರುವ ಭಾಷಿಕ ವೈಶಿಷ್ಟ್ಯಗಳಾದ ಉಪಮೆ, ರೂಪಕ, ದೃಷ್ಟಾಂತ, ಪ್ರತಿಮೆಗಳನ್ನು ಸಾಂಸ್ಕೃತಿಕ ಭಾಷಾಶಾಸ್ತ್ರ, ಸಾಮಾಜಿಕ ಭಾಷಾಶಾಸ್ತ್ರ ಹಾಗೂ ರಾಚನಿಕ ಭಾಷಾಶಾಸ್ತ್ರಗಳ ಹಿನ್ನೆಲೆಯಿಂದ ಅಧ್ಯಯನ ಮಾಡಬಹುದಾಗಿದೆ.

೮. ಮಹಿಳಾಕಾವ್ಯದ ಸಂವಹನ ವಿಶೇಷತೆಯನ್ನು ಮುಖ್ಯವಾಹಿನಿ ಕಾವ್ಯದ ಸಂವಹನ ವಿಶೇಷತೆಗಳೊಂದಿಗೆ ತೌಲನಿಕ ಅಧ್ಯಯನಕ್ಕೊಳಪಡಿಸಬಹುದಾಗಿದೆ.

೯. ಸ್ತ್ರೀವಾದಿ ದೃಷ್ಟಿಕೋನದಿಂದಲೇ ಮಹಿಳಾ ಕಾವ್ಯಾಭಿವ್ಯಕ್ತಿ ವಿನ್ಯಾಸವನ್ನು ಅಧ್ಯಯನಕ್ಕೊಳಪಡಿಸುವ ಸಾಧ್ಯತೆಗಳೂ ಇವೆ.

ಭಾವನೆ, ಕಲ್ಪನೆ, ಅನುಭವಗಳನ್ನು ಹೊರಹಾಕಲು ಮನುಷ್ಯರು ಕಂಡುಕೊಂಡ ಸೃಜನಶೀಲ ಮಾರ್ಗಗಳಲ್ಲಿ ಕಾವ್ಯಕ್ಕೆ ಮಹತ್ವದ ಸ್ಥಾನವಿದೆ. ಅದರಲ್ಲೂ ಶತಶತಮಾನಗಳಿಂದ ಪುರುಷಪ್ರಧಾನ ವ್ಯವಸ್ಥೆಯ ಬಿಗಿಹಿಡಿತದಲ್ಲಿ ತನ್ನತನವನ್ನು ವ್ಯಕ್ತಪಡಿಸುವಲ್ಲಿದ್ದ ಮೂಕತನವನ್ನು ಮೀರುವ ಮಾರ್ಗವಾಗಿ ಮಹಿಳೆಗೆ ಸಹಕಾರಿಯಾಗಿದೆ. ಹೇಳದೆ ಬಿಟ್ಟಿರುವುದನ್ನೆಲ್ಲ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಹೊರಹಾಕಲು ಒದಗಿಬಂದ ಕಾವ್ಯಶಕ್ತಿಯನ್ನು ಅದರ ಎಲ್ಲ ಸಾಧ್ಯತೆಗಳಲ್ಲೂ ಬಳಸಿಕೊಂಡ ಕೀರ್ತಿಯೂ ಮಹಿಳಾಕಾವ್ಯದ್ದಾಗಿದೆ. ಮಹಿಳೆಯರಿಗೆ ಕಾವ್ಯದ ಅವಶ್ಯಕತೆ ವಿಸ್ತರಿಸಿದಂತೆ ಅಭಿವ್ಯಕ್ತಿ ವಿನ್ಯಾಸದಲ್ಲೂ ವಿಸ್ತಾರ, ವೈವಿಧ್ಯಗಳು ಕಾಣಿಸಿಕೊಳ್ಳುತ್ತಿವೆ. ಕಾವ್ಯ ಇದುವರೆಗೆ ಕಾಣದಿದ್ದ ಮಹಿಳಾ ಅನುಭವಕ್ಕೆ ತೆರೆದುಕೊಂಡಿರುವುದರಿಂದ ತನ್ನ ಸ್ವರೂಪದಲ್ಲಿ ನಾವೀನ್ಯತೆಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳುವ ಎಲ್ಲ ಸಾಧ್ಯತೆಗಳೂ ಗೋಚರಿಸುತ್ತಿವೆ.

◆◆

## ಅನುಬಂಧಗಳು

# ಅಭ್ಯಾಸ ಸೂಚಿ

೧. ಮೂಲ ಆಕರಗಳು

೨. ಪೂರಕ ಆಕರಗಳು

೩. ಲೇಖನಗಳು

# ಅಭ್ಯಾಸ ಸೂಚಿ

## ೧. ಮೂಲ ಆಕರಗಳು


೧. ಅಕ್ಷರ ಕೆ.ವಿ.(ಸಂ), **ಪದ್ಯದ ಮಾತು ಬೇರೆ**, ದೇಶಕಾಲ, ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೬.

೨. ಇಂದುಮತಿ ಲಮಾಣಿ, **ನನ್ನ ಸುತ್ತಲಿನ ಸತ್ಯಗಳು**, ರವಿಕಿರಣ ಪ್ರಕಾಶನ, ಬಾದಾಮಿ, ೨೦೦೬.

೩. ಉಷಾ ಸ., **ಈ ನೆಲದ ಹಾಡು**, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ, ೧೯೯೦.

೪. ಕಮಲಾ ಹೆಮ್ಮಿಗೆ(ಸಂ), **ಹನಿಹನಿ**, ಸಂಕ್ರಮಣ ಪ್ರಕಾಶನ, ಬೆಂಗಳೂರು, ೨೦೦೮.

೫. ಕವಿತಾ ರೈ : **ಹಕ್ಕಿ ಹರಿವ ನೀರು**, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೯.
: **ನೀರತೇರು**, ಅಭಿನವ ಪ್ರಕಾಶನ, ಬೆಂಗಳೂರು, ೨೦೦೫.

೬. ಗಿರಿಜಾಶಾಸ್ತ್ರಿ, **ಪುಸ್ತಕ ಮತ್ತು ನವಿಲುಗರಿ**, ಅಭಿನವ ಪ್ರಕಾಶನ, ಬೆಂಗಳೂರು, ೨೦೧೨.

೭ ಗೀತಾ ಹೆಗಡೆ, **ಅಕ್ಷರ ಚೈತನ್ಯ**, ಚೈತನ್ಯ ಪ್ರಕಾಶನ, ಬೆಂಗಳೂರು, ೨೦೦೦.

೮. ಗೀತಾ ವಸಂತ, **ಪರಿಮಳದ ಬೀಜ**, ಅಭಿನವ ಪ್ರಕಾಶನ, ಬೆಂಗಳೂರು, ೨೦೧೦.

೯. ಚೇತನಾ ತೀರ್ಥಹಳ್ಳಿ, **ಶಬರಿಯ ಅವಸರ**, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೧೦. ಛಾಯಾ ಭಗವತಿ, **ಪುಟಾಣಿ ಕೆಂಪು ಶೂ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೯.

೧೧. ಜ್ಯೋತಿ ಗುರುಪ್ರಸಾದ್ : **ಚುಕ್ಕಿ**, ಋಜುವಾತು ಪ್ರಕಾಶನ, ಬೆಂಗಳೂರು, ೨೦೦೩.
: **ಮಾಯಾಪೆಟ್ಟಿಗೆ**, ಅಧ್ಯಯನ ಮಂಡಲ, ಬೆಂಗಳೂರು, ೨೦೦೯.

೧೨. ತಾರಿಣಿ ಶುಭದಾಯಿನಿ ಆರ್.: **ತೋಡಿರಾಗ**, ಸದಾಸಿರಿ ಪ್ರಕಾಶನ, ಚಿತ್ರದುರ್ಗ, ೨೦೦೫.
: **ಚಿತ್ತಗ್ಲಾನಿಯ ಮಾತು**, ಅಕ್ಷರದಾಹ ಪ್ರಕಾಶನ, ಬೆಂಗಳೂರು, ೨೦೦೮.

೧೩. ತೇಜಶ್ರೀ ಜ.ನಾ., **ಉಸ್ರುಬುಂಡೆ**, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೧.

೧೪. ದೀಪಾ ಹಿರೇಗುತ್ತಿ, **ಪರಿಮಳದ ಹೂಗಳ ಮಧ್ಯೆ**, ಸುಮುಖ ಪ್ರಕಾಶನ, ಬೆಂಗಳೂರು, ೨೦೧೧.

೧೫. ದೀಪ್ತಿ ಭದ್ರಾವತಿ, **ಕಾಗದದ ಕುದುರೆ,** ವಿಸ್ಮಯ ಪ್ರಕಾಶನ, ಮೈಸೂರು, ೨೦೧೧.

೧೬. ಪವಿತ್ರ ಪ್ರಿಯಭಾಷಿಣಿ ಆರ್., **ನಕ್ಷತ್ರಕೆ ಪಾತಿ,** ಚಿನ್ಮೂಲಾದ್ರಿ ಪ್ರಕಾಶನ, ಬೆಂಗಳೂರು, ೨೦೦೭.

೧೭. ಪುಷ್ಪ ಎಚ್.ಎಲ್.(ಡಾ.) : **ಅಮೃತಮತಿಯ ಸ್ವಗತ,** ಅನ್ವೇಷಣೆ ಪ್ರಕಾಶನ, ಬೆಂಗಳೂರು, ೧೯೯೨.

: **ಲೋಹದ ಕಣ್ಣು,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೯.

೧೮. ಪೂರ್ಣಿಮಾ ಜಿ., **ಕತ್ತಲ ಇಬ್ಬನಿ, ಬಣ್ಣದ ಚಿತ್ತಾರ,** ಅಂಕಿತ ಪುಸ್ತಕ, ಬೆಂಗಳೂರು, ೨೦೧೧.

೧೯. ಪ್ರತಿಭಾ ನಂದಕುಮಾರ್, **ಕವಡೆಯಾಟ,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೮.

: **ರಸ್ತೆಯಂಚಿನ ಗಾಡಿ,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೧.

: **ಆಹಾ ಪುರುಷಾಕಾರಂ!,** ನೆಲಮನೆ ಪ್ರಕಾಶನ, ರಂಗನಾಥಪುರ, ೨೦೦೦.

: **ಅವರು ಪುರಾವೆಗಳನ್ನು ಕೇಳುತ್ತಾರೆ,** ಮಹಿಳಾ ಸಾಹಿತ್ಯಿಕಾ ಪ್ರಕಾಶನ, ಹುಬ್ಬಳ್ಳಿ, ೨೦೦೬.

: **ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೭.

೨೦. ಪ್ರೇಮಲೀಲ ಕೆ.ಆರ್., **ಭಾವಯಾನ,** ಸಂವಹನ ಪ್ರಕಾಶನ, ಮೈಸೂರು, ೧೯೯೯.

೨೧. ಬೆಳಗೆರೆ ಜಾನಕಮ್ಮ, **ಕಲ್ಯಾಣ,** ಕಾಮಧೇನು ಪ್ರಕಾಶನ, ಬೆಂಗಳೂರು, ೨೦೧೧.

೨೨. ಪ್ರಭಾವತಿ ಎಸ್.ವಿ. ಡಾ., **ಉಳಿದಿದ್ದು ಆಕಾಶ,** ಶುಭದ ಪ್ರಕಾಶನ, ಬೆಂಗಳೂರು, ೧೯೯೯.

೨೩. ಭಗವತಿ ಎಂ.ಆರ್., **ಏಕಾಂತದ ಮಳೆ,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೨೦೦೦.

೨೪. ಭಾಗ್ಯ ಜಯಸುದರ್ಶನ, **ಭಾವಸಿಂಚನ,** ಕಾರ್ತಿಕ ಎಂಟರ್‌ಪ್ರೈಸಸ್, ಬೆಂಗಳೂರು, ೨೦೧೧.

೨೫. ಮಾಲತಿ ಪಟ್ಟಣಶೆಟ್ಟಿ, **ನನ್ನ ಸೂರ್ಯ,** ನ್ಯೂವೇವ್ ಬುಕ್ಸ್, ಬೆಂಗಳೂರು, ೧೯೮೩.

೨೬. ಮಾಧವಿ ಭಂಡಾರಿ ಕೆರೆಕೋಣ, **ಹರಿದ ಸ್ಕರ್ಟಿನ ಹುಡುಗಿ,** ರಾಘವೇಂದ್ರ ಪ್ರಕಾಶನ, ಅಂಕೋಲ, ೨೦೧೧.

೨೭. ಮೀನಾ ಸದಾಶಿವ, **ಕೋಗಿಲೆಗೆ ಕಲಿಸಲಾರೆ,** ಸಂಕ್ರಮಣ ಪ್ರಕಾಶನ, ಬೆಂಗಳೂರು, ೧೯೯೭.

೨೮. ರಜಿಯಾ ಡಿ.ಬಿ., **ರಜಿಯಾ ಅವರ ಕವಿತೆಗಳು,** ಲೋಹಿಯಾ ಪ್ರಕಾಶನ, ಬೆಂಗಳೂರು, ೨೦೧೧.

೨೯. ರಶ್ಮಿ ಹೆಗಡೆ, **ಲೆಕ್ಕಕ್ಕೆ ಸಿಗದವರು,** ಅಭಿನವ ಪ್ರಕಾಶನ, ಬೆಂಗಳೂರು, ೨೦೦೯.

೩೦. ರಾಜ್ಯಶ್ರೀ ಎಚ್.ಎನ್., **ಕಾಡುವ ನೆನಪುಗಳು,** ಅಭಿನವ ಪ್ರಕಾಶನ, ಬೆಂಗಳೂರು, ೨೦೧೧.

೩೧. ರೂಪ ಹಾಸನ, **ಒಂದಿಷ್ಟು ಹಸಿಮಣ್ಣು,** ನೆಲಮನೆ ಪ್ರಕಾಶನ, ರಂಗನಾಥಪುರ, ಮಂಡ್ಯ, ೨೦೦೦.

: **ಬಾಗಿಲಾಚೆಯ ಮೌನ,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೫.

: **ಕಡಲಿಗೆಷ್ಟೊಂದು ಬಾಗಿಲು,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೧೦.

: **ಗಳಿಗೆಬಟ್ಟಲ ತಿರುವುಗಳಲ್ಲಿ,** ಸಿರಿವರ ಪ್ರಕಾಶನ, ಬೆಂಗಳೂರು, ೨೦೧೦.

೩೨. ರೂಪಶ್ರೀ ಎನ್.ಆರ್., **ಕನಸ ತುಂಬಿದ ಕವಿತೆ,** ಬೆನಕ ಬುಕ್ಸ್ ಬ್ಯಾಂಕ್, ಕೋಡೂರು, ಶಿವಮೊಗ್ಗ, ೨೦೧೨.

೩೩. ಲಲಿತಾನಾಯಕ್ ಬಿ.ಟಿ., **ನಂರೂಪ್ಲಿ,** 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೧೯೮೩.

೩೪. ಲಂಕೇಶ್ ಪಿ., **ಅಕ್ಷರ ಹೊಸ ಕಾವ್ಯ** (ಸಂಪಾದನೆ), ಚಿನ್ಮೂಲಾದ್ರಿ ಪ್ರಕಾಶನ, ಬೆಂಗಳೂರು, ೨೦೦೭.

೩೫. ವಿಜಯಾದಬ್ಬೆ, **ಇತಿಗೀತಿಕೆ,** ಶ್ರೀಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು, ೧೯೯೯.

೩೬. ವಿಜಯಾ ಸುಬ್ಬರಾಜ್ ಡಾ., **ಸಖ ಬಾ ಸಂಚಾರಕೆ,** ಸುಂದರ ಪ್ರಕಾಶನ, ಬೆಂಗಳೂರು, ೨೦೦೭.

೩೭. ವಿನಯಾ ಡಾ., **ಬಾಯಾರಿಕೆ,** ಲಡಾಯಿ ಪ್ರಕಾಶನ, ಗದಗ, ೨೦೦೨.

: **ನೂರುಗೋರಿಯ ದೀಪ,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೬.

೩೮. ವಿಭಾ, **ಜೀವಮಿಡಿತದ ಸದ್ದು,** ಸಂಚಯ ಪ್ರಕಾಶನ, ಬೆಂಗಳೂರು, ೨೦೦೬.

೩೯. ವೈದೇಹಿ, **ಪಾರಿಜಾತ,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೯.

: **ಹೂವಕಟ್ಟುವ ಕಾಯಕ,** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೨೦೧೧.

: **ವೈದೇಹಿ ಅವರ ಆಯ್ದಕವಿತೆಗಳು,** ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೭.

೪೦. ಶಿವರುದ್ರಪ್ಪ ಜಿ.ಎಸ್. ಮತ್ತು ಚನ್ನವೀರ ಕಣವಿ(ಸಂ), **ಎರಡು ದಶಕದ ಕವಿತೆ(೧೯೬೦–೧೯೮೦)** ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦.

: **ಚಿನ್ನದ ಗರೆ,** ಕರ್ನಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು, ೧೯೯೮.

೪೧. ಸರಸ್ವತಿ ದು., **ಜೀವಸಂಪಿಗೆ,** ಅಭಿನವ ಪ್ರಕಾಶನ, ಬೆಂಗಳೂರು, ೨೦೦೬.

೪೨. ಸವಿತಾ ನಾಗಭೂಷಣ : **ಹೊಳೆಮಗಳು,** ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ, ೧೯೯೬.

: **ಆಕಾಶಮಲ್ಲಿಗೆ,** ನೆಲಮನೆ ಪ್ರಕಾಶನ, ರಂಗನಾಥಪುರ, ೨೦೦೩.

: **ದರುಶನ,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೯.

೪೩. ಸರ್ವಮಂಗಳ ಚ., **ಅಮ್ಮನಗುಡ್ಡ,** ಋಜುವಾತು ಪ್ರಕಾಶನ, ಮೈಸೂರು, ೧೯೮೮.

೪೪. ಸಿದ್ದಯ್ಯ ಕೆ.ಬಿ., ಎಚ್. ಗೋವಿಂದಯ್ಯ, ನಟರಾಜ್ ಬೂದಾಳ್(ಸಂ), **ದಲಿತಕಾವ್ಯ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬.

೪೫. ಸುಕನ್ಯಾ ಮಾರುತಿ, **ನಾನೆಂಬ ಮಾಯೆ,** ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೦೭.

೪೬. ಸುಜಾತಾ ಚಲವಾದಿ, **ಕೊರಗು,** ದಲಿತ ಸಾಹಿತ್ಯ ಪರಿಷತ್ತು, ಗದಗ, ೨೦೧೧.

೪೭. ಸಂಧ್ಯಾದೇವಿ, **ಝುಳಕ್ಕೆ ಮುಖ ಬೆಳಗುತ್ತದೆ,** ಅಭಿನವ ಪ್ರಕಾಶನ, ಬೆಂಗಳೂರು, ೨೦೧೧

೪೮. ಸಿಂಧುಹೆಗಡೆ, **ನಗುತ್ತೇನೆ ಮರೆಯಲ್ಲಿ,** ಮಂಗಳ ಪ್ರಕಾಶನ, ಬೆಂಗಳೂರು, ೨೦೧೦.

೪೯. ಹೇಮಾ, **ವಿರಹೋತ್ಸವ,** ಕನ್ನಡ ಸಂಘ, ಶೇಷಾದ್ರಿಪುರಂ, ಕಾಲೇಜು, ಬೆಂಗಳೂರು, ೧೯೮೩.

## ೨. ಪೂರಕ ಆಕರಗಳು

೧. ಅಶೋಕ ಟಿ.ಪಿ. : **ಸಾಹಿತ್ಯ ಸಂಚಾರ,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೧೨.

: **ವೈದೇಹಿ ಕಥನ,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೧೩.

: **ಕಾವ್ಯಪ್ರೀತಿ,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೧೩.

೨. ಆಶಾದೇವಿ ಎಂ.ಎಸ್.: **ಸ್ತ್ರೀಮತವನುತ್ತರಿಸಲಾಗದೇ?,** ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬.

: **ನಡುವೆ ಸುಳಿವ ಆತ್ಮ,** ಅಹರ್ನಿಶಿ ಪ್ರಕಾಶನ, ೨೦೧೧.

೩. ಉಷಾರಾಣಿ ತೆಗ್ಗಿನಮಠ ಡಾ., **ಮಹಿಳಾ ಸಾಹಿತ್ಯ, ಅಭಿವ್ಯಕ್ತಿ ಕ್ರಮದ ತಾತ್ವಿಕ ಸ್ವರೂಪ,** ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಕೇಶವಭಟ್ಟ ಟಿ. ಪ್ರೊ., **ಕನ್ನಡ ಕನ್ನಡ ಸುವರ್ಣಕೋಶ,** ವಾಸನ್ಸ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೨.

೫. ಗೀತಾಪ್ರಸಾದ್ ಡಾ. ಮತ್ತು ಎಸ್. ಪ್ರಸಾದಸ್ವಾಮಿ ಡಾ., **ಅಸ್ಮಿತೆ,** ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೨೦೧೧.

೬. ಗೋಕಾಕ್ ವಿ.ಕೃ., **ಕಲಾಸಿದ್ಧಾಂತ,** ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೪.

೭. ಗೌರೀಶ ಕಾಯ್ಕಿಣಿ, **ಕಾವ್ಯವೆಂದರೇನು? ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೬.

೮. ತಿಪ್ಪೇರುದ್ರಸ್ವಾಮಿ ಎಚ್., **ತೌಲನಿಕ ಕಾವ್ಯ ಮೀಮಾಂಸೆ,** ಡಿವಿಕೆ ಮೂರ್ತಿ ಪ್ರಕಾಶನ, ಬೆಂಗಳೂರು, ೧೯೯೦.

೯. ದೇಶಪಾಂಡೆ ಜಿ.ಟಿ.(ಮೂಲ), ಎನ್. ಬಾಲಸುಬ್ರಹ್ಮಣ್ಯ(ಅನು), **ಅಭಿನವಗುಪ್ತ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦.

೧೦. ನಾಗಭೂಷಣಸ್ವಾಮಿ ಓ.ಎಲ್., **ವಿಮರ್ಶೆಯ ಪರಿಭಾಷೆ,** ಪರಿಸರ ಸಾಹಿತ್ಯ ಪ್ರಕಾಶನ, ೧೯೮೩, ಅಭಿನವ ಪ್ರಕಾಶನ, ೨೦೧೨.

೧೧. ನಾರಾಯಣ ಕೆ.ವಿ., **ಶೈಲಿಶಾಸ್ತ್ರ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮.

೧೨. ರಂಗಣ್ಣ ಎಸ್.ವಿ., **ಶೈಲಿ,** ೧. ೨. ೩. ಶಿವರಾಮ್ ಪ್ರಕಾಶಕರು, ಬೆಂಗಳೂರು, ೨೦೦೦.

೧೩. ರಾಘವೇಂದ್ರರಾವ್ ಎಚ್.ಎಸ್., **ಕಣ್ಣ ಹನಿಗಳೆ ಕಾಣಿಕೆ,** ಇಳಾ ಪ್ರಕಾಶನ, ಬೆಂಗಳೂರು, ೨೦೧೨.

೧೪. ರಾಮಚಂದ್ರ ಸಿ.ಎನ್., **ಕಾವ್ಯಸೃಷ್ಟಿಯ ಸ್ವರೂಪ,** 'ಆಶಯ ಆಕೃತಿ', ಅಭಿನವ ಪ್ರಕಾಶನ, ಬೆಂಗಳೂರು, ೧೯೯೫.

೧೫. ವೀರಣ್ಣ ಸಿ. ಡಾ., **ಕನ್ನಡ ಕಾವ್ಯ ಕಂಡ ಹೆಣ್ಣು,** ಕರ್ನಾಟಕ ಸಾಹಿತ್ಯ ಪರಿಷತ್ತು, ೨೦೧೦.

೧೬. ಶಾಸ್ತ್ರಿ ಪಿ.ವಿ., **ಸಾಹಿತ್ಯದಲ್ಲಿ ತತ್ವವಾದಗಳು,** ಸಮಾಜ ಪುಸ್ತಕಾಲಯ, ಧಾರವಾಡ, ೧೯೮೬.

೧೭. ಶಿವರುದ್ರಪ್ಪ ಜಿ.ಎಸ್., **ಕಾವ್ಯಾರ್ಥ ಪದಕೋಶ,** ಕಾಮಧೇನು ಪ್ರಕಾಶನ, ಬೆಂಗಳೂರು, ೧೯೯೦.

೧೮. ಶಂಕರ್ ಡಿ.ಎ., ಕೆ.ಎಸ್. ನಿಸಾರ್‌ಅಹಮದ್(ಪ್ರ.ಸಂ), **ದಶವಾರ್ಷಿಕ ವಿಮರ್ಶೆ(೧೯೭೪–೮೩),** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೬.

೧೯. ಶೇಷಗಿರಿರಾವ್ ಎಲ್.ಎಸ್. ಪ್ರೊ., **ಸುಭಾಷ್ ನಿಘಂಟು,** ಲಕ್ಷ್ಮಿಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು, ೨೦೦೯.

೨೦. ಶ್ರೀಮತಿ ಎಚ್.ಎಸ್. : **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

: **ಸ್ತ್ರೀವಾದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೨೧. ಸುಮಿತ್ರಾಬಾಯಿ ಬಿ.ಎನ್., **ಸರಹದ್ದುಗಳ ಆಚೆ–ಈಚೆ,** ಇಳಾ ಪ್ರಕಾಶನ, ಬೆಂಗಳೂರು, ೨೦೦೯.

೩. ಲೇಖನಗಳು

೧. ಆಮೂರ ಜಿ.ಎಸ್., **ಮಹಿಳಾಕಾವ್ಯ, ಸಾಧನೆ ಹಾಗೂ ಸಮಸ್ಯೆಗಳು, 'ಕೊರಳು-ಕೊಳಲು',** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೫.

೨. ರಾಮಲಿಂಗಪ್ಪ ಟಿ. ಬೇಗೂರು, **'ಕಾವ್ಯಕಾರಣ',** ಸಾಹಿತ್ಯ ಪುರವಣಿ, ಪ್ರಜಾವಾಣಿ ದಿನಪತ್ರಿಕೆ, ದಿ. ೬.೧.೨೦೧೩

೩. ರಾಮಸ್ವಾಮಿ ಡಿ.ಎಸ್., **ವರ್ತಮಾನದ ಕಿಡಕಿಯ ಮೂಲಕ ಆಶಯದ ಅಧ್ಯಾತ್ಮಕ್ಕೆ ಸಾಹಿತ್ಯ ಪುರವಣಿ,** ಪ್ರಜಾವಾಣಿ, ಸಂಚಿಕೆ, ೩೪, ದಿನಾಂಕ ೦೧.೧೨.೨೦೧೩.

೪. ಸುಮಿತ್ರಾಬಾಯಿ ಬಿ.ಎನ್., **ಬೊಗಸೆಯಲ್ಲಿ ಹೊಳೆ ನೀರು,** ಸಾಹಿತ್ಯ ಪುರವಣಿ ಪ್ರಜಾವಾಣಿ ದಿನಪತ್ರಿಕೆ ಸಂಚಿಕೆ-೧೯ ದಿನಾಂಕ ೦೫.೦೮.೨೦೧೨, ಸಂಚಿಕೆ-೨೦, ದಿನಾಂಕ ೦೨.೦೯.೨೦೧೨, ಸಂಚಿಕೆ-೨೧, ದಿನಾಂಕ ೦೭.೧೦.೨೦೧೨, ಸಂಚಿಕೆ-೨೨, ದಿನಾಂಕ ೦೪.೧೧.೨೦೧೨, ಸಂಚಿಕೆ-೨೩, ದಿನಾಂಕ ೦೨.೧೨.೨೦೧೨.

೫. ಸೋಮನಾಥ ಯಾಳವಾರ ಡಾ., **'ತೌಲನಿಕ ಕಾವ್ಯ ಮೀಮಾಂಸೆ' ಒಂದು ಸಮೀಕ್ಷೆ',** 'ಅಕ್ಷರ ಪ್ರೀತಿ', ಪ್ರಸಾರಾಂಗ, ಸ್ನಾತಕೋತ್ತರ ಅಧ್ಯಯನ ಹಾಗೂ ಸಂಶೋಧನಾ ಕೇಂದ್ರ, ಕರ್ನಾಟಕ ಕಾಲೇಜು, ಬೀದರ್, ೨೦೦೨.



